ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ

ಸಾಹಿತ್ಯ ಸಮಿತಿ ಪ್ರಕಟನೆಗಳು : ಸಂ : ೮

ಪ್ರಧಾನ ಸಂಪಾದಕರು :

**ಶ್ರೀ ಹು. ಫ. ಕಟ್ಟೀಮನಿ** ಬಿ. ಎ.; ಎಂ. ಎಲ್. ಸಿ.

---

—ಶ್ರೀ—

# ಬಸವಣ್ಣನವರ ವಚನಗಳು



ಪ್ರೊಫೆಸರ ಬಸವನಾಳ ಶಿವಲಿಂಗಪ್ಪನವರು ಎಂ. ಎ.

ಜನನ ಕ್ರಿ. ಶ. ೬-೧೧-೧೮೯೩ ಲಿಂಗೈಕ್ಯ ಕ್ರಿ. ಶ. ೨೩-೨-೧೯೫೧

ಶ್ರೀ

# ಬಸವಣ್ಣನವರ
# ಷಟ್‌ಸ್ಥಲದ ವಚನಗಳು

ಸಂಪಾದಕರು :

**ಶ್ರೀ ಬಸವನಾಳ ಶಿವಲಿಂಗಪ್ಪನವರು** ಎಂ. ಎ.

ಪ್ರಸ್ತಾವನೆ, ವಚನಗಳ ಅಕಾರಾದಿ, ಶಬ್ದಕೋಶ

ಇವುಗಳನ್ನು ಒಳಗೊಂಡುದು

—ಚಿತ್ರಗಳೊಡನೆ—



**ಸಾಹಿತ್ಯ ಸಮಿತಿ,**

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ

—೧೯೫೪—

# ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ

## ಸಾಹಿತ್ಯ ಸಮಿತಿ ಸದಸ್ಯರು

೧. **ಶ್ರೀ ಹುಚ್ಚಯ್ಯಸ್ವಾಮಿ ಫಕ್ಕೀರಯ್ಯಾಸ್ವಾಮಿ ಕಟ್ಟೀಮನಿ**
ಬಿ. ಎ., ಎಸ್. ಎಲ್. ಸಿ. ಕಾರ್ಯಾಧ್ಯಕ್ಷರು
ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ ಸಭಾಸದರು.

೨. **ಶ್ರೀ. ಬಸವಪ್ಪಾ ಮಲ್ಲಪ್ಪಾ ಶೀಂತ್ರಿ** ಬಿ. ಎ., ಬಿ. ಟಿ.
ಡೆಪ್ಯುಟಿ ಚನ್ನಬಸವಪ್ಪನವರ ಪುಸ್ತಕಾಲಯದ ವ್ಯವಸ್ಥಾಪಕರು.
ಗೌರವ ಕಾರ್ಯದರ್ಶಿಗಳು ಹಾಗೂ ಲೈಬ್ರೇರಿಯನ್

೩. **ಶ್ರೀ. ಮಲ್ಲನಗೌಡ ಸೋಮನಗೌಡ ಪಾಟೀಲ** ಬಿ.ಎ.ಎಲ್.ಎಲ್.ಬಿ.
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಗೌರವ ಕಾರ್ಯದರ್ಶಿಗಳು
(ಎಕ್ಸ್ ಆಫಿಶಿಯೋ) ಕೋಶಾಧ್ಯಕ್ಷರು

೪. **ಶ್ರೀ. ಗುರುಸಿದ್ಧಯ್ಯಸ್ವಾಮಿ ಅಡಿವಯ್ಯಸ್ವಾಮಿ ಹಿರೇಮಠ**
ನಿವೃತ್ತ ಡಿಸ್ಟ್ರಿಕ್ಟ ಡೆಪ್ಯೂಟಿ ಕಲೆಕ್ಟರ, ಧಾರಾಮಹಾಲ ಧಾರವಾಡ

೫. **ಶ್ರೀ. ವಿರುಪಾಕ್ಷಪ್ಪ ಶಿವಯೋಗಪ್ಪ ಬಸವನಾಳ** ಬಿ.ಎ.ಎಲ್‌ಎಲ್.ಬಿ.
ಚೇರಮನ್, ಕರ್ನಾಟಕ ಸೆಂಟ್ರಲ್ ಕೋಆಪರೇಟಿವ್ಹ ಬ್ಯಾಂಕ ಲಿಮಿಟೆಡ್
ಹಾಗೂ ಕರ್ನಾಟಕ ಕೋಆಪರೇಟಿವ್ಹ ಲಿಟರರಿ ಕಮಿಟಿ, ಧಾರವಾಡ

೬. **ಶ್ರೀ. ಗುರುಸಿದ್ದಪ್ಪಾ ಮಹಾಲಿಂಗಪ್ಪ ಮಿರ್ಜಿ** ಬಿ.ಎ.ಎಲ್‌ಎಲ್.ಬಿ.
ಅಡ್ವೊಕೇಟ, ಪ್ರಕಾಶಕರು: ಶ್ರೀ ಮಹಾಲಿಂಗ ಗ್ರಂಥ ಮಾಲಾ ಹುಬ್ಬಳ್ಳಿ

೭. **ಶ್ರೀ. ವೀರಭದ್ರಪ್ಪ ರುದ್ರಪ್ಪ ಕೊಪ್ಪಳ** ಎಂ. ಎ. ಬಿ. ಟಿ.
ಮುಖ್ಯಾಧ್ಯಾಪಕರು, ರಾಜಾ ಲಖಮಗೌಡ ಸರದೇಸಾಯಿ ಹಾಯಸ್ಕೂಲ

೮. **ಶ್ರೀ. ಪುರಾಣಿಕ ಬುದ್ಧಯ್ಯಸ್ವಾಮಿಗಳು** ತೇರದಾಳ
ಸಂಪಾದಕರು: ಶ್ರೀಮನ್ ನಿರಂಜನ ಜಗದ್ಗುರು ಗ್ರಂಥ ಮಾಲಾ.

೯. **ಪ್ರೊಫೆಸರ ಆರ್. ಸಿ. ಹಿರೇಮಠ** ಎಂ. ಎ
ರೀಡರ್, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

೧೦. **ಶ್ರೀ. ಬಸವರಾಜ ಚನ್ನಬಸವಾರ್ಯ ಹಿರೇಮಠ ಪಾಟೀಲ**
ಬಿ. ಎ. (ಆನರ್ಸ) ಫಾರೆಸ್ಟ ಕಂಟ್ರಾಕ್ಟರ, ಹುಬ್ಬಳ್ಳಿ

**ಶ್ರೀ ವೀರಭದ್ರಪ್ಪಾ ಮಹಾಲಿಂಗಪ್ಪಾ ಮುಲ್ಲಾಬಾದಿ** ದಾವಣಗೆರೆ
—ಪ್ರಚಾರಾಧಿಕಾರಿ—

# ಮೊದಲನೆಯ ಮುದ್ರಣದ ಮುನ್ನುಡಿ



ಬಸವಣ್ಣನವರ ವಚನಗಳ ಶುದ್ಧ ಮತ್ತು ಅಧಿಕೃತ ಸಂಸ್ಕರಣವನ್ನು ಪ್ರಕಟಿಸುವ ಕಾರ್ಯವನ್ನು ನಮ್ಮ ಸಾಹಿತ್ಯ ಸಮಿತಿಯ ಪರವಾಗಿ ಕೈಕೊಂಡು ಅನೇಕ ವರ್ಷಗಳಾದುವು. ತಾಡವಾಲೆಯ, ಕೈಬರೆಹದ, ಮತ್ತು ಮುದ್ರಿತ ಪ್ರತಿಗಳನ್ನು ಸಿಕ್ಕಷ್ಟು ಕಲೆಹಾಕಿ ಅವುಗಳನ್ನೆಲ್ಲಾ ವರ್ಗೀಕರಿಸಿ, ಪ್ರತಿಯೊಂದು ಮಾತೃಕೆಯನ್ನೂ ಲಕ್ಷ್ಯಪೂರ್ವಕವಾಗಿ ಪರಾಮರ್ಶಿಸಿ, ಪಾಠಾಂತರಗಳನ್ನು ಗುರುತಿಸಿ, ಅಚ್ಚಿಗಾಗಿ ಕರಡನ್ನು ಸಿದ್ಧಪಡಿಸಲು ದೀರ್ಘಕಾಲಾವಧಿ ಅನಿವಾರ್ಯವಾಗಿಯೇ ಬೇಕಾಯಿತು. ಓದುಗರ ಆತುರ-ಹಾರೈಕೆಗಳನ್ನು ಸಕಾಲದಲ್ಲಿ ಮನ್ನಿಸಲಾಗಲಿಲ್ಲವೆಂದು ವಿಷಾದವೆನಿಸಿದರೂ ಈಗಲಾದರೂ ಪ್ರಕಟನೆಗೆ ತಕ್ಕ ಸಮಯ ಒದಗಿತೆಂದು ನಮಗೆ ಸಂತೋಷವೆನಿಸುತ್ತಿದೆ.

ಈ ವಚನಗಳ ಎರಡು ಬೇರೆ ಬೇರೆ ಸಂಸ್ಕರಣಗಳನ್ನು ಪ್ರಕಟಿಸುವ ಉದ್ದೇಶವಿದೆ. ಒಂದು ಸಾಮಾನ್ಯ ಸಂಸ್ಕರಣ; ಇನ್ನೊಂದು ಗ್ರಂಥಾಲಯ ಸಂಸ್ಕರಣ. ಇದು ಸಾಮಾನ್ಯ ಸಂಸ್ಕರಣ. ಇದರಲ್ಲಿರುವ ವಿಷಯಗಳೆಲ್ಲ ಗ್ರಂಥಾಲಯ ಸಂಸ್ಕರಣದಲ್ಲಿ ಅಡಕವಾಗುವುವಲ್ಲದೆ ಬೇರೆ ಬೇರೆ ಕಡೆಗಳಿಂದ ಆಯ್ದ ( ಸುಮಾರು ೪೦೦ ) ಇನ್ನೂ ಹೆಚ್ಚಿನ ಬಸವಣ್ಣನವರ ವಚನಗಳೂ, ಮೂಲ ವಚನಗಳ ಪಾಠಾಂತರಗಳೂ, ಮತ್ತೆ ಕೆಲವು ಚಿತ್ರಗಳೂ ಸೇರ್ಪಡೆಯಾಗುವುವು.

ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟಿದಕ್ಕಾಗಿ ಧಾರವಾಡದ ರವೀಂದ್ರ ಮುದ್ರಣಾಲಯದ ಅಧಿಕಾರಿಗಳಿಗೆ ಋಣಿಯಾಗಿದ್ದೇವೆ. ಮುದ್ರಣದ ಪ್ರತಿಯೊಂದು ಉಪಕರಣದ ಬೆಲೆಯೂ ಮಿತಿಮೀರಿ ಏರಿರುವುದರಿಂದ ಈ ಪುಸ್ತಕದ ಕ್ರಯವನ್ನು ನಮ್ಮ ನಿರೀಕ್ಷಣೆಗಿಂತಲೂ ಹೆಚ್ಚಾಗಿ ಇಡಬೇಕಾದ ಪ್ರಸಂಗವುಂಟಾದುದಕ್ಕೆ ವಿಷಾದಿಸಬೇಕಾದಿದೆ. ಸಹೃದಯರಾದ ವಾಚಕರು

ನಮ್ಮೀ ಸಾಹಾಸಕ್ಕೆ ತಕ್ಕ ಪ್ರೋತ್ಸಾಹನವನ್ನಿತ್ತಲ್ಲಿ ಮುಂದಿನ ಸಂಸ್ಕರಣವನ್ನು ಇನ್ನೂ ಸುಧಾರಿಸಿ ಇನ್ನೂ ಸುಲಭ ಬೆಲೆಗೆ ಒದಗಿಸಲು ಸಿದ್ಧರಾಗಿರುವೆವು.

ಪ್ರಕಟನೆಯ ಕಾರ್ಯದಲ್ಲಿ ನೆರವಾದ ಎಲ್ಲ ಮಹನೀಯರಿಗೂ ಈ ಮೂಲಕ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಕೊಪ್ಪಳ ವೀರಭದ್ರಪ್ಪ
೨೨-೧೦-೧೯೫೧ ಪ್ರಕಾಶಕರು.

## ಎರಡನೆಯ ಮುದ್ರಣದ ಮುನ್ನುಡಿ

ಮೂರು ವರ್ಷಗಳ ಹಿಂದೆ ತ್ರಿವಿಧ ದಾಸೋಹಮೂರ್ತಿಗಳಾದ ಪೂಜ್ಯ ಶ್ರೀಮನ್ನಿರಂಜನ ಪ್ರಣವಸ್ವರೂಪ ಮೃತ್ಯುಂಜಯ ಮಹಾಸ್ವಾಮಿಗಳವರ ಅಮೃತ ಹಸ್ತದಿಂದ ಈ ಗ್ರಂಥವು ಪ್ರಕಟವಾಯಿತು. ಆ ಚಿರಸ್ಮರಣೀಯ ಸನ್ನಿವೇಶವು ಇತಿಹಾಸ ಪ್ರಸಿದ್ಧವಾದದು. ಸಾಹಿತ್ಯಪ್ರೇಮಿಗಳೂ ಸಮಾಜಾಭಿಮಾನಿಗಳೂ, ವಚನ ವಾಙ್ಮಯ ಅಭ್ಯಾಸಿಗಳೂ ತತ್ತ್ವಾನ್ವೇಷಣಪರರೂ ಇದನ್ನು ಆದರದಿಂದ ಸ್ವಾಗತಿಸಿದರು. ಮೊದಲನೆಯದಾಗಿ ಕನ್ನಡನಾಡಿನ ಸುಪ್ರಸಿದ್ಧ ವಿದ್ವಾಂಸರಾದ ಪ್ರೊಫೆಸರ್ ಬಸವನಾಳ ಶಿವಲಿಂಗಪ್ಪನವರ ಹೃದಯದಿಂದ ಸಂಸ್ಕಾರಹೊಂದಿ ಅವರ ಬುದ್ಧಿಶಕ್ತಿಯಿಂದ ಪರಿಷ್ಕೃತವಾಗಿರುವುದೆಂದೂ, ಎರಡನೆಯದಾಗಿ ಪ್ರಾಚೀನ ಗ್ರಂಥಗಳನ್ನೂ ಶಾಸ್ತ್ರೀಯ ಪದ್ಧತಿಯಂತೆ ಪ್ರಕಟಿಸುವುದರಲ್ಲಿ ಮೇಲ್ಮೆಯನ್ನು ಪಡೆದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯಸಮಿತಿಯವರ ಅಧಿಕೃತ ಸಂಸ್ಕರಣವೆಂದೂ, ವಿಸ್ತಾರವಾದ ಪ್ರಸ್ತಾವನೆ-ವಚನಗಳ ಅಕಾರಾದಿ-ಶಬ್ದಕೋಶವುಳ್ಳದ್ದೆಂದೂ-ಬಹುಬೇಗ ಜನಪ್ರಿಯವಾದುದರಿಂದ ಎರಡನೆಯ ಮುದ್ರಣಕ್ಕೆ ಅವಕಾಶ ಉಂಟಾಯಿತು. ಮುಖ್ಯವಾಗಿ ಶುದ್ಧಪಾಠಗಳುಳ್ಳದ್ದರಿಂದ ವಿದ್ಯಾರ್ಥಿಗಳಿಗೂ ಜಿಜ್ಞಾಸುಗಳಿಗೂ ಹೆಚ್ಚು ಉಪಯುಕ್ತವಾಗಿರುವುದು ಆನಂದದ ಹಾಗೂ ಅಭಿಮಾನದ ಸಂಗತಿಯಾಗಿದೆ.

ಈ ವಚನ ಗ್ರಂಥವನ್ನು ಕರ್ನಾಟಕ, ಮುಂಬೈ ಮೈಸೂರು ಪುಣೆ ಉಸ್ಮಾನಿಯಾ (ಹೈದರಾಬಾದ್) ವಿಶ್ವವಿದ್ಯಾಲಯದವರು, ಇಡಿಯಾಗಿಯೂ ಭಾಗ ಭಾಗವಾಗಿಯೂ- ಬಿ. ಎ., ಎಮ್. ಎ. ತರಗತಿಗಳ ಪರೀಕ್ಷೆಗೆ ಪಠ್ಯ ಪುಸ್ತಕವೆಂದು ನೇಮಿಸಿದುದಕ್ಕಾಗಿ—ಆಯಾ—ಕನ್ನಡ ಪಠ್ಯಪುಸ್ತಕ ಸಮಿತಿಯವರ ಉಪಕಾರ ಸ್ಮರಿಸದಿರಲಾರೆವು. ಈ ಗ್ರಂಥದ ಸಂಪಾದಕರಾದ ಲಿಂಗೈಕ್ಯ ಪ್ರೊಫೆಸರ್ ಬಸವನಾಳ ಶಿವಲಿಂಗಪ್ಪನವರು ತೋರಿದ ಮಾರ್ಗದಲ್ಲಿಯೇ ಎರಡನೆಯ ಮುದ್ರಣದ ಕಾರ್ಯವನ್ನು ನಿರ್ವಹಿಸಿದ್ದೇವೆ. ಶಬ್ದಕೋಶದಲ್ಲಿ ಕೆಲವು ಮಹತ್ವದ ಪದಗಳಿಗೆ ಅವರೇ ಬರೆದಿಟ್ಟಿದ್ದ ಹೆಚ್ಚಿನ ಅರ್ಥವನ್ನು ಈ ಮುದ್ರಣದಲ್ಲಿ ಸಮಾವೇಶ ಗೊಳಿಸಲಾಗಿದೆ.

ದಿನಾಂಕ ೨೨-೧೨-೧೯೫೪ ಬುಧವಾರ, ಪ್ರೊಫೆಸರ್ ಬಸವನಾಳ ಶಿವಲಿಂಗಪ್ಪನವರ ಲಿಂಗೈಕ್ಯ ದಿನಾಚರಣೆಯ ಮೂರನೆಯ ವಾರ್ಷಿಕ ಸಮಾರಂಭದ ಮುಖ್ಯ ಅತಿಥಿಗಳೂ ಹಾಗೂ ಶ್ರೀ ಬಸವಾದಿ ಪ್ರಮಥರ ಮಾರ್ಗಾನುವರ್ತಿಗಳೂ, ಕರ್ನಾಟಕ ವಿಶ್ವವಿದ್ಯಾನಿಲಯದ ಉಪಕುಲಪತಿಗಳೂ (ವ್ಹೈಸ್ ಚಾನ್ಸಲರ್) ಆದ ರ್‍ಯಾಂಗ್ಲರ್ ಡಿ. ಸಿ. ಪಾವಟೆ ಎಂ. ಎ. ( ಕ್ಯಾಂಟಬ್ ) ಅವರು ಈ ಎರಡನೆಯ ಮುದ್ರಣವನ್ನು ತಮ್ಮ ಅಮೃತ ಹಸ್ತದಿಂದ ಪ್ರಕಟಿಸಿದುದಕ್ಕಾಗಿ ಅವರಿಗೆ ಸಾಹಿತ್ಯ ಸಮಿತಿಯವರು ಕೃತಜ್ಞತೆಗಳನ್ನು ಸಮರ್ಪಿಸುತ್ತೇವೆ. ಎರಡನೆಯ ಮುದ್ರಣವನ್ನು ಸಕಾಲದಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟಿದ್ದಕ್ಕಾಗಿ ಧಾರವಾಡ ರವೀಂದ್ರ ಮುದ್ರಣಾಲಯದ ವ್ಯವಸ್ಥಾಪಕರಿಗೆ ಆಭಾರ ಸಲ್ಲಿಸುತ್ತೇವೆ.

ಸಾಹಿತ್ಯ ಸಮಿತಿ
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ
ಧಾರವಾಡ
೨೨-೧೨-೧೯೫೪

**ಶಿಂತ್ರಿ ಬಸವಪ್ಪ**
ಪ್ರಕಾಶಕರು.

# ಪ ರಿ ವಿ ಡಿ




ಪ್ರಸ್ತಾವನೆ ೧—೫೬

ಬಸವಣ್ಣನವರ ಷಟ್‌ಸ್ಥಳದ ವಚನಗಳು ೧—೨೫೬

೧. ಭಕ್ತಸ್ಥಳ ೧—೧೩೩

೨. ಮಾಹೇಶ್ವರ ಸ್ಥಳ ೧೩೪—೨೦೦

೩. ಪ್ರಸಾದಿ ಸ್ಥಳ ೨೦೧—೨೦೯

೪. ಪ್ರಾಣಲಿಂಗಿ ಸ್ಥಳ ೧೦೯—೨೨೪

೫. ಶರಣ ಸ್ಥಳ ೨೨೫—೨೪೪

೬. ಐಕ್ಯ ಸ್ಥಳ ೨೪೫—೨೫೩

೭. ಕೆಲವು ಹೆಚ್ಚಿನ ವಚನಗಳು ೨೫೪—೨೫೬

ವಚನಗಳ ಅಕಾರಾದಿ ೨೫೭—೨೭೨

ಶಬ್ದಕೋಶ ೧—೩೮

ತಪ್ಪು ಒಪ್ಪುಗಳು ೩೯—೪೦


---

ಚಿತ್ರಗಳು


ಪ್ರೊಫೆಸರ ಬಸವನಾಳ ಶಿವಲಿಂಗಪ್ಪನವರು

ಕೂಡಲ ಸಂಗಮ ಕ್ಷೇತ್ರದ ಮಂಟಪ ೧

ನಟೇಶನ ಕಂಚಿನ ಪ್ರತಿಮೆಯ ಛಾಯಾ ಚಿತ್ರ ೧೩೭

# ಪ್ರಸ್ತಾವನೆ*

## ೧

ಕನ್ನಡ ಸಾಹಿತ್ಯದ ಒಂದು ವಿಶಿಷ್ಟವಾದ, ಬಹು ಅಮೌಲ್ಯವಾದ ಭಾಗವೆಂದರೆ ವಚನಸಾಹಿತ್ಯ. ಈ ಬಗೆಯ ಸಾಹಿತ್ಯದಂತಹ ಉದಾಹರಣೆಗಳು ವಿರಳವಾಗಿ, ಕ್ವಚಿತ್ತಾಗಿ, ಬಿಡಿಬಿಡಿಯಾಗಿ, ಒಂದೆರಡು ಇತರ ಭಾಷೆಗಳ ಸಾಹಿತ್ಯಗಳಲ್ಲಿ ಸಿಕ್ಕಬಹುದಾದರೂ[೧], ವಚನಗಳು ಸಾಹಿತ್ಯದ ಒಂದು ಪ್ರಕಾರವಾಗಿ ನೇರ್ಪಟ್ಟುದು ಕನ್ನಡದಲ್ಲಿಯೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಅಂತೆಯೆ, ವಚನಸಾಹಿತ್ಯವು ಕನ್ನಡ ನುಡಿ ವಿಶ್ವಸಾಹಿತ್ಯಕ್ಕೆ ಕೊಟ್ಟ ಅಪೂರ್ವ ಕಾಣಿಕೆಯೆಂದು ಕನ್ನಡಿಗರ ಹೆಮ್ಮೆಪಡಬಹುದಾಗಿದೆ.

ಸಂಸ್ಕೃತದ ಹಿರಿಮೆ ಸಡಿಲಿ ಕನ್ನಡದ ಹೆಚ್ಚಳ ಬೆಳೆದುದು ಈ ವಚನಸಾಹಿತ್ಯದಿಂದ. ಪದ್ಯದ ವ್ಯಾಮೋಹ ಸರಿದು ಗದ್ಯಕ್ಕೆ ಪುರಸ್ಕಾರ ದೊರೆತುದು ಈ ವಚನಸಾಹಿತ್ಯದಿಂದ. ಬಹು ಕಾಲದಿಂದಲೂ ಪಂಡಿತರ ತುತ್ತಾಗಿದ್ದ, ವಿಶಿಷ್ಟವರ್ಗದವರ ಸೊತ್ತಾಗಿದ್ದ, ರಾಜ್ಯಲಕ್ಷ್ಮಿಯ ತೊತ್ತಾ

* ಈ ಪ್ರಸ್ತಾವನೆಯನ್ನು ಬರೆಯುವುದರಲ್ಲಿ ನಾವು ಜಯಕರ್ನಾಟಕ ಮಾಸ ಪತ್ರಿಕೆಯಲ್ಲಿ (ಸಪ್ಟೆಂಬರ ೧೯೪೩, ಜುಲೈ ೧೯೪೪ ಈ ಸಂಚಿಕೆಯಲ್ಲಿ) ಬರೆದ ಲೇಖನಗಳ ಮತ್ತು ಶ್ರೀ ಹಳಪೇಟಿ ಚಿಂತಾಮಣಿಯವರ "ಯುಗಪ್ರವರ್ತಕ ಬಸವಣ್ಣ" ಎಂಬ ಗ್ರಂಥಕ್ಕೆ ನಾವು ಬರೆದ ಮುನ್ನುಡಿಯ ಉಪಯೋಗವನ್ನು ಕೆಲವು ಮಾರ್ಪಾಡುಗಳೊಡನೆ ಮಾಡಿಕೊಂಡಿದ್ದೇವೆ.

೧ ಇಲ್ಲಿಂದ ಮುಂದೆ ಬರುವ ಕ್ರಮಾಂಕಗಳಿಗೆಲ್ಲ ಸರಿಹೊಂದುವ ಅಡಿಟಿಪ್ಪಣಿಗಳನ್ನು ಈ ಪ್ರಸ್ತಾವನೆಯ ಕೊನೆಗೆ ಮುದ್ರಿಸಲಾಗಿದೆ.

ಗಿದ್ದ ಸರಸ್ವತಿಯ ಸಂಸ್ಕೃತ ಭಂಡಾರವನ್ನು ಕಡೆಗಣಿಸಿ, ತಮ್ಮ ಅನು
ಭವದ ಕಮ್ಮಟದಲ್ಲಿಯೆ ಅಚ್ಚೊತ್ತಿದ ವಚನನಾಣ್ಯಗಳನ್ನು ಜನ
ಸಾಮಾನ್ಯರೆಲ್ಲರಲ್ಲಿ ಸಲುವಂತೆ ಹರಡಿಸಿದವರು ವಚನಕಾರರು. ದೇವ
ವಾಣಿಗೆ ಜನವಾಣಿಯಾಗುವುದು ಅನಾವಶ್ಯವಾದಾಗ, ಜನವಾಣಿಯನ್ನೆ
ದೇವವಾಣಿಯ ಪಟ್ಟಕ್ಕೇರಿಸಿದ ಪವಾಡ ವೀರಶೈವ ವಚನಕಾರರದು.

ವಚನಸಾಹಿತ್ಯ ಕಾಲಮಾನದಿಂದ ಬಹು ವಿಸ್ತಾರವಾಗಿದ್ದಂತೆ
ಸ್ಥೂಲಮಾನದಿಂದ ವಿಪುಲವೂ ಆಗಿದೆ. ವಚನಕಾರರ ವೈಯಕ್ತಿಕ
ಸ್ವಭಾವ ಅನುಭಾವ ದೃಷ್ಟಿಗಳಿಗನುರೂಪವಾಗಿ ಈ ಸಾಹಿತ್ಯದಲ್ಲಿ
ವೈವಿಧ್ಯವೂ ಬೇಕಾದಷ್ಟಿದೆ. ಈ ವಚನ ಸಾಹಿತ್ಯದ ಮೂಲವನ್ನು
ಸಂಶೋಧಿಸಲು ಹೊರಟ ಪಂಡಿತರಲ್ಲಿ ಕೆಲವರಿಗೆ ಅದರ ಉಗಮ ಬಸ
ವಣ್ಣನವರಿಗಿಂತಲೂ ಕಿಂಚಿತ್ ಪೂರ್ವವಾಗಿರಬಹುದೆಂಬ ಸಂದೇಹ
ವುಂಟಾಗಿದ್ದರೂ, ಆ ವಾಹಿನಿ ಕಣ್ಣಿಗೆ ಕಾಣುವನಿತು, ಹೆಸರು ಕೊಂಡುವ
ನಿತು ವಿಶಾಲವಾದುದು ಬಸವಣ್ಣನವರ ಕಾಲದಲ್ಲಿಯೆ, ಅವರ ಕೈವಾಡದ
ಫಲವಾಗಿಯೆ, ಎಂದೆನ್ನುವಲ್ಲಿ ಆವ ಸಂದೇಹವೂ ಇಲ್ಲ. ವಚನಸಾಹಿತ್ಯ
ದಲ್ಲಿ ಒಟ್ಟಾರೆ ಕಂಡುಬರುವ ಮುಖ್ಯ ಅಥವಾ ವಿಶೇಷ ಲಕ್ಷಣಗಳನ್ನೆಲ್ಲ
ಒಂದೆಡೆ ಕಾಣಬೇಕೆಂದರೆ, ಅವೆಲ್ಲ ಸಮಗ್ರವಾಗಿ ಗೋಚರವಾಗುವುದು
ಬಸವಣ್ಣನವರ ವಚನಗಳಲ್ಲಿಯೆ. ಬಸವಣ್ಣನವರ ವಚನಗಳಲ್ಲಿ ಮಿಡಿ
ಯುವ ಅವರ ವಾಣಿ ಅಮೃತವಾಣಿ: ಅಧರಕ್ಕೂ ಸಿಹಿ ಉದರಕ್ಕೂ ಸಿಹಿ;
ರಸಪರಿಪಾಕವೆಂದು ಅಮೃತ, ಶಾಶ್ವತಸಾಹಿತ್ಯವೆಂದೂ ಅಮೃತ! ಅಂತೆಯೆ
ವಚನ ವಾಙ್ಮಯದಲ್ಲಿ ಬಸವಣ್ಣನವರ ವಚನಗಳಿಗೆ ಮೊದಲೆಡೆ ಮೀಸ
ಲಾಗಿದ್ದರೆ ಅದೇನೂ ಅರಿದಲ್ಲ!

ಇತ್ತೀಚೆಗೆ ವಚನಸಾಹಿತ್ಯ ಕನ್ನಡ ನಾಡಿನಲ್ಲಿ ಎಲ್ಲ ಕಡೆಗೂ ಭರ
ದಿಂದ ಪ್ರಸಾರವಾಗತೊಡಗಿದೆ. ಕೆಲವರು ಬಸವಣ್ಣನವರು, ಪ್ರಭು
ದೇವರು, ಅಕ್ಕಮಹಾದೇವಿ ಮೊದಲಾದವರ ವಚನಗಳನ್ನು ನಿಚ್ಚ
ಪಾರಾಯಣ ಮಾಡುವ ಪರಿಪಾಠವನ್ನಿಟ್ಟುಕೊಂಡಿದ್ದಾರೆ. ಹಲವರು

ಮಹತ್ತ್ವಮವೆನಿಸಿದ ವಚನಗಳನ್ನು ಕಂಠಪಾಠಮಾಡಿ ಪ್ರಸಂಗವಿಶೇಷ ಗಳಲ್ಲಿ ಗಾದಿಯ ಮಾತುಗಳಂತೆ ಬಳಸುತ್ತಾರೆ. ಸಭೆ-ಸಮ್ಮೇಳನ ಸಮಾ ರಂಭಗಳಲ್ಲಿ, ಆರಂಭದಲ್ಲಿಯೊ ಮುಗಿತಾಯದಲ್ಲಿಯೊ, ವಚನಗಳನ್ನು ಸರಾಗ ವಾಗಿ ಹಾಡುವುದು ಕಾರ್ಯಕ್ರಮದ ಅವಶ್ಯವಾದ ಮಂಗಳಾಂಗವೆಂದು ಎಣಿಸಲಾಗಿದೆ. ಆಗಾಗ ಮಕ್ಕಳಿಗಾಗಿ "ವಚನಸ್ಪರ್ಧೆ" ಎಲ್ಲೆಲ್ಲಿಯೂ ನಡೆಯುತ್ತಿದೆ. ನಡುನಡುವೆ ರಸಿಕರಿಗಾಗಿ ಸುಪ್ರಸಿದ್ಧ ಗಾಯಕರ ವಚನ ಸಂಗೀತದ ಸವಿಗೇಳಿಕೆಗಳನ್ನು ಬಾನ್ದನಿ ಬಿತ್ತರಿಸುತ್ತಿದೆ. ಬಾಲಕರ ಕ್ರಮಿಕ ಪುಸ್ತಕಗಳಲ್ಲಿ, ಪ್ರೌಢವಿದ್ಯಾರ್ಥಿಗಳ ಪಠ್ಯಪುಸ್ತಕಗಳಲ್ಲಿ ವಚನ ಸಂಕಲನಗಳು ಸೇರ್ಪಡಿಯಾಗುತ್ತಿವೆ. ಸಾಮಾನ್ಯ ವಾಚಕರ ಸೌಕರ್ಯ ಕ್ಕಾಗಿ ವಚನಗಳ-ಚಿಕ್ಕಪುಟ್ಟ ಸಂಗ್ರಹಗಳು ಹಲವಾರು ಪ್ರಸಿದ್ಧವಾಗುತ್ತ ಲಿವೆ. ಪಂಡಿತರೂ ವಿಮರ್ಶಕರೂ ಸಹೃದಯರೂ ವಚನ ಸಾಹಿತ್ಯವನ್ನು ಅರೆದೊರೆದು ತಿರುಳನ್ನು ತೆಗೆದು ವಿಮರ್ಶನ ಗ್ರಂಥಗಳನ್ನು ಪ್ರಕಟಿಸ ತೊಡಗಿದ್ದಾರೆ. ಇದೆಲ್ಲ ಆಗಬೇಕಾದ ಕಾರ್ಯ, ಅಭಿಮಾನದ ಮಾತು, ಸಂತೋಷದ ಸಂಗತಿ.

ವಚನ ಸಾಹಿತ್ಯ ಈ ತೆರನಾಗಿ ಭರದಿಂದ ಪ್ರಸಾರವಾಗುತ್ತಿರುವ ಈ ಕಾಲದಲ್ಲಿ ಅಶುದ್ಧವಾದ, ಅಪಾರ್ಥವಾಗುವ ಇಲ್ಲವೆ ಸಂದಿಗ್ಧಾರ್ಥಕ್ಕೆಡೆ ಗೊಡುವ ವಚನಪಾಠಗಳನೇಕ ಬಳಕೆಯಲ್ಲಿ ಬರುವ ಸಂಭವ ಹೆಚ್ಚಾಗಿದೆ; ಅದೇಕೆ, ಅಂತಹ ಪಾಠಗಳು ಎಷ್ಟೋ ಈಗಾಗಳೆ ಪ್ರಚಾರಗೊಂಡಿವೆ. ಈ ಅನಿಷ್ಟವನ್ನು ಸಕಾಲದಲ್ಲಿ ತಡೆದು, ಪರಿಶೋಧಿತವಾದ ಸಾರ್ಥಕ ವಾದ ಮೂಲಪಾಠಗಳೆ ಪ್ರಚಾರಗೊಳ್ಳುವಂತೆ ಪ್ರಯತ್ನಮಾಡುವುದು ಸಾಹಿತ್ಯಾಭಿಮಾನಿಗಳ ಆದ್ಯಕರ್ತವ್ಯವಾಗಿದೆ. ವ್ಯಾಕರಣ ದೃಷ್ಟಿಯಿಂದ ತಪ್ಪೆಂದು ತೋರಿದ ಎಡೆಗಳಲ್ಲಿ, ಅರ್ಥಕ್ಕೆ ಬಾಧೆ ಬರುವ ಕಡೆಗಳಲ್ಲಿ ತಿದ್ದುಪಾಟು ಮಾಡುವ ಪ್ರಯತ್ನ ಈಗಾಗಳೆ ನಡೆದುದು ಅಲ್ಲಲ್ಲಿ ಕಂಡು ಬರುತ್ತಿದೆ. ಇದೊಂದು ಶುಭಲಕ್ಷಣವೇ ಆದರೂ, ಮೂಲ ಮಾತೃಕೆಗಳ ಆಧಾರವಿಲ್ಲದೆ, ಇತರ ವಚನಗಳ ನೆರವಿಲ್ಲದೆ, ಸಂಶೋಧನದ ಅನುಭವ

ವಿಲ್ಲದೆ ಬರಿಯ ಊಹೆಯಿಂದ ತಮಗೆ ಸರಿಗಂಡ ತೆರದಲ್ಲಿ ತಿದ್ದುಪಾಟು ಮಾಡುವುದು ಸಾಹಸದ ಕೆಲಸ, ಪರಿಣಾಮದಲ್ಲಿ ಅಸಮರ್ಪಕ, ಬಹು ದಿವಸ ನಿಲ್ಲಲಾರದೆಂದು ಮತ್ತೆ ಬೇರೆ ಹೇಳಬೇಕಾಗಿಲ್ಲ. ಅಲ್ಲದೆ, ಒಂದೇ ವಚನವನ್ನು ಬೇರೆ ಬೇರೆಯವರು ತಮತಮಗೆ ಉಚಿತಕಂಡ ರೀತಿಯಲ್ಲಿ ತಿದ್ದುವುದರಿಂದ 'ಅನವಸ್ಥೆ'ಯುಂಟಾಗುವುದೆಂಬುದನ್ನೂ ನೆನಪಿಡಬೇಕಾದುದು. ಇದೂ ಅಲ್ಲದೆ, ವಚನಕಾರರ ಮನದಾಶಯವು ಸರಿಯಾಗಿ ಅಸಂದಿಗ್ಧವಾಗಿ ಹೊರಹೊಮ್ಮುವಂತೆ ವಚನಗಳು ಸ್ಫುಟವಾಗಿ ತಕ್ಕ ವಿರಾಮ ಚಿಹ್ನಗಳೊಡನೆ ಅಂದವಾಗಿ ಮುದ್ರಿತವಾಗಿ ಪ್ರಚಾರವಾಗುವುದೂ ಅಗತ್ಯದ ಮಾತಾಗಿದೆ. ಈ ದೃಷ್ಟಿಯಿಂದ ವಿಚಾರಿಸಿದಾಗ ವಚನಸಾಹಿತ್ಯ ಪ್ರಕಟವಾಗತೊಡಗಿ ಬಹುಕಾಲ ಸಂದಿದ್ದರೂ, ಪ್ರಸಿದ್ಧ ವಚನಕಾರರ ವಚನಗಳು ಹಲವು ಸಂಸ್ಕರಣಗಳನ್ನು ಕಂಡಿದ್ದನ್ದರೂ, ಅವುಗಳಲ್ಲಿ ಅಸಂಖ್ಯ ಪಾಠದೋಷಗಳೂ ಅನೇಕ ಅರ್ಥಸಂದೇಹಗಳೂ ಇನ್ನೂ ಗೋಚರವಾಗುತ್ತಿರುವುದು ಬಹು ವಿಷಾದಕರವಾದ ಸಂಗಯಾಗಿದೆ.

ಪ್ರಾಚೀನಸಾಹಿತ್ಯವನ್ನು ಪ್ರಕಟಮಾಡುವ ಹೊಸತರಲ್ಲಿ ಈಗ ದೊರೆಯುವ ಹಲವು ಸೌಲಭ್ಯ ಸೌಕರ್ಯಗಳು ಉಪಲಬ್ಧವಿರಲಿಲ್ಲವೆಂಬ ಮಾತು ಒಪ್ಪತಕ್ಕುದೇ. ಆ ಕಾಲದಲ್ಲಿ ಈ ಕಾರ್ಯಕ್ಕೆ ಕೈಹಾಕಿದವರಿಗೆ ಸಾಕಷ್ಟು ಒಳ್ಳೆಯ ಹಸ್ತಲಿಖಿತ ಪ್ರತಿಗಳ ಅಭಾವವೂ ಇದ್ದಿತಲ್ಲದೆ, ಆಯಾ ಕಾಲದ ಸಾಹಿತ್ಯದ ಆಳವಾದ ಪರಿಚಯವುಳ್ಳವರ, ಭಾಷಾಪಾಂಡಿತ್ಯವುಳ್ಳವರ, ತುಲನಾತ್ಮಕ ವಿಮರ್ಶನಶಕ್ತಿಯುಳ್ಳವರ, ಪ್ರಾಚೀನ ಸಾಹಿತ್ಯ ಸಂಪಾದನೆಯ ಕಾರ್ಯದಲ್ಲಿ ಸಾಕಷ್ಟು ಕೃಷಿಯುಳ್ಳವರ ಸಾಹಾಯ್ಯದ ಕೊರತೆಯೂ ಇದ್ದಿತು. ಹೇಗಾದರೂ ಆಗಲಿ, ಒಮ್ಮೆ ಮುದ್ರಿತವಾಗಿ ಹೊರಬಿದ್ದರಾಯಿತು; ವಿದ್ವಜ್ಜನರ ಅಭ್ಯಾಸ ವಿಮರ್ಶೆಗಳಿಗೆ ಸಿಕ್ಕಿ, ಯಥಾವಕಾಶವಾಗಿ ಶುದ್ಧ ಸಂಸ್ಕರಣಗಳಿಗೆ ಮಾರ್ಗವಾಗಬಹುದು— ಎಂಬ ಸದಿಚ್ಛೆಯಿಂದಲೆ ಪ್ರಾಚೀನ ಸಾಹಿತ್ಯವನ್ನು ಪ್ರಕಟಿಸುವ ಸಾಹಸಕ್ಕೆ ಕೈಹಾಕಿದರು ಆ ಕಾಲದ ಸಾಹಿತ್ಯಪ್ರೇಮಿಗಳು. ಅವರ ಕಾರ್ಯ

ಅಪೂರ್ಣ, ಅತೃಪ್ತಿಕರ ಎಂದು ಮುಂತಾಗಿ ತೆಗಳದೆ, ಅವರ ಸಾಹಿತ್ಯ ಸೇವೆಗಾಗಿ ಈ ಕಾಲದವರಾದ ನಾವು ಅವರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಯನ್ನು ಸಲ್ಲಿಸುವುದು ನಮ್ಮ ಕರ್ತವ್ಯವಾಗಿದೆ.

ಆದರೆ, ಈಗ ಸಾಹಿತ್ಯಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿಯಾಗಿದೆ; ಪರಿಸ್ಥಿತಿ ಬಹುಮಟ್ಟಿಗೆ ಸುಧಾರಿಸಿದೆ. ಇದರಿಂದಾಗಿ ಇತ್ತೀಚೆಗೆ ಜನರ ಮೆಚ್ಚುಗೆಯನ್ನು ಪಡೆದ ಪ್ರಾಚೀನ ಸಾಹಿತ್ಯ ಗ್ರಂಥಗಳನ್ನು ಮತ್ತೆ ನೂತನವಾಗಿ ಸಂಪಾದಿಸುವ ಕಾರ್ಯ ಅನೇಕ ಕಡೆಗಳಲ್ಲಿ ಭರದಿಂದ ನಡೆದಿದೆ. ಈ ಮಹತ್ತರವಾದ ಕಾರ್ಯಕ್ಕೆ ವಿಶ್ವವಿದ್ಯಾನಿಲಯಗಳೂ ಸಾಹಿತ್ಯ ಸಂಘಗಳೂ ಎಲ್ಲಂದದ ನೆರವನ್ನು ನೀಡಲನುವಾಗಿವೆ. ಈ ನೂತನ ಪರಿಸ್ಥಿತಿಗನುಸಾರವಾಗಿ ವಚನ ಸಾಹಿತ್ಯವನ್ನೂ ಮತ್ತೆ ಅಧಿಕೃತವಾಗಿ ಪರಿಷ್ಕರಿಸುವ ಕಾರ್ಯವನ್ನು ಕೈಕೊಳ್ಳುವುದು ಆವಶ್ಯಕವೆನಿಸುವದರಲ್ಲಿ ಸಂದೇಹವಿಲ್ಲ.

ಮುದ್ರಣಕಲೆ ಅನೇಕ ಶತಮಾನಗಳಿಂದಲೂ ಬಳಕೆಯಲ್ಲಿದ್ದ ಇಂಗ್ಲಂಡಿನಂತಹ ಪಾಶ್ಚಾತ್ಯ ದೇಶಗಳಲ್ಲಿ ಶೇಕ್ಸ್ಪಿಯರನಂತಹ ಮಹಾ ಕವಿಯ ಕೃತಿಗಳು ಕವಿಯ ಜೀವಿತಕಾಲದಲ್ಲಿಯೇ ಮುದ್ರಿತವಾಗಿ ಪ್ರಸಾರವಾಗಿದ್ದರೂ, ಆ ಮುದ್ರಣಕಾರ್ಯ ಕವಿಯ ಪ್ರತ್ಯಕ್ಷ ನೇತೃತ್ವದಲ್ಲಿ ನಡೆಯಲಿಲ್ಲೆಂಬೊಂದು ಕಾರಣಕ್ಕಾಗಿ—ಸಾಮಾನ್ಯ ಓದುಗರಿಗೆ ಹೇಗಾದರೂ ಆಗಲಿ—ಪಂಡಿತರಿಗೆ ಮತ್ತು ಅಭ್ಯಾಸಿಗಳಿಗೆ ಮಾತ್ರ ಆ ಮೂಲ ಮುದ್ರಣಗಳು ಅಸಮರ್ಪಕವೆಂದೇ ಗೃಹೀತವಾಗಿವೆ. ಕವಿಯು ಕಾಲವಾದಂದಿನಿಂದ ಮೂರು ಶತಮಾನಕಾಲ ಅನೇಕ ಸೂಕ್ಷ್ಮ ವಿಮರ್ಶಕರ ಮತ್ತು ಉದ್ದಾಮ ಪಂಡಿತರ ಒಂದು ದೀರ್ಘ ಪರಂಪರೆಯೇ ಏರ್ಪಟ್ಟಿದ್ದರೂ, ಅವರೆಲ್ಲರೂ ಆಗಾಗ ಅನೇಕ ಬಗೆಯ ತಿದ್ದುಪಡಿಗಳನ್ನು ಸೂಚಿಸುತ್ತಲೂ ಕೈಕೊಳ್ಳುತ್ತಲೂ ಬಂದುದು ಕಂಡು ಬರುತ್ತಿದ್ದರೂ, ಅದಷ್ಟು ಶುದ್ಧಪಾಠಗಳನ್ನು ಒದಗಿಸುವ ದೃಷ್ಟಿಯಿಂದ ನೂತನ ಸಂಸ್ಕರಣಗಳು ಈಗಲೂ ಪ್ರಕಟವಾಗುತ್ತಿರುವುದು ಆಂಗ್ಲಸಾಹಿತ್ಯಾಭ್ಯಾಸಿಗಳಿಗೆ ತಿಳಿದ ಮಾತಾಗಿದೆ.

ಮುದ್ರಣಕಲೆ ಪ್ರಸಾರವಾಗುವ ಎಷ್ಟೋ ಶತಮಾನಗಳ ಮುಂಚೆಯೆ ಸಾಹಿತ್ಯರಚನೆ ನಡೆಯುತ್ತಿದ್ದ ನಮ್ಮ ದೇಶದಲ್ಲಿ ಕೈ ಬರೆಹದ ಪ್ರತಿಗಳನ್ನು ಅನುಸರಿಸಿಯೆ ಪ್ರಾಚೀನ ಸಾಹಿತ್ಯವನ್ನು ಪ್ರಕಟಿಸಬೇಕಾದುದು ಅನಿವಾರ್ಯವಾಗಿರುವುದರಿಂದ ಕಾಲಕಾಲಕ್ಕೆ ನವೀನ ಸಂಸ್ಕರಣಗಳನ್ನು ಕೈಕೊಳ್ಳುವುದು ಆವಶ್ಯಕವೆಂದೆನಿಸುವುದು ಸ್ವಾಭಾವಿಕವೇ ಸರಿ.

ಈ ಎಲ್ಲ ವಿಚಾರಗಳನ್ನು ಮನದಂದು ಸಾಹಿತ್ಯಪ್ರೇಮಿಗಳ ಬಯಕೆಗನುರೂಪವಾಗಿ ವಚನ ಸಾಹಿತ್ಯವನ್ನು ಸಶಾಸ್ತ್ರೀಯವಾಗಿ ಪುನಃ ಸಂಸ್ಕರಿಸುವ ಹೊಣೆಯನ್ನು ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಈಗ ಕೆಲಕಾಲದಿಂದ ಹೊತ್ತುಕೊಂಡು ಈ ದಿಶೆಯಲ್ಲಿ ಕಾರ್ಯಪ್ರವೃತ್ತವಾಗಿದೆ. ಬಸವಣ್ಣನವರ ವಚನಗಳ ಈ ಸಂಸ್ಕರಣ ಸಾಹಿತ್ಯ ಸಮಿತಿಯ ಪರಿಶ್ರಮದ ಪ್ರಥಮ ಫಲವಾಗಿದೆ.

## ೨

ಪ್ರಾಚೀನ ಸಾಹಿತ್ಯದ ಸಂಪಾದನ ಕಾರ್ಯದಲ್ಲಿ ತೊಡಕುಗಳಿಷ್ಟಿವೆ ಎಂಬುದು ಆ ಕ್ಷೇತ್ರದಲ್ಲಿ ದುಡಿದವರಿಗೆಲ್ಲ ಅನುಭವಕ್ಕೆ ಬಂದ ಸಂಗತಿಯಾಗಿದೆ. ಮುದ್ರಣಗೋಸುಗ ಪರಿಷ್ಕೃತ ಪ್ರತಿಯನ್ನು ಸಿದ್ಧಪಡಿಸುವುದಕ್ಕೆ ಆಯಾ ಕೃತಿಯ ಕೈಬರೆಹದ ಪ್ರತಿಗಳು ಆವಶ್ಯಕ. ಆದರೆ ಅಂತಹ ಕೈಬರೆಹದ ಪ್ರತಿಗಳು ಗ್ರಂಥಕರ್ತರಿಂದಲೆ ಬರೆದುವು ದುರ್ಲಭವಾದುದರಿಂದ ಇತರರು ಬರೆದಿಟ್ಟುವುಗಳನ್ನೆ ಅವಲಂಬಿಸಬೇಕಾಗುವುದು. ಗ್ರಂಥಕರ್ತರ ಕಾಲದಿಂದ ಇವು ದೂರವಾಗಿದ್ದಷ್ಟು ಮೂಲಗ್ರಂಥದಿಂದ ಹೆಚ್ಚು ಹೆಚ್ಚು ಭಿನ್ನವಾಗುತ್ತ ಹೋಗುವುದೆ ಸಂಭವನೀಯ. ಅಲ್ಲದೆ, ಇಂತಹ ಪ್ರತಿಗಳನ್ನು ಮಾಡಿದವರಿಗೆ ಕೇವಲ ವರ್ಣಜ್ಞಾನದ ಹೊರತು ಹೆಚ್ಚಿನ ತಿಳಿವಳಿಕೆಯಿದ್ದುದು ಕಂಡುಬರುವುದಿಲ್ಲ. ಭಾಷಾಜ್ಞಾನ, ವ್ಯಾಕರಣಜ್ಞಾನ, ವಿಷಯಜ್ಞಾನ ಮುಂತಾದ ಹೆಚ್ಚಿನ, ಆದರೂ ಆವಶ್ಯಕವಾದ, ಜ್ಞಾನವುಳ್ಳ ಪಂಡಿತರು ಪ್ರತಿಮಾಡುವ ಕಾರ್ಯಕ್ಕೆ ಆ ಕಾಲದಲ್ಲಿ ಕೈಹಾಕುತ್ತಿದಿಲ್ಲವೆಂದೆ ತೋರುತ್ತಿದೆ ಇದರಿಂದಾಗಿ ಹಿಂದಣ ಕೈಬರೆ

ಹವ ಪ್ರತಿಗಳಲ್ಲಿ ಅಕ್ಷರಸ್ಖಾಲಿತ್ಯ, ಶಬ್ದಪಾತ, ಪೌನರುಕ್ತ್ಯ ಮುಂತಾದ ಹಲವು ಬಗೆಯ ದೋಷಗಳು ತಲೆಹಾಕಿರುವುದು ಸಾಮಾನ್ಯವಾಗಿದೆ. ಅಂತೆಯೇ ಒಂದೆರಡು ಕೈಬರೆಹದ ಪ್ರತಿಗಳು ಸಾಹಾಯ್ಯದಿಂದ ಪ್ರಾಚೀನ ಗ್ರಂಥಗಳ ಸಂಸ್ಕರಣ ಮಾಡುವ ಕಾರ್ಯ ಪ್ರಯಾಸಕರವೂ ಅತೃಪ್ತಿಕರವೂ ಆಗಿರುವುದೆಂಬುದು ಅನುಭವದ ಸಂಗತಿಯಾಗಿದೆ

ಆದುದರಿಂದ ಪ್ರಾಚೀನ ಸಾಹಿತ್ಯದ ಆವುದೊಂದು ಗ್ರಂಥವನ್ನು ಸಮರ್ಪಕವಾಗಿ ಪರಿಷ್ಕರಿಸಬೇಕಾದರೆ ಅದರ ಕೈಬರೆಹದ ಪ್ರತಿಗಳು ಎಷ್ಟು ಹೆಚ್ಚು ಸಿಕ್ಕುವುವೊ ಅಷ್ಟು ಒಳ್ಳೆಯದು. ಅದರಲ್ಲಿಯೂ ಇತ್ತೀಚಿನವಾದ ಕಾಗದ ಪ್ರತಿಗಳಿಗಿಂತ ತಾಳೆವೋಲೆಯ ಪ್ರತಿಗಳು ಹೆಚ್ಚು ವಿಶ್ವಸನೀಯವಾದುವು. ಒಂದು ಗ್ರಂಥದ ಸಂಪಾದಕ್ಕಾಗಿ ಕಲೆಹಾಕಿದ ಪ್ರತಿಗಳನ್ನು ಅವುಗಳಲ್ಲಿ ಕಂಡುಬರುವ ಹೋಲಿಕೆ-ಭಿನ್ನತೆಗಳನುಸಾರವಾಗಿ ಬೇರೆ ಬೇರೆಯಾಗಿ ವರ್ಗೀಕರಿಸಬೇಕಾಗುವುದು. ಹೋಲಿಕೆ ಹೆಚ್ಚಾಗಿದ್ದುವುಗಳಲ್ಲಿಯೂ ಅಂತಹ ಹೋಲಿಕೆಗಳಿಗೆ ಆ ಪ್ರತಿಗಳಿಗೆಲ್ಲ ಮಾತೃಕೆ ಒಂದೇಯಾದುದೆ ಕಾರಣವಾಗಿರಬೇಕೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಳ್ಳುವುದಲ್ಲದೆ, ಭಿನ್ನತೆಗೆ ಆಯಾ ಪ್ರತಿಕಾರರ ವಿಶಿಷ್ಟ ಬಲಾಬಲಗಳು ಕಾರಣವಾಗಿರಬೇಕೆಂಬುದನ್ನೂ ಗಮನಿಸಬೇಕಾವುದು. ಹಸ್ತಲಿಖಿತ ಪ್ರತಿಗಳ ವರ್ಗೀಕರಣ ಮಾಡುವಲ್ಲಿ ಅನುಸರಿಸಬೇಕಾದ ತತ್ತ್ವಗಳು ಇತ್ತೀಚೆಗೆ ಕಂಡುಹಿಡಿಯಲ್ಪಟ್ಟು ಪ್ರಕಟವಾಗಿವೆ. ಅವುಗಳ ಬಗೆಗೆ ಹೆಚ್ಚಿನ ವಿವರಗಳು ಅನ್ಯತ್ರ[4] ದೊರೆಯುವುದರಿಂದ ಅವನ್ನೆಲ್ಲ ಇಲ್ಲಿ ವಿವೇಚಿಸುವ ಆವಶ್ಯಕತೆಯಿಲ್ಲ. ಆದರೆ, ಮಾತೃಕೆಗಳ ಉಪಯೋಗದಲ್ಲಿ ಒಂದು ಶಾಸ್ತ್ರೀಯವಾದ ತಂತ್ರವೆ ಈಗ ಏರ್ಪಟ್ಟಿದೆಯಾದರೂ, ಅದರ ಅನುಸರಣದಿಂದ ಕೆಲವೊಂದು ವಿಶಿಷ್ಟ ಬಗೆಯ ತೊಡಕುಗಳು ನಿವಾರಣೆಯಾಗಬಹುದೆ ಹೊರತು ಎಲ್ಲ ತೊಡಕುಗಳೂ ಬಯಲಾಗುವುವೆಂತಲ್ಲ.

ಕೈಬರೆಹದ ಪ್ರತಿಗಳನ್ನೆಷ್ಟು ಕಲೆಹಾಕಿದರೂ ಅವುಗಳಿಂದ ನಿವಾರಣೆಯಾಗದ ಇನ್ನೂ ಎಷ್ಟೋ ತೊಡಕುಗಳು ಸಂಪಾದಕರನ್ನು ಎದುರಿಸುತ್ತಿವೆ

ಯೆಂಬುದು ಸಂಸ್ಕೃತ ಅಥವಾ ಬೇರೆ ದೇಶಭಾಷೆಗಳಿಗಿಂತಲೂ ಕನ್ನಡಕ್ಕೆ ಹೆಚ್ಚು ಅನ್ವಯಿಸುತ್ತಿದೆ. ಕನ್ನಡದ ಹಳೆಯ ಕೈಬರೆಹದ ಪ್ರತಿಗಳಲ್ಲಿ ಎಷ್ಟೋ ಸಂದರ್ಭಗಳಲ್ಲಿ ಕ-ತ, ದ-ವ, ಗ-ನ ಮೊದಲಾದ ಅಕ್ಷರಗಳು ಪಲ್ಲಟವಾಗುವುದು ಕಂಡಬರುತ್ತಿದೆ. ಅದೇ ರೀತಿ ಅಲ್ಪಪ್ರಾಣ ಮಹಾಪ್ರಾಣಗಳ ಪಲ್ಲಟ, ರೇಫೆ ಒತ್ತಕ್ಷರಗಳ ಅನಾವಶ್ಯಕಪ್ರಯೋಗ ಅಥವಾ ಆವಶ್ಯಕವೆನಿಸುವ ಒತ್ತಕ್ಷರಗಳ ಅಭಾವ, ಇ, ಉ, ಒ, ಮೊದಲಾದ ಸ್ವರಗಳನ್ನು ಯಿ, ವು, ವೊ ಎಂದು ವ್ಯಂಜನಾದಿಯ ರೂಪದಲ್ಲಿ ಬರೆಯುವ ರೂಢಿ— ಇವೆಲ್ಲ ಅರ್ಥದ ಸಂದಿಗ್ಧತೆಯನ್ನು ಬಲಿಸಲು ಕಾರಣವಾಗುತ್ತಿವೆ. ಇದಲ್ಲದೆ, ಕನ್ನಡದ ಹಳೆಯ ಕೈಬರೆಹದ ಪ್ರತಿಗಳಲ್ಲಿ ಹ್ರಸ್ವ ದೀರ್ಘಾಕ್ಷರಗಳನ್ನು ಸ್ಪಷ್ಟವಾಗಿ ಸೂಚಿಸಿರುವುದು ಬಹು ವಿರಳ. ಪದ್ಯಗ್ರಂಥಗಳಾಗಿದ್ದರೆ ಛಂದಸ್ಸಿನ ಸಾಹಾಯ್ಯದಿಂದ ಬಹುಮಟ್ಟಿಗೆ ಅವುಗಳನ್ನು ನಿರ್ಧರಿಸಬಹುದು. ಆದರೂ ಇಂತಹ ಕಡೆಗಳಲ್ಲಿಯೂ ಭಿನ್ನಾಭಿಪ್ರಾಯಕ್ಕೆ ಎಡೆಯಿಲ್ಲದಿಲ್ಲ. ಉದಾಹರಣೆಗಾಗಿ ನಾಗವರ್ಮನ:

ಇನಿತಂ ಮೂರ್ಛೆಯಿನೆಳ್ಚ
ತ್ತನಂತರಂ ದೀರ್ಘಶೋಕಮುಂಬಿಡೆಸುವೆ ಕಿ
ಚ್ಚಿನ ಕಿಡಿಯಂದದೆ ನೆಲದೊಳ
ಗಿಸಸುಂ ಮಿಡುಮಿಡನೆ ಮಿಡುಕುವೆನ್ನಂ ಕಂಡೆಂ

ಎಂಬ ಪದ್ಯದಲ್ಲಿ[೩] ಛಂದೋದೋಷವಿಲ್ಲದಿದ್ದರೂ 'ಕಿಡಿ' ಎಂಬ ಶಬಕ್ಕೆ ಸರಿಯಾಗಿ ಅರ್ಥವಾಗುವುದಿಲ್ಲೆಂದೂಹಿಸಿ ಅದು 'ಕೀಡಿ' (=ಹುಳು) ಎಂದೆ ಇರಬೇಕೆಂದು ಕೆಲವರು[೪] ತರ್ಕಿಸುತ್ತಾರೆ. ಆದರೆ ಈ ತಿದ್ದುಪಾಟು ಅನಾವಶ್ಯಕವೆಂದು ಹಲವರಿಗೆ ತೋರಬಹುದಾಗಿದೆ; ನಮಗಂತೂ ಹಾಗೆ ತೋರುತ್ತಿದೆ[೫]. ಅದೇನೇ ಇರಲಿ, ಬಸವಣ್ಣನವರ ವಚನಗಳು ಛಂದೋಬದ್ಧವಾದ ಪದ್ಯವಲ್ಲವಾದುದರಿಂದ ಅವುಗಳನ್ನು ಸಂಸ್ಕರಿಸುವ ನಮ್ಮ ಕಾರ್ಯದಲ್ಲಿ ಹ್ರಸ್ವ-ದೀರ್ಘಾಕ್ಷರಗಳ ಸಂದೇಹ ನಮಗೆ ಹಲವೆಡೆಗಳಲ್ಲಿ ಗೋಚರಿಸಿದೆ, ಬಾಧಿಸಿದೆ. ಇಂತಹ ಪ್ರಸಕ್ತಿಯಲ್ಲಿ, ಅನೇಕ ಕಡೆಗಳಲ್ಲಿ

ಈಗ ಪ್ರಚಾರದಲ್ಲಿರುವ ಪಾಠಗಳಿಗೆ ವ್ಯತಿರಿಕ್ತವಾಗಿ ತಿದ್ದುಪಡಿಗಳನ್ನು ಮಾಡುವ ಸಾಸಹ ಮಾಡಿದ್ದೇವೆ.

ಎಷ್ಟೋ ಕಡೆಗಳಲ್ಲಿ ಬರಿಯ ಊಹೆಯಿಂದಲೆ ತಿದ್ದುಪಾಟುಗಳನ್ನು (conjectural emendation) ಕೈಕೊಳ್ಳುವ ಪ್ರಸಂಗವೂ ಒದಗುತ್ತಿದೆ. ಇಂಗ್ಲಿಷ ಸಾಹಿತ್ಯದಲ್ಲಿ, ಅದರಲ್ಲಿಯೂ ಶೇಕ್ಸ್ಪಿಯರನ ಕೃತಿಗಳಲ್ಲಿ ಕಂಡುಬರುವ ನ್ಯೂನತೆ, ಸಂದಿಗ್ಧತೆ, ವ್ಯರ್ಥತೆ ಮುಂತಾದವುಗಳನ್ನು ಹೋಗಲಾಡಿಸಲು ಸಮರ್ಥರೆನಿಸಿದ ವಿಮರ್ಶಕರು ಊಹೆಯಿಂದಲೆ ಪಾಠಸಂಸ್ಕರಣವನ್ನು ಕೈಕೊಂಡುದುಂಟು. ಅವುಗಳಲ್ಲಿ ಕೆಲವು ವಿದ್ವಜ್ಜನರ ಮಾನ್ಯತೆಯನ್ನು ಪಡೆದಿರುವುದು ನಿಜವಾದರೂ, ಅಸಮರ್ಪಕವೆಂದು ಕಡೆಗಣಿಸಲ್ಪಟ್ಟವುಗಳೆ ಬಹಳ; ಅಲ್ಲದೆ, ಅವುಗಳನ್ನು ಸೂಚಿಸಿದವರ ಪಾಂಡಿತ್ಯಸಾಹಿತ್ಯ ಜ್ಞಾನಗಳ ಬಗೆಗೆ ಸಂದೇಹವೂ ಉಂಟಾಗಿದೆ. ಊಹೆಯಿಂದ ಮಾಡಿದ ಪಾಠಸಂಸ್ಕರಣ ಪ್ರತಿಭಾಜನ್ಯವಾಗಿದ್ದರೆ ಸರಿ, ಇಲ್ಲವಾದರೆ ಅತ್ಯಂತ ಅನರ್ಥಕಾರಕವೆಂಬ ತತ್ತ್ವವನ್ನು ಅಂಗೀಕರಿಸಿಯೆ ನಾವು ಅನಿವಾರ್ಯವೆಂದೆನಿಸಿದ ಕೆಲವು ಸಂದರ್ಭಗಳಲ್ಲಿ ಮಾತ್ರ ಈ ಬಗೆಯ ತಿದ್ದುಪಾಟುಗಳನ್ನು ಕೈಕೊಂಡಿದ್ದೇವೆ. ಅಂತಹವುಗಳನ್ನು [ ] ಈ ಕಂಸಗಳಲ್ಲಿ ಮುದ್ರಿಸಿದ್ದೇವೆ. ಅವುಗಳ ಯುಕ್ತಾಯುಕ್ತತೆಯನ್ನು ಸಹೃದಯರಾದ ವಾಚಕರೆ ಕಂಡುಕೊಳ್ಳಬೇಕು. ಒಂದೆರಡು ಕಡೆ ನಾವು ಉಳಿಸಿಕೊಂಡ ಪಾಠ ನಮ್ಮ ದೃಷ್ಟಿಯಿಂದ ಅಷ್ಟು ಸಮರ್ಪಕವಲ್ಲವೆಂದೆನಿಸಿದರೂ ಅವನ್ನು ತಿದ್ದುವ ಗೊಡೆವೆಗೆ ನಾವು ಹೋಗಿರುವುದಿಲ್ಲ. ಉದಾಹರಣೆಗಾಗಿ, ಬಸವಣ್ಣನವರ ವಚನವಾದ

ಹೊನ್ನ ಹಾವುಗೆಯ ಮೆಟ್ಟಿದವನ, ಮಿಡಿಮುಟ್ಟಿದ ಕಂಜೆಡೆಯವನ;  
ಮೈಯಲ್ಲಿ ವಿಭೂತಿಯ ಧರಿಸಿದವನ,  
ಕರದಲ್ಲಿ ಕಪಾಲವ ಪಿಡಿದವನ,  
ಅರ್ಧನಾರಿಯಾದವನ, ಬಾಣನ ಬಾಗಿಲ ಕಾಯ್ದವನ;  
ನಂಬಿಗೆ ಕುಂಟಣಿಯಾದವನ;

ಚೋಳಂಗೆ ಹೊನ್ನ ಮಳೆಯ ಕರೆದವನ,
ಎನ್ನ ಮನಕ್ಕೆ ಬಂದವನ, ಸದ್ಭಕ್ತರ ಹೃದಯದಲ್ಲಿಪ್ಪವನ;
ಮಾಡಿದ ಪೂಜೆಯಲೊಪ್ಪವನ,
ಕೂಡಲ ಸಂಗಯ್ಯನೆಂಬವನ ! (೫೦೧ ‡)

ಎಂಬುದರಲ್ಲಿ ‘ಮೆಚ್ಚಿದವನ, ಧರಿಸಿದವನ, ಕಾಯ್ದವನ, ಸಂಗಯ್ಯನೆಂಬವನ’ ಮುಂತಾದ ರೂಪಗಳೆಲ್ಲ ದ್ವಿತೀಯಾ ವಿಭಕ್ತಿಯಲ್ಲಿರುವುವೆಂದೇ ಸಕೃದ್ದರ್ಶನಕ್ಕೆ ಹೊಳೆಯುವುದು. ಆ ದೃಷ್ಟಿಯಿಂದ ವಿಚಾರಿಸಿದಾಗ ಈ ವಚನದಲ್ಲಿ ಕ್ರಿಯಾಪದವೆ ಇಲ್ಲವೆಂದೂ ಈ ವಚನವೆ ಅಪೂರ್ಣವಾಗಿರುವುದೆಂದೂ ಭಾಸವಾಗದಿರದು. ಅಂತೆಯೆ ಕರ್ನಾಟಕಕವಿಚರಿತೆಯ ೧ನೆಯ ಭಾಗದಲ್ಲಿ ೧೧೦ ಈ ವಚನವನ್ನು ಉದಾಹರಿಸಿರುವುದನ್ನು ನೋಡಿದರೆ ಅಲ್ಲಿ ‘ಕೂಡಲ ಸಂಗಯ್ಯನೆಂಬವನ’ ಎಂಬ ಕೊನೆಯ ಶಬ್ದಗಳ ಪೂರ್ವದಲ್ಲಿ ‘ಕೊಂಡು ಬಾರೆಲವ್ವಾ’ ಎಂಬ ಶಬ್ದಗಳು ಹೆಚ್ಚಾಗಿದ್ದುದು ಕಂಡು ಬರುವುದು. ಆದರೆ ತಾಳೆವೋಲೆಯ ಪ್ರತಿಗಳಲ್ಲಿ ಯಾವುದರಲ್ಲಿಯೂ ಈ ಶಬ್ದಗಳಿಲ್ಲದಿರುವುದರಿಂದ ಅರ್ಥಕ್ಕೆ ಅನುಕೂಲವಾಗಲೆಂದು ಹಿಂದಣಿಂದ ಯಾರೋ ಸೇರಿಸಬೇಕೆಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲ. ನಮ್ಮ ವಿಚಾರದಲ್ಲಿ ದ್ವಿತಿಯಾ ವಿಭಕ್ತಿಯಂತೆ ಕಾಣುವ ರೂಪಗಳು ನಿಜವಾಗಿಯೂ ‘ಮೆಟ್ಟಿದವನೆ, ಧರಿಸಿದವನೆ’ ಎಂದು ಮುಂತಾಗಿ ಅವಧಾರಣೆಯ ಎಕಾರಗಳನ್ನೊಳಗೊಂಡ ಪ್ರಥಮಾ ವಿಭಕ್ತಿಗಳೆಂದೆ ತೋರುವುವು. ಹಳಗನ್ನಡದ ಕೈಬರಹದ ಪ್ರತಿಗಳಲ್ಲಿ ಎಕಾರಾಂತವನ್ನು ಅಕಾರಾಂತವಾಗಿಯೆ ಬರೆಯುವ ರೂಢಿ ಹೆಚ್ಚಾಗಿದ್ದಿತು. ಅವುಗಳಲ್ಲಿ ‘ಕರೆದ, ಬರೆದ’ ಮುಂತಾದುವುಗಳನ್ನು ‘ಕರದ, ಬರದ’ ಎಂದೇ ಬರೆದುದು ಸಾಮಾನ್ಯವಾಗಿ ಕಂಡು ಬರುತ್ತಿದೆ. ಅಲ್ಲದೆ, ‘ಅವನೇ ಬಂದನೆಂ’ಬುದನ್ನು ಮಾತಿನಲ್ಲಿ ‘ಅವನs ಬಂದನೆ’ಂದು ಉಚ್ಚರಿಸುವುದೂ ವಾಡಿಕೆಯಾಗಿದೆ. ಆದುದರಿಂದ ‘ಹೊನ್ನ ಹಾವುಗೆಮೆಟ್ಟಿದವ............ಕಱೆದವನ’ ಎಂದು ಮುಂತಾಗಿ ಪುರಾಣಗಳಲ್ಲಿ ವರ್ಣಿತನಾದ ಶಿವನೂ ‘ನನ್ನ ಮನಕ್ಕೆ ಬಂದ ಕೂಡಲ ಸಂಗಯ್ಯನೂ

‡ ಇದು ಈ ಸಂಸ್ಕರಣದಲ್ಲಿಯ ವಚನ ಸಂಖ್ಯೆ. ಹೀಗೆ ಮುಂದೆಯೂ ತಿಳಿದುಕೊಳ್ಳತಕ್ಕದ್ದು.

ಒಬ್ಬನೆ' ಎಂದು ಶಿವನಿಗೂ ಕೂಡಲ ಸಂಗಮದೇವನಿಗೂ ತಾದಾತ್ಮ್ಯ ವನ್ನು ಕಲ್ಪಿಸಿದ ವಚನವಿದೆಂದು ನಮ್ಮ ಮನವರಿಕೆ. ಹೀಗಿದ್ದರೂ, ಭಿನ್ನಾಭಿಪ್ರಾಯವಾಗಲು ಅವಕಾಶವಿದೆಯೆಂದು ತಿಳಿದು ನಾವು ಈ ವಚನವನ್ನು ಆ ರೀತಿ ತಿದ್ದದೆ ಹಾಗೇ ಬಿಟ್ಟಿದ್ದೇವೆ.

ಕೈಬರೆಹದಲ್ಲಿ ಆಗುವ ಸ್ವರಪಲ್ಲಟದಿಂದ ಸಂದಿಗ್ಧತೆ ಹೀಗೆ ಉಂಟಾಗುವುದೆಂಬುವುದಕ್ಕೂ ಊಹೆಯಿಂದ ಮಾಡಿದ ಪಾಠಸುಧಾರಣೆ ಒಮ್ಮೊಮ್ಮೆ ಸರಿಯಾಗಲಾರದೆಂಬುವುದಕ್ಕೂ ಒಂದು ಉದಾಹರಣೆಯನ್ನು ಕೊಡುವುದು ಉಚಿತವೆಂದು ತೋರುತ್ತಿದೆ:

ಲಿಂಗಜಂಗಮ ಒಂದೆ ಎಂದು ನಂಬಿದ ಬಳಿಕ
ಅವರಂಗನೆಯರು ಲಿಂಗದ ರಾಣಿವಾಸ;
ಅಲ್ಲಿಯೂ ಮೇಳ, ಇಲ್ಲಿಯೂ ಮೇಳ,
ಚೌಡೇಶ್ವರಿಯಲ್ಲಿಯೂ ಮೇಳ !
ಮೊಲೆಯೆಂಬ ಭಾವ ತಪ್ಪಿ ಅಪ್ಪಿದವರ
ತಲೆಯ ಕೊಂಬ ಕೂಡಲ ಸಂಗಮದೇವ. (೬೩೯)

ಈ ವಚನದಲ್ಲಿ ಗೆರೆಹಾಕಿದ ಭಾಗ ತಾಳವ್ರೋಲೆಯ ಪ್ರತಿಗಳಲ್ಲಿದ್ದಂತೆ ಇಲ್ಲಿ ಕೊಟ್ಟಿದೆ. 'ಮೊಲೆಯೆಂಬ' ಇದನ್ನು 'ಮಲೆಯೆಂಬ' ಎಂದು ತಿಳಿಯುವುದು ಸ್ವಾಭಾವಿಕವೆ ಆಗಿದೆ. ಆದರೆ 'ಮೊಲೆ' ಎಂಬುದ ಮಾತೆಯ ಚಿಹ್ನವಾದಂತೆ ಕಾಂತೆಯಲಕ್ಷಣವೂ ಆಗಬಹುದಾಗಿದೆ- ಇಲ್ಲಿ'ಮಾತೆ'ಎಂಬ ಭಾವನೆಯ ಆವಶ್ಯಕವೆಂದು ಯಾರಿಗಾದರೂ ತೋರಬಹುದಾದರಿಂದ ಈ ಭಾಗವನ್ನು ಶ್ರೀ ಹಳಕಟ್ಟಿಯವರ ಸಂಸ್ಕರಣದಲ್ಲಿ ೧೧ 'ಮಾತೆಯೆಂಬ' ಎಂದು ಮುದ್ರಿತವಾದುದು ಸರಿಯೆಂದೆ ಹೇಳಬಹುದು. ನಾವಾದರೂ ಈ ಸಂಸ್ಕರಣದ ಮೂಲದಲ್ಲಿ ಅದನ್ನೆ ಇಟ್ಟುಕೊಂಡು ಇದು ಊಹೆಯ ಸುಧಾರಣೆಯೆಂದು ತೋರಿಸಲು[ ]ಈ ಕಂಸಗಳನ್ನು ಬಳಸಿದ್ದೆವು. ಆದರೆ ಈ ವಚನದಲ್ಲಿ ಮುಂದಿನ ಸಾಲಿನಲ್ಲಿ ಬರುವ 'ತಲೆಯ ಕೊಂಬ' ಎಂಬುದನ್ನು ನೋಡಿದರೆ ಅದಕ್ಕೆ ಅನುಪ್ರಾಸವಾಗುವ 'ಮೊಲೆಯೆಂಬ' ಎಂಬುದು ಮೂಲಪಾಠಕ್ಕೆ ಹೆಚ್ಚು ಸಮೀಪವರ್ತಿಯಾಗಿರಬೇಕೆಂದು ನಮಗೆ ತೋರಿ,

ತಾಳೆವೋಲೆಯ ಪ್ರತಿಗಳನ್ನೆಲ್ಲ ಇನ್ನೊಮ್ಮೆ ಸರಿಹಚ್ಚುವ ಕಾರ್ಯವನ್ನು ಕೈಕೊಂಡೆವು. ಆಗ ಒಂದು ಪ್ರತಿಯಲ್ಲಿ ಮಾತ್ರ 'ಮೊಲೆಯುಂಬ' ಎಂಬ ಪಾಠ ದೊರಕಿತು. ಈ ರೂಪವೆ ಸಮರ್ಪಕ ಎಂದು ನಮಗೆ ತೋರಿದ್ದರಿಂದ ಈ ಸಂಸ್ಕರಣದಲ್ಲಿ ಅದನ್ನು ಶುದ್ಧಾಶುದ್ಧಪತ್ರಿಕೆಯಲ್ಲಿ ಕೊಟ್ಟಿದ್ದೇವೆ.

ಬಸವಣ್ಣನವರ ಕಾಲದಲ್ಲಿಯೆ ಹಳಗನ್ನಡ ನಡುಗನ್ನಡಕ್ಕೆ ತಿರುಗುತ್ತಿದ್ದಿತೆನ್ನಲು ಬಲವಾದ ಆಧಾರಗಳು ಅನೇಕ ದೊರೆಯುವುವು. ಆ ಕಾರಣಕ್ಕಾಗಿಯೆ ಅವರ ವಚನಗಳಲ್ಲಿ ಹಳಗನ್ನಡದ ರೂಪಗಳೊಡನೆ ನಡುಗನ್ನಡದ ರೂಪಗಳನ್ನೂ ಕಾಣಬಹುದು. ಎರಡನೆಯದಾಗಿ, ವಚನಗಳ ಕೈಬರೆಹದ ಪ್ರತಿಗಳಲ್ಲಿ ಒಂದೇ ಶಬ್ದದ ಬೇರೆ ಬೇರೆ ರೂಪಗಳು ಬೇರೆ ಬೇರೆ ಪ್ರತಿಗಳಲ್ಲಾಗಲಿ, ಒಂದೇ ಪ್ರತಿಯಲ್ಲಿ ಬೇರೆ ಬೇರೆ ಕಡೆಗಳಲ್ಲಾಗಲಿ ಕಾಣಬರುವುವು. ಇಂತಹ ಸಂದರ್ಭಗಳಲ್ಲೆಲ್ಲ ವಚನಕಾರರು ಬಳಸಿದ ಮೂಲರೂಪ ಇದೇ ಎಂದು ನಿರ್ಧಾರವಾಗಿ ಹೇಳುವುದು ಅಸಾಧ್ಯವೇ ಸರಿ. ಆದುದರಿಂದ ಅಂತಹ ಬೇರೆ ಬೇರೆ ರೂಪಗಳನ್ನು ನಮ್ಮೀ ಸಂಸ್ಕರಣದಲ್ಲಿ ಅಲ್ಲಲ್ಲಿ ಉಪಯೋಗಿಸಿಕೊಂಡಿದ್ದೇವೆ. ಆ ಬಗೆಯ ಪ್ರಯೋಗಗಳ ಮತ್ತು ಶಬ್ದರೂಪಗಳ ಮಾದರಿಪಟ್ಟಿಯೊಂದನ್ನು ಓದುಗರ ಅವಗಾಹನೆಗಾಗಿ ಇದರಡಿ ಕೊಟ್ಟಿದ್ದೇವೆ:

(೧) ವ್ಯಾಕರಣ ಪ್ರಯೋಗಗಳು:

ಬಯಸು–ಬಯಿಸು–ಬೈಸು–ಬೈಚು; ಬಪ್ಪುದು–ಬಪ್ಪದು–ಬಹುದು–ಬಾಹುದು; (ನೀನ್) ಬಂದೆಯ್–ಬಂದೆ; (ನಾನ್) ಬಂದೆನ್–ಬಂದೆ–ಬಂದೆನು; ನಿಂದೊಡೆ–ನಿಂದಡೆ ನಿಂದರೆ; ನೆನೆಯುತ್ತ–ನೆನೆವುತ್ತ; ಹಲು ದೋರೆ–ಹಲು ದೋರ; ಮೆಲು–ಮೆಲ್ಲು; ನಿಲ್ದ–ನಿಂದ; ಕಾಣ್ಬ–ಕಾಂಬ–ಕಾಬ–ಕಾಣುವ; ಕೆನ್ನೆವಾರೆ–ಕೆನ್ನೆಯಾರೆ; ಅರಿದು–ಅರಿತು; ಸವೆಯೆ-ಸವೆಯಲು-ಸವೆಯ; ಕಾಣು–ಕಾಣಾ-ಕಾಣ; ಕಂಡಾ–ಕಂಡೆಯಾ; ಬಹೆ–ಬಾಹೆ; ಕೂಪ-ಕೂರ್ಪ;

ಆನ್-ಆನು-ಆ; ನೀನ್-ನೀನು-ನೀ; ಮನ-ಮನವು; ತನು-ತನುವು; ಮಾಡುವ-ಮಾಡುವವ; ಎನ್ನ-ಎನ್ನಾ; ಎಲ್ಲ-ಎಲ್ಲಾ.

**(೨) ಸಂಧಿಯನ್ನು ಮಾಡುವ ಅಥವಾ ಬಿಡುವ ಐಚ್ಛಿಕಕ್ಕೆ:**

ತನುವ ಬಂದಲೆವರಯ್ಯಾ—ತನುವ ಬಂದು ಅಲೆವರು ಅಯ್ಯಾ; ಜಂಗಮ ಅನವರತ-ಜಂಗಮುವನವರತ; ಸತ್ಯಸಿದ್ಧೋಪದೇಶ—ಸತ್ಯಸಿದ್ಧ-ಉಪದೇಶ.

**(೩) ಶಬ್ದಗಳ ಬೇರೆ ಬೇರೆ ರೂಪಗಳು:**

| | |
|---|---|
| ಸೂರೆ—ಸೋರೆ | ಬೋ—ಭೋ |
| ಮಾದರ—ಮಾದಾರ | ಕೊನೆ—ಗೊನೆ |
| ತಂಬುಲ—ತಾಂಬೂಲ | ಒಕತನ—ಒಗತನ |
| ಕಿಂಕಲ—ಕಿಂಕಿಲ | ನೇಮ—ನೇವ |
| ಪ್ರಮಾಣ—ಪ್ರಮಾಣು | ಶ್ರಮ—ಶ್ರವ |
| ಡಂಬ-ಡಂಬು-ಡಂಭ | ಶೂಲ. ಸೂಲ |
| ಮುಕುಟ-ಮುಕುಟ | ಪಶು—ಪಸು-ಹಸು |
| ನಡು-ನೆಡು | ರಾವಣ ರಾವಳ |
| ಮುಚ್ಚು-ಮುಚ್ಚು | ನಾರಿವಾಣ-ನಾರಿವಾಳ |
| ಪೊಡ-ಪೊಡೆ | ಕಬ್ಬುನ-ಕಬ್ಬುಣ |
| ಮೆಯಿ-ಮೈ | ಸೊಣಕ—ಸೊಣಗ |
| ಕ್ರಿ-ಕ್ರೀ-ಕ್ರಿಯೆ | ರೂಪು—ರೂಹು—ರೂಪ |
| ಪುತ್ಥಳಿ—ಪುತ್ತಳಿ | ಪಂಜರ-ಹಂಜರ |
| ಟಾವು—ಠಾವು | ಒಪ್ಪುಚಿ—ಒಪ್ಪುಚ್ಚಿ |
| ಸಯಿಧಾನ— ಸುಯಿಧಾನ | ಸ್ವಯ— ಸಯ |

ಆದರೆ ಕೆಲವು ಕಡೆಗಳಲ್ಲಿ ರೂಪವ್ಯತ್ಯಾಸದೊಡನೆ ಅರ್ಥವ್ಯತ್ಯಾಸವೂ ಆಗುವುದೆಂದು ತೋರಿದಲ್ಲಿ ಸಂದರ್ಭಕ್ಕನುಸಾರವಾದ ರೂಪಗಳನ್ನೇ ಇಟ್ಟುಕೊಂಡಿದ್ದೇವೆ. ಅಂತಹ ಕೆಲವು ಉದಾಹರಣೆಗಳನ್ನೂ ಇದರಡಿ ಕೊಟ್ಟಿದ್ದೇವೆ:

('ಕೊಳ' ಎಂಬುದಕ್ಕೆ ಪ್ರತಿಯಾಗಿ) 'ಕೋಳ' (ವಚನ ೩೧೬) ; ('ಒಲೆ' ಎಂಬುದಕ್ಕೆ ಪ್ರತಿಯಾಗಿ (ಓಲೆ) ೨೯೬ ; ('ಮೋರೆ' ಎಂಬುದರ ಬದಲು) ಮೋಱೆ (೫೦೨ ; ('ಬರ' ಎಂಬುದಕ್ಕೆ ಬದಲು) 'ಭರ' (೧೨೫ ; ಸಂಚ ೬೩೪ ; ಸಂಚು (೫೧೨) ಕಿಂಕರ (೪೬೫) ; ಕಿಂಕಿಲ ೪೬೭ (೫೨೨)

ಒಂದೊಂದು ಕಡೆ ತಾಳೆವೋಲೆಯ ಪ್ರತಿಗಳಲ್ಲಿ ಕಂಡುಬರುವ ಶಬ್ದ ರೂಪಗಳು ತಪ್ಪಾಗಿರಬೇಕೆಂದು ತೋರಿದರೂ ಅಂತಹ ಅಪರೂಪಗಳೆ ಬಹುಕಾಲ ಬಳಕೆಯಲ್ಲಿರುವುದು ಸಂಭವನೀಯವಾದುದರಿಂದ, ಅವುಗಳ ಪ್ರತಿಯಾಗಿ ಶುದ್ಧ ರೂಪಗಳನ್ನು ಮೂಲದಲ್ಲಿ ಬಳಸುವುದು ಅಷ್ಟು ಪ್ರಶಸ್ತ ವಲ್ಲವೆಂದು ನಮಗೆ ತೋರಿದೆ. ಅಲ್ಲದೆ ಅಂತಹ ಅಪರೂಪಗಳನ್ನೆ ಮುಂದಿನ ಬೇರೆ ಗ್ರಂಥಕಾರರು ಪ್ರಯೋಗಿಸಿರುವುದೂ ಸಾಧ್ಯವಿರುವುದ ರಿಂದ ಅವುಗಳ ಅರ್ಥವನ್ನು ತಿಳಿದುಕೊಳ್ಳಲು ಈ ಅಪರೂಪಗಳು ಸಾಹಾ ಯಕವಾಗುತ್ತವೆಯೆಂದೆ ನಮ್ಮ ಗ್ರಹಕೆ. ಉದಾಹರಣೆಗಾಗಿ:

ಹೋಗಬಿಟ್ಟು, ಮರಳಿ ಒಂದೆ ನೋಡಿ,: ಮುತ್ತಾಗಬೇಕೆಂಬ ಸಂದೇಹವುಳ್ಳ ನ್ನಕ್ಕ, ಅವೆ ಪರದಾರ, ನಾಯಕ ನರಕ ತಪ್ಪದು. ಅನ್ಯವಧುವೆಂಬುದು ನಿಮ್ಮ ರಾಣಿವಾಸ ಇದೇ ದಿಬ್ಯ ಕೂಡಲ ಸಂಗಮದೇವ (೭೫೫)

ಈ ವಚನವನ್ನು ಶ್ರೀ. ಫ. ಗು. ಹಳಕಟ್ಟಿಯವರಿಂದ ಸಂಪಾದಿತವಾದ ಬಸವಣ್ಣನವರ ವಚನಗಳು ಮೂರನೆಯ ಸಂಸ್ಕರಣದಲ್ಲಿದ್ದಂತೆ[೨] ಇಲ್ಲಿ ಕೊಟ್ಟಿದ್ದೇವೆ. ಇಲ್ಲಿ ಬಂದಿರುವ 'ಪರದಾರ' ಎಂಬ ಶಬ್ದವು ತಾಳವೋಲೆಯ ಪ್ರತಿಗಳಲಿಲ್ಲ. ಅಲ್ಲಿ ದೊರೆಯುವುದು 'ಪಾರದ್ವಾರ'ವೆಂಬ ಶಬ್ದ. ಈ ಶಬ್ದವು ಸಂದರ್ಭಕ್ಕೆ ಉಚಿತವಾದ ಅರ್ಥವನ್ನು ಕೊಡುವು ದಿಲ್ಲೆಂಬ ಅಭಿಪ್ರಾಯದಿಂದ 'ಪರದಾರ' ಎಂಬ ಶಬ್ದವನ್ನು ಯಾರೋ ಇತರ ಪ್ರತಿಕಾರರು ಪ್ರಯೋಗಿಸಿದ್ದಾರೆಂದು ಊಹಿಸಬಹುದು. 'ಪರದಾರ ಎಂಬುದು 'ಪರದಾರಗಮನ ಪಾತಕ' ಎಂಬ ಅರ್ಥದಲ್ಲಿ ಪ್ರಯೋಗ ವಾದಂತೆ ತೋರುತ್ತಿದೆ. ಆದರೆ ಈ ಅರ್ಥ ಕೋಶದಲ್ಲಿ ದೊರೆಯುವುದಿಲ್ಲ; ಅದಕ್ಕೆ 'ಪಾರದಾರ್ಯ' ಎಂಬ ಬೇರೊಂದು ಶಬ್ದವೆ ಇದ್ದುದು ಕಂಡು ಬರುತ್ತಿದೆ[೩]. ಈ 'ಪರದಾರ್ಯ'ವೇ ಕನ್ನಡಿಗರಕೈಬರೆಹದಲ್ಲಿ ಬರಬರುತ್ತ 'ಪಾರದ್ವಾರ'ವಾಗಿರಬೇಕೆಂದು ನಮಗೆ ತೋರುತ್ತಿದೆ. ಆದರೆ ಈ ಅಪ ರೂಪ ಬಹುಕಾಲ ಬಳಕೆಯಲ್ಲಿದ್ದಿರಬೇಕು. ಏಕೆಂದರೆ, 'ಪರದಾರಗಮನ ಪಾತಕವನ್ನು ಮಾಡಿದವ' (ಎಂದರೆ 'ಪರದಾರಿ' ಅಥವಾ 'ಪರದಾರಿಕ')

ಎಂಬ ಅರ್ಥದಲ್ಲಿ 'ಪಾರದ್ವಾರಿ' ಎಂಬ ರೂಪ ಸಿಂಗಿರಾಜಪುರಾಣದ ಕೆಳಗಣ ಪದ್ಯದಲ್ಲಿ[೧] ದೊರೆಕುತ್ತಿದೆ:

ಸೂನೆಗ್ರಾಹಿ ಕುಲಾಲ ವೇಶಿ ಚಕ್ರೇಶ ಮಘು
ಪಾನಿ ಪಾರದ್ವಾರಿ ತಿಲಘಾತಕಂ ಪಿಸುಣ
ಹೀನಗುಲ ಸದ್ಬ್ರಹ್ಮಹತ್ಯನೊಳಗಾದ ಬಲು
ಘೋರತರ ನಿರಯಾತ್ಮರು
ಮೋನಕಾತ್ಮಜಿಯರಸನಂ ಸ್ಮರಿಸಿ ಪೂಜಿಸಲು
ಹೀನತರದತಿಪಾಪವೆಲ್ಲ ಲಯವಾಗಿ ಸೌ
ಖ್ಯಾನುಭವ ಸುಕೃತಾತ್ಮರಹರೆಂಬ ತಚ್ಛ್ರುತಿಗ
ಳಂ ಕೇಳು ನರಪಾಲಕಾ

ಆದುದರಿಂದ ಈ ಸಂಸ್ಕರಣದಲ್ಲಿ ಮೇಲ್ಕಂಡ ವಚನದಲ್ಲಿ 'ಪಾರದ್ವಾರ ಎಂಬ ರೂಪವನ್ನೆ ಉಳಿಸಿಕೊಂಡಿದ್ದೇವೆ ಕೋಶದಲ್ಲಿ ಅದರ ಶುದ್ಧರೂಪ ವನ್ನು ಸೂಚಿಸಿದ್ದೇವೆ. ಹೀಗೆಯೆ, ಇದೆ ತತ್ತ್ವವನ್ನನುಸರಿಸಿಯೆ, 'ಪುರಾತನ' ಎಂಬುದಕ್ಕೆ ಪ್ರತಿಯಾಗಿ 'ಪುರಾತ' ಎಂಬ 'ಕುಂಭೀಪಾಕ' ಎಂಬು ದಕ್ಕೆ ಪ್ರತಿಯಾಗಿ 'ಕುಂಭಿಪಾತಕ' ಎಂಬ ಅಪರೂಪಗಳನ್ನೆ—ಅನ್ಯತ್ರ ಈ ರೂಪಗಳು ಸಿಕ್ಕುವುದರಿಂದ—ಹಾಗೆಯೆ ಉಳಿಸಿಕೊಂಡಿದ್ದೇವೆ.

೨

ಅನೇಕ ವಚನಗಳಲ್ಲಿ ಈಗ ಬಳಕೆಯಲ್ಲಿರುವ ಪಾಠಗಳಿಗೆ ವ್ಯತಿರಕ್ತವಾಗಿ ಸರಿಯಾದ ಅರ್ಥವತ್ತಾದ ಪಾಠಗಳನ್ನು ನಮ್ಮೀ ಸಂಸ್ಕರಣದಲ್ಲಿ ಅಂಗೀಕರಿಸಲು ನಮ್ಮ ಸಂಗ್ರಹದಲ್ಲಿದ್ದ ಹಲವು ತಾಳೆಯೋಲೆಯ ಮಾತೃಕೆಗಳು ಸಾಹಾಯಕವಾಗಿವೆ, ಆಧಾರವಾಗಿವೆ. ಇವರಿಂದಾಗಿ ಎಷ್ಟೋ ವಚನಗಳ ಅರ್ಥದಲ್ಲಿ ಮತ್ತು ಆಶಯದಲ್ಲಿ ಮಹತ್ವದ ಮಾರ್ಪಾಟುಗಳಾಗಿವೆಯೆಂದು ಓದುಗರಿಗೆ ತೋರದಿರದು. ಕೇವಲ ದಿಗ್ದರ್ಶನಕ್ಕೆಂದು ಒಂದೆರಡು ಉದಾಹರಣೆಗಳನ್ನು ಇದರಡಿ ಕೊಡುತ್ತೇವೆ. ಈಗ ಪ್ರಸಾರದಲ್ಲಿರುವ ಬಸವಣ್ಣನವರ ವಚನಗಳ ಮುದ್ರಿತ ಪ್ರತಿಗಳಲ್ಲಿ ಒಂದು ವಚನ ಕೆಳಗಿನಂತೆ[೨] ಮುದ್ರಿತವಾಗಿದೆ:

(೧) ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ, ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣ. ಚಿತ್ರದ ರಬ್ಬು ಕಾಣಿರಣ್ಣಾ. ಅಪ್ಪಿದರೆ ಸುಖವಿಲ್ಲ ಮೆಲಿದರೆ ರುಚಿ ಇಲ್ಲ. ಕೂಡಲ ಸಂಗಮದೇವ ನಿಜವಿಲ್ಲದವನ ಭಕ್ತಿ.

ಈ ವಚನವನ್ನು ಅರ್ಥವಿಸಹೋದಲ್ಲಿ, 'ಅಪ್ಪಿದರೆ ಸುಖವಿಲ್ಲ'ವೆಂಬ ಮಾತು 'ಚಿತ್ರದ ರೂಹನ್ನು' ಅನ್ವಯಿಸುವುದೆಂದು ತಿಳಿದುಕೊಳ್ಳುವುದು ಸುಲಭವಾಗುವುದೆಂದು ನೆನೆದರೂ 'ಮೆಲಿದರೆ ರುಚಿಯಿಲ್ಲ' ಎಂಬುದು ಯಾವುದನ್ನು ಕುರಿತು ಹೇಳಿದೆ ಎಂಬುದು ಸಮಸ್ಯೆಯಾಗಿಯೆ ಉಳಿಯು ತ್ತಿದೆ.—'ರೂಹ'ನ್ನಾಗಲಿ ರಬ್ಬ'ನ್ನಾಗಲಿ ಮೆಲುವುದು ಅಸಮಂಜಸ ವಾದುದರಿಂದ, ವಚನಕಾರರೆ ಹೀಗೆ ಬರೆದಿದ್ದರೆ, ಉಪಾಯವಿಲ್ಲದೆ ಏನಾ ದರೂ ಅರ್ಥ ಹೊರಡಿಸಿ ಸಮಾಧಾನಮಾಡಿಕೊಳ್ಳಬೇಕಾಗುತ್ತಿತ್ತು. ಆದರೆ ಈ ವಚನದಲ್ಲಿ ಬಂದಿರುವ 'ರಬ್ಬು' ಶಬ್ದವು ಬಳಕೆಮಾತಿನಲ್ಲಿದೆ; 'ಎದ್ದು ಕಾಣುವುದು, ಸ್ಫುಟವಾದುದು' ಎಂಬ ಅರ್ಥದಲ್ಲಿ ಚಿತ್ರ, ಬಣ್ಣ ಮುತಾದವುಗಳನ್ನು ಕುರಿತು ಹೇಳುವಲ್ಲಿ ಬರುವುದುಂಟು. ಆದರೆ ಈ ಅರ್ಥದಲ್ಲಿಯಾಗಲಿ, ನಾಮಪದವಾಗಿಯಾಗಲಿ ಈ ಶಬ್ದವು ಕನ್ನಡ ನಿಘಂ ಟುಗಳಲ್ಲಿ ದೊರೆಯದೆ ಇರುವುದರಿಂದ ಇದು ಕನ್ನಡವಲ್ಲವೆಂದೂ ಬಹುತರ ಅನ್ಯದೇಶ್ಯಶಬ್ದವಿರಬೇಕೆಂದೂ ತರ್ಕಿಸಬಹುದಾಗಿದೆ. ಆದುದರಿಂದ ಇಂತಹ ನುಡಿಯನ್ನು ಬಸವಣ್ಣನವರು ಬಳಸಿರಲಾರರೆಂದೆ ಊಹಿಸ ಬಹುದು. ತಾಳೆವೋಲೆಯ ಮಾತೃಕೆಗಳನ್ನು ನೋಡಲಾಗಿ ಅಲ್ಲಿ ಕಂಡು ಬರುವ ಶಬ್ದ 'ಕಬ್ಬು' ಎಂಬುದು. ಆ ಶಬ್ದವನ್ನಿಟ್ಟುಕೊಂಡು ಈ ವಚನ ವನ್ನು ಪುನಃ ಸಂಸ್ಕರಿಸಿ ಕೆಳಗಣಂತೆ ಬರೆದರೆ, ಅರ್ಥವು ಎಷ್ಟು ಸುಗಮ ವಾಗುವುದೆಂಬುದು ತಾನೆ ಗೊತ್ತಾಗುತ್ತಿದೆ:

ಒಲವಿಲ್ಲದ ಪೂಜೆ! ನೇಹವಿಲ್ಲದ ಮಾಟ!!
ಆ ಪೂಜೆಯೂ ಆ ಮಾಟವೂ
ಚಿತ್ರದ ರೂಹು ಕಾಣಿರಣ್ಣಾ! ಚಿತ್ರದ ಕಬ್ಬು ಕಾಣಿರಣ್ಣಾ!!
ಅಪ್ಪಿದರೆ ಸುಖವಿಲ್ಲ! ಮೆಲಿದರೆ ರುಚಿಯಿಲ್ಲ!!
ಕೂಡಲ ಸಂಗಮದೇವಾ, ನಿಜವಿಲ್ಲದವನ ಭಕ್ತಿ!! (೧೨೬)

ಈಗ 'ಚಿತ್ರದ ರೂಹು—ಅಪ್ಪಿದರೆ ಸುಖವಿಲ್ಲ, ಚಿತ್ರದ ಕಬ್ಬು ಮೆಲಿದರೆ ರುಚಿಯಿಲ್ಲ' ಎಂದು ಬಹುಸ್ವಾರಸ್ಯವಾದ ಅರ್ಥ ಹೊರಡಿತ್ತೆಂಬುದು ವಾಚಕರಿಗೆ ಸಹಜವಾಗಿಯೇ ಗೊತ್ತಾಗುವಂತಿದೆ.

ಹೀಗೆ ಕಣ್ಣುತಪ್ಪಿನಿಂದಾಗಲಿ, ಮೂಲಪ್ರತಿಗಳ ಕೊರತೆಯಿಂದಾಗಲಿ ಈಗಾಗಲೆ ಬಳಕೆಯಲ್ಲಿ ಬಂದಿರುವ ಅನೇಕ ಅಪಪಾಠಗಳನ್ನು ಈ ಸಂಸ್ಕರಣದಲ್ಲಿ ಸರಿಯಾಗಿ ತಿದ್ದಿದ್ದೇವೆ. ಅಂತಹವುಗಳಲ್ಲಿ ಈ ಕೆಳಗೆ ಕಾಣಿಸಿದುವು ಕೆಲವು ಮಾತ್ರ:

| ಮೊದಲು ಬಳಕೆಯಲ್ಲಿದ್ದ ಪಾಠ | ಈ ಸಂಸ್ಕರಣದಲ್ಲಿಯ ವಚನ ಸಂಖ್ಯೆ | ಈ ಸಂಸ್ಕರಣದಲ್ಲಿ ಅಂಗೀಕೃತವಾದ ಪಾಠ |
|---|---|---|
| ಸಿಂಗರದ ಗಾತ್ರ | ೪೨ | ಸಿಂಗಪ ಗಾತ್ರ |
| ಅಂಗ ಸಂಗಿ | ೧೨೫ | ಅಸಂಗಸಂಗಿ |
| ಕುಘರ—ಕುಪರ | ೨೬೦ | ಕುಮುರು |
| ಅರುಚಿಯುಂಟಿ | ೨೮೫ | ಅಸುರುಚಿಯುಂಟಿ |
| ಮುಳಲೊಟ್ಟೆ | ೩೦೭ | ಒಳಲೊಟ್ಟೆ |
| ಕಾಗೆ ವೃಷ್ಟಿಸುವ | ೩೬೧ | ಕಾಗೆ ವಿಷ್ಟಿಸುವ |
| ಭೋಜದೇವ ಬಲ್ಲಾಳು | ೩೭೨ | ಭೋಜ ದೇವಲಾಳು |
| ಅಷ್ಟಕೋಟ ರೋಮಂಗಳು | ೪೯೦ | ಅವುಟುಕೋಟ ರೋಮಂಗಳು |
| ಹೋತ ತಂದು | ೫೭೫ | ಹೊತ್ತು ತಂದು |
| ಜನ್ನ | ೫೮೧ | ಜನ್ನ |

(೨) ಈಗ ಪ್ರಚಾರವಾಗಿರುವ ಬಸವಣ್ಣನವರ ವಚನಗಳ ಮುದ್ರಿತ ಪ್ರತಿಯೊಂದರಲ್ಲಿ[೧೬] ಒಂದು ವಚನ ಕೆಳಗಿನಂತಿದೆ:

ಒಲೆಯು ಬೂದಿಯು ಬಲಿಯುಲು ಬೇಡ ಒಲಿದಂತೆ ಹೂಸಿಕೊಂಡಿಪ್ಪುದು ಹುಸಿ ಏನು ಫಲ ಮನದಲ್ಲಿ ಲೇಸಿಲ್ಲದನ್ನಕ್ಕ? ಒಂದನಾಡ ಹೋಗಿ ಒಂಬತ್ತ ನಾಡುವ ಡಂಬಕರ ಮೆಚ್ಚ ಕೂಡಲ ಸಂಗಮದೇವ.

ಇನ್ನೊಂದು ಮುದ್ರಿತ ಪ್ರತಿಯಲ್ಲಿ 'ಬಲಿಯಲು' ಎಂಬುದಕ್ಕೆ ಬದಲಾಗಿ 'ಬರೆಯಲು' ಎಂದಿದೆ; ಉಳಿದುದೆಲ್ಲ ಮೇಲಿನಂತೆಯೆ ಇದೆ. ಇದ್ದ ಹಾಗೆಯೆ ಈ ವಚನದ ಅರ್ಥವನ್ನು ಸಮರ್ಪಕವಾಗಿ ಮಾಡುವುದು ಕಠಿಣವೇ ಸರಿ. ಅಂತೆಯೆ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟಿತವಾದ "ಕನ್ನಡ ಬಾವುಟ"ದಲ್ಲಿ ಈ ವಚನದ ಮೊದಲಿನ ಭಾಗವನ್ನು ಕೆಳಗೆ ಕಂಡಂತೆ ಸುಧಾರಿಸಿದುದು ಕಂಡುಬರುತ್ತಿದೆ; ಮತ್ತು ಈ ಸುಧಾರಣೆಯನ್ನೆ ಶ್ರೀ ಎಂ. ಆರ್. ಶ್ರೀ ಅವರ "ವಚನಧರ್ಮಸಾರ"ದಲ್ಲಿಯೂ ಅನುಸರಿಸಲಾಗಿದೆ:

**ಒಲೆಯ ಬೂದಿಯ ಬಳಿಯಲು ಬೇಡ, ಒಲೆಯಂತೆ ಹೂಸಿಕೊಂಡಿಪ್ಪುದು ಹುಸಿ .....(ಇತ್ಯಾದಿ)**

ಈ ವಚನದಲ್ಲಿ ಕಂಡುಬರುವ 'ಬಲಿಯಲು' ಅಥವಾ 'ಬರೆಯಲು' ಎಂಬ ಮೊದಲೆರಡು ಪಾಠಾಂತರಗಳಿಗೆ ಕೆಲವು ಮಾತೃಕೆಗಳ ಆಧಾರವಿದೆ. ಆದರೆ 'ಕನ್ನಡ ಬಾವುಟ"ದಲ್ಲಿ ಸುಧಾರಣೆಯಾಗಿ ಬಂದಿರುವ 'ಬಳಿಯಲು' ಎಂಬುದಕ್ಕೆ ಮಾತೃಕೆಗಳ ಆಧಾರವೇನೂ ಇಲ್ಲ. ಅರ್ಥದೃಷ್ಟಿಯಿಂದ ಈ ಮೂರರಲ್ಲಿ ಹೆಚ್ಚು ವ್ಯತ್ಯಾಸವಿರುವಂತೆ ತೋರುವುದಿಲ್ಲ. ಆದರೆ 'ಬಳಿಯಲು' ಎಂಬುದರಿಂದ ಅರ್ಥ ಸರಳವಾಗಬಹುದೇನೊ? ಇನ್ನು "ಕನ್ನಡ ಬಾವುಟ"ದಲ್ಲಿ ತಿದ್ದಿದ ಪಾಠವಾದ 'ಒಲೆಯಂತೆ' ಎಂಬುದಕ್ಕೂ ಯಾವ ಮಾತೃಕೆಯ ಆಧಾರವೂ ಇಲ್ಲ. ಇಷ್ಟಾದರೂ ಒಟ್ಟಿನಲ್ಲಿ ಈ ಅರ್ಥದ ವಚನ ಸುಗಮವಾಗುವುದೆಂದು ಹೇಳಲಾಗುವುದಿಲ್ಲ. ಇಂತಹ ಪ್ರಸಂಗಗಳಲ್ಲಿ ಹಲವು (ತಾಳೆವೋಲೆಯ) ಮಾತೃಕೆಗಳ ಆಧಾರದಿಂದಲೆ ವಚನಗಳ ಸಂಸ್ಕರಣವನ್ನು ಕೈಕೊಳ್ಳಬೇಕಾದುದು ಅನಿವಾರ್ಯ. ತಾಳೆವೋಲೆಗಳ ಆಧಾರದಿಂದಲೆ ಈ ವಚನವನ್ನು ನಾವು ಈ ರೀತಿ ಸಂಸ್ಕರಿಸಿದ್ದೇವೆ:

ಒಲೆಯ ಬೂದಿಯ ಬಲಿಯಲು ಬೇಡ:
ಒಲಿದಂತೆ ಹೂಸಿಕೊಂಡಿಪ್ಪುದು.
ಹೂಸಿ ಏನು ಫಲ, ಮನದಲ್ಲಿ ಲೇಸಿಲ್ಲದನ್ನಕ್ಕ
ಒಂದನಾಡಹೋಗಿ ಒಂಬತ್ತನಾಡುವ
ಡಂಬಕರ ಮೆಚ್ಚ ಕೂಡಲ ಸಂಗಮದೇವ .

ಶೈವರಿಗೆಲ್ಲ ಮಾನ್ಯವಾದ, ವೀರಶೈವರ ಅಷ್ಟಾವರಣಗಳಲ್ಲಿ ಒಂದಾದ ವಿಭೂತಿಯನ್ನು ಕುರಿತ ವಚನವಿದು. ವಿಭೂತಿಯನ್ನು ಘಟ್ಟಿ ಮಾಡಿ ಉಪಯೋಗಿಸುವ ಕ್ರಮವೊಂದು ಏರ್ಪಟ್ಟಿರುವುದಾದರೂ, ಮೂಲತಃ ಮತ್ತು ತತ್ತ್ವತಃ ಅದು ಬೂದಿಯೆ. ಈ ಸಂಗತಿಯನ್ನು ನೆನಪಿನಲ್ಲಿಟ್ಟು ಕೊಂಡು ಈ ವಚನವನ್ನು ವಿಮರ್ಶಿಸುವುದರಿಂದ ಅರ್ಥ ಈ ರೀತಿಯಾಗಿ ಹೊರಹೊಮ್ಮುತ್ತಿದೆ: "ವಿಭೂತಿಯೇ ಬೇಕೆಂದು ಅದನ್ನು ಪೇಟೆಯಿಂದ ಬಿಲಿತು (=ಕೊಂಡು) ತರುವ ಪ್ರಯಾಸಬೇಡ. ಎಲ್ಲರ ಮನೆಯಲ್ಲಿಯೂ ಒಲೆಯಲ್ಲಿರುವ ಬೂದಿಯೆ ಸಾಕು; ಅದನ್ನೇನು ಕೊಂಡು ತರುವ ಕಾರಣ ವಿಲ್ಲ. ಮನಸ್ಸಿಗೆ ಬಂದಂತೆ ಹೂಸಿ (=ಹಚ್ಚಿ)ಕೊಳ್ಳಬಹುದು. ಆದರೆ ಮನಸ್ಸು ಪರಿಶುದ್ಧಿಹೊಂದದೆ, ಮೇಲೆ ದೇಹಕ್ಕೆ ಎಷ್ಟು ಹೂಸಿಕೊಂಡ ರೇನು? ಅದೆಲ್ಲ ವ್ಯರ್ಥ. ಬರಿಯ ಮಾತಿನ ಡಂಭಕರನ್ನು ದೇವರು ಮೆಚ್ಚ; ಅಂತಃಶುದ್ಧಿಯಿದ್ದರೆ ಒಲೆಯ ಬೂದಿಯೆ ವಿಭೂತಿಯ ಫಲವನ್ನು ಕೊಡು ತ್ತಿದೆ"— ಎಂಬುದೆ ಈ ವಚನದಲ್ಲಿ ಬಸವಣ್ಣನವರು ಮಾಡಿದ ಉಪದೇಶ; ಈ ವಚನದಲ್ಲಿ ಬರುವ 'ಬಿಲಿ' (ಎಂದರೆ "ಕೊಂಡುಕೊಳ್ಳು') ಎಂಬ ಶಬ್ದ ಈಗ ಬಳಕೆಯಲ್ಲಿಲ್ಲ; ಬಹುಶಃ ಹಲವು ಶತಮಾನಗಳ ಹಿಂದೆಯೆ ಬಳಕೆ ತಪ್ಪಿರಬೇಕು. ವಚನಗಳ ಪ್ರತಿ ಮಾಡಿದವರು— ಅರ್ಥ ತಿಳಿ ಯದೆಯೊ ಕೈತಪ್ಪಿನಿಂದಲೊ— ಈ ಶಬ್ದವನ್ನು 'ಬಲಿ'ಯೆಂದೊ 'ಬರೆ' ಎಂದೊ ಮಾರ್ಪಡಿಸಿರಬಹುದು. ಆದುದರಿಂದಲೆ ಈಗಿನ ವಾಚಕರಿಗೆ ಅರ್ಥಹತ್ತದೆ ಇನ್ನೂ ಹೆಚ್ಚುಗೊಂದಲವನ್ನು ಉಂಟು ಮಾಡಲು ಕಾರಣ ವಾಗಿರಬೇಕು. ಇದೆ ಶಬ್ದ ಪ್ರಯೋಗವಾಗಿರುವ ಇನ್ನೊಂದು ಬಸವಣ್ಣನವರ ವಚನದ ಶುದ್ಧಪಾಠ ಕೆಳಗಿನಂತಿದೆ:

ಹೊಲಬುಗೊಂಡಱಿಸಬೇಡ, ಬಿಲಿತು ತರಬೇಡ;

ಬಲಿದೊಮ್ಮೆ 'ಶಿವಶರಣೆ'ನ್ನಿರಯ್ಯಾ !

ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ

ಕೂಡಲ ಸಂಗಮದೇವ ಭಕ್ತಿಲಂಪಟನಾಗಿ. (೧೮೦)

ಈ ವಚನವನ್ನು 'ವಚನಶಾಸ್ತ್ರರಹಸ್ಯದಲ್ಲಿ' ಶ್ರೀ ರಂಗನಾಥ ದಿವಾಕರರು ಕೆಳಗಿನಂತೆ ಮುದ್ರಿಸಿದ್ದಾರೆ:

ಹೊಲಬುಗೊಂಡು ಅರಸಬೇಡ. ಬರಿದು ತೆರಬೇಡ. ಒಲಿದರೊಪ್ಪೈ ಶಿವ ಶರಣೆನ್ನಿರಯ್ಯಾ. ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ .....

ಇತ್ಯಾದಿ. ಈ ಸುಧಾರಣೆಗೆ ತಾಳೆವೋಲೆಯ ಪ್ರತಿಗಳ ಆಧಾರವಿಲ್ಲವಾದುದರಿಂದ ಇದು ಕೇವಲ ಊಹೆಯಿಂದಲೆ ಮಾಡಿದುದೆಂದು ಮತ್ತೆ ಹೇಳಬೇಕಾಗಿಲ್ಲ. ಹೀಗೆ ಮೂಲ ಶಬ್ದದ ನಿಜವಾದ ರೂಪ ಇಲ್ಲವೆ ಅರ್ಥ ಸರಿಯಾಗಿ ತಿಳಿಯದ ಕಾರಣಕ್ಕಾಗಿ ಬೇರೆ ಬೇರೆ ಪ್ರತಿಕಾರರು ಅಥವಾ ಸಂಪಾದಕರು ಮಾಡಿದ ಅನೇಕಬಗೆಯ ತಿದ್ದುಪಾಟುಗಳಿಗೆ ನಿಜವಾಗಿಯೂ ಆಸ್ಪದವಿಲ್ಲವೆಂದು ನಮಗೆ ಕಂಡು ಬಂದಿದೆ. ಅಂತಹ ಸಂದರ್ಭಗಳಲ್ಲಿ ಮೂಲಮಾತೃಕೆಗಳನ್ನು ನೋಡಿ ಸರಿಯಾದ ಪಾಠಗಳನ್ನು ನಿರ್ಧರಿಸಿದ್ದೇವೆ. ಅಂತಹ ಹಲವು ಉದಾಹರಣೆಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಡುತ್ತೇವೆ:

| ಬಳಕೆಯಲ್ಲಿದ್ದ ಪಾಠ | ಈ ಸಂಸ್ಕರಣದ ವಚನ ಸಂಖ್ಯೆ | ನಾವು ಅಂಗೀಕರಿಸಿದ ಪಾಠ |
|---|---|---|
| ಹಾವ ತಿಂಪವರ | ೧೩೨ | ಹಾವು ತಿಂದವರ |
| ಮುಯ್ಯನಲು | ೧೯೮ | ಮುಯ್ಯಾನಲು |
| ನಡೆಯು ಕಂಡು ನಂಬೆ | ೨೫೪ | ನಡೆಯ ಕಂಡಾ, ನಂಬಿ! |
| ಕಪಟವೇಷದಿಂದಾಡುವ | ೩೪೦ | ಕಪ್ಪುಡಿ ವೇಷದಿಂದಾನು ಬಂದಾಡುವೆ |
| ಕಳೆದ ಹೊಲೆಯನೆಪ್ಪಯ್ಯ ಜಾತಿಸೂತಕ (ವ) | ೩೪೭ | ಕಳೆದ ಹೊಲೆಯನೆಪ್ಪಯ್ಯ ಜಾತಿ ಸೂತಕ! |
| ವಚದ ಹಾರವ | ೪೨೯ | ತ್ವಚದಾಹಾರವ |
| ಆವ ನೇಮವಾದರೇನು, ಹೇವ ವಿಲ್ಲದಂಗೈಸಬಹುದೆ? | ೪೩೮ | ಆವ ನೇಮವಾದರೇನು ಹೇವ ವಿಲ್ಲದಂಗೈಸಬಹುದೆ? |
| ಕಿಂಕರನ ಮನೆಯಲ್ಲ ಕಿಂಕರನು ಆನು | ೪೬೯ | ಕಿಂಕರನ ಮನೆಯಲ್ಲಿ ಕಿಂಕಿಲವನು ಆನು ಹಾರುತಿಪ್ಪೆನು |

| | | |
|---|---|---|
| ಕೆನ್ನೆಯಲ್ಲಿ ಕೈವಿಡಿದ | ೫೦೪ | ಕನ್ನೆಯಲ್ಲಿ ಕೈವಿಡಿದ |
| ಹೋವುದ ನೇವುದಲ್ಲಿ | ೫೭೬ | ಹೋವುದ ನೆವದಲ್ಲಿ |
| ಹವಿಯ ಬೆಳಿದಂತಾಯ್ತು | ೫೯೩ | ಹವಿಯು ಬೇಳಿದಿಂತಾಯ್ತು |
| ಜೊಳ್ಳು ಆಳು ನಾಸಲ್ಲ ೧೭ | | |
| ಜೋಳವಳೆಯುವವ ನಾನಾಲ್ಲ೧ಲ ೬೯೮ | | ಜೋಳವಾಳಿಯಾನಲ್ಲ |
| ತನುಮನಧನವೆಂಬ ಕನ್ನಡಿ | ೮೯೫ | ತನುಮನಧನವೆಂಬ ಕನ್ನಡಿ |
| ಕೋಶಪಾವನ | ೬೪೭ | ಕೋಶಪಾನ |

## ೪

ವಚನ ಸಮೂಹ ಒಂದು ಶಾಸ್ತ್ರವೆಂಬ—ಅದರಲ್ಲಿಯೂ ವೀರಶೈವ (ಎಂದರೆ ಲಿಂಗಾಯತ) ಮತದ ಶಾಸ್ತ್ರವೆಂಬ—ಅಭಿಪ್ರಾಯ ಸಾಮಾನ್ಯವಾಗಿದೆ. ಈ ಅಭಿಪ್ರಾಯ ಒಂದು ದೃಷ್ಟಿಯಿಂದ ಸರಿಯೆನಿಸಿದರೂ, ವಚನಗಳಲ್ಲಿ ಸಾಹಿತ್ಯಲಕ್ಷಣಗಳು ವಿಪುಲವಾಗಿವೆ, ಪರಿಸ್ಫುಟವಾಗಿವೆಯೆಂಬುದನ್ನು ಸಾಹಿತ್ಯಕೋವಿದರು ಕಂಡು ಹಿಡಿದು ಅವನ್ನು ಸಾಹಿತ್ಯಕೋಟಿಯಲ್ಲಿ ಪರಿಗಣಿಸಿದ್ದಾರೆ. ಕನ್ನಡದಲ್ಲಿ, ಪ್ರಾಚೀನಕಾಲದಲ್ಲಿ, ಅತಿವಿರಳವಾಗಿ ಚಂಪೂಕಾವ್ಯಗಳಲ್ಲಿ ಪದ್ಯಕ್ಕೆ ಅಧೀನವಾಗಿ, ಉಪಯೋಗವಾಗುತ್ತಿದ್ದ ಗದ್ಯರೂಪ ಕನ್ನಡ ಸಾಹಿತ್ಯದ ಒಂದು ಸ್ವತಂತ್ರಭಾಗವಾಗಿ ಏರ್ಪಟ್ಟುದು ವಚನರಚನೆಗೆ ಮೊದಲಾದಂದಿನಿಂದ ಎಂದು ಸಾಹಿತ್ಯಜ್ಞರು ಅಂಗೀಕರಿಸಿದ್ದಾರೆ.

ಹೀಗೆ ವಚನಗಳು ಗದ್ಯಸಾಹಿತ್ಯವೆಂದು ಗಣಿಸಲ್ಪಟ್ಟಿದ್ದರೂ ಇವು ಬರಿಯ ಗದ್ಯವಲ್ಲವೆಂಬುದು ಇದೀಗ ಹಲವರಿಗೆ ಹೊಳೆಯತೊಡಗಿದೆ. ವಚನಗಳನ್ನು ಅವುಗಳ ಆರಂಭದ ಕಾಲದಿಂದಲೂ ಹಾಡುತ್ತಿದ್ದರೆಂಬುದು ಹರಿಹರನ ರಾಘವಾಂಕರ ಗ್ರಂಥಗಳಿಂದ ತಿಳಿದು ಬರುತ್ತಿದೆ. ಕಂದವೃತ್ತಾದಿ ಪದ್ಯಗಳಂತೆ ವಚನಗಳು ಛಂದೋಬದ್ಧವಲ್ಲವಾದರೂ, ಗದ್ಯದಂತೆ ಸ್ವಚ್ಛಂದವಾದುವೂ ಅಲ್ಲ. ಇವುಗಳ ರಚನೆಯಲ್ಲಿ ತೋರುವ ಒಂದು ವಿಧದ ಲಯಬದ್ಧತೆ (rhythm) ಇವುಗಳನ್ನು ಹಾಡುಗಳಂತೆ ಸರಾಗವಾಗಿ ಅನ್ನಲು ಅನುಕೂಲ ಕಲ್ಪಿಸಿದೆ.

ವಚನಗಳಲ್ಲಿ ಪ್ರತೀಯವಾಗುವ ಲಯ ನೂತನ ಬಗೆಯದಾದುದರಿಂದಲೂ, ಕನ್ನಡ ಓದುಗರಲ್ಲಿ ಹಲವರಿಗೆ ಇನ್ನೂ ಅಪರಿಚಿತವಾಗಿರುವುದರಿಂದಲೂ, ಈ ಲಯವನ್ನು ಕುರಿತು ಇಲ್ಲಿ ಕೆಲಮಟ್ಟಿಗೆ ವಿಸ್ತಾರವಾಗಿಯೆ ಬರೆಯುವುದಕ್ಕೆ ತೊಡಗಿದ್ದೇವೆ; ದಕ್ಕಾಗಿ ವಾಚಕರ ತಾಳ್ಮೆಯನ್ನು ಕೋರುತ್ತೇವೆ.

ಮೊದಲು 'ಲಯ'ದ ಮರ್ಮವನ್ನು ತಿಳಿದುಕೊಳ್ಳುವುದು ಆವಶ್ಯಕ. ಲಯ ಒಂದು ಬಗೆಯ ಆಂದೋಲನ, ಪುನರಾವೃತ್ತಿ ಅಥವಾ ಏರಿಳಿತ. ಈ ಆಂದೋಲನಕ್ಕೆ ಮೊದಲು, ನಡು-ಕೊಳಗಳಿದ್ದು ಅವುಗಳ ಮಧ್ಯಂತರದ ಅವಧಿ ಸರಿಸಮಾನವಾಗಲಿ, ಹೆಚ್ಚು-ಕಡಿಮೆ ಪ್ರಮಾಣವುಳ್ಳದ್ದಾಗಲಿ ಇರಬಹುದು. ಆದರೆ ಇವರಲ್ಲೆಲ್ಲ ಒಂದು ಬಗೆಯ ನಿಯಮ ಅಥವಾ ಕ್ರಮ ವಿರಬೇಕಾದದು ಸಾಮಾನ್ಯ. ಒಮ್ಮೊಮ್ಮೆ ಈ ನಿಯಮಿತತೆಗೆ ಅನಿರೀಕ್ಷಿತವಾಗಿ ಭಂಗ ಬರುವುದರಿಂದಲೂ ಮೂಲ ಆಂದೋಲನ ಹೆಚ್ಚು ಒಡೆದು ಕಾಣಬಹುದಾಗಿದೆ.

ಸಂಗೀತದಲ್ಲಿ ಲಯವು ತಾಳದಿಂದ ಎದ್ದು ಕಾಣುವುದು; ಬರಿಯ ರಾಗದಲ್ಲಿ ಸ್ವರದ ಏರಿಳಿತಗಳಿಂದ ತೋರ್ಪಡುವುದು-ಎಂಬುದು ಎಲ್ಲರಿಗೂ ತಿಳಿದ ವಿಷಯವೆ ಆಗಿದೆ. ಕವಿತೆಯಲ್ಲಿ ತೋರುವ ಲಯವು ಛಂದಸ್ಸನ್ನು ಆಶ್ರಯಿಸಿರುತ್ತದೆ. ಇನ್ನು ವಚನಗಳಲ್ಲಿ ಶ್ರುತವಾಗುವ ಲಯಕ್ಕೆ ಒಂದೊಂದು ವಾಕ್ಯಗಳ ಅಂಗಾಂಗಗಳಲ್ಲಿ ತೋರುವ ರಚನಾಸಾಮ್ಯ ( Parallelism )ವೆ ಮುಖ್ಯ ಕಾರಣವೆನ್ನಬಹುದು.

ಕವಿತೆಗೆ ತಳಹದಿಯಾದ ಲಯವನ್ನು ಛಂದಸ್ಸಿನ ದೃಷ್ಟಿಯಿಂದ ವಿಚಾರಿಸಿದಾಗ (೧) ಗುರು-ಲಘು ಅಕ್ಷರಗಳ ವಿನ್ಯಾಸ, (೨) ಮಾತ್ರೆಗಳ ವಿವಿಧ ವಿನ್ಯಾಸ, (೩) ಸ್ವರಾಘಾತ (accent : ಅಕ್ಷರಗಳನ್ನು ಒತ್ತಿ ಅಥವಾ ತೇಲಿಸಿ ಉಚ್ಚರಿಸುವುದು)- ಇವುಗಳಿಂದ ಸಾಧಿಸುವರೆಂಬುದು ವಿದಿತವೆ ಇದೆ. ಕಂದ ವೃತ್ತಾದಿ ಪದ್ಯಗಳನ್ನು ಛಂದಸ್ಸಿನನುಗುಣವಾಗಿ ಲಯದೊಂದಿಗೆ ಓದುವುದು ಸರಿಯೆನಿಸಿದರೂ, ಅರ್ಥದ ದೃಷ್ಟಿಯಿಂದ

ಓದುವಾಗ ಅವುಗಳನ್ನು ಗಣಾನುರೋಧವಾಗಿ ತುಂಡು ಮಾಡದೆ ಬೇರೆ ರೀತಿಯಲ್ಲಿ ತುಂಡು ಮಾಡಬಹುದೆಂಬುದು ಓದುಗರೆಲ್ಲರ ಅನುಭವಕ್ಕೆ ಬಂದ ಸಂಗತಿ. ಉದಾಹರಣೆಗಾಗಿ:

ಎಳವೆಱೆ ಬಳೆಯದ ಗಗನ-
ಸ್ಥಳಿ, ಸಸಿ ಬೆಳೆಯದ ಧರಿತ್ರಿ, ಮೌಕ್ತಿಕ ರತ್ನಂ
ಬಳೆಯದ ಶುಕ್ತಿಕೆ, ಗರ್ಭಂ
ಬಳೆಯದ ಬಾಲಕಿಯ ಬಸಿಱನರ್ಥಕಮಲ್ತೆ

ಎಂಬೀ ಕಂದಪದ್ಯವನ್ನು ಅರ್ಥಾನುಸಾರವಾಗಿ

ಎಳವೆಱೆಬಳೆಯದ ಗಗನಸ್ಥಳಿ,
ಸಸಿ ಬೆಳೆಯದ ಧರಿತ್ರಿ,
ಮೌಕ್ತಿಕರತ್ನಂ ಬಳೆಯದ ಶುಕ್ತಿಕೆ,
ಗರ್ಭಂಬಳೆಯದ ಬಾಲಕೀಯ ಬಸಿಱ್
ಅನರ್ಥಕಮಲ್ತೆ ?

ಎಂದೂ ಬರೆಯಬಹುದು. ಎರಡನೆಯ ರೀತಿಯಲ್ಲಿ ಬರೆಯುವುದರಿಂದ ಅಥವಾ ಆ ರೀತಿ ಓದುವುದರಿಂದ, ಅರ್ಥವು ಸರಳವಾಗಿ ಹೊರಹೊಮ್ಮುವುದಕ್ಕೆ ಅನುಕೂಲವಾಗುವುದಲ್ಲದೆ, ಇವರಲ್ಲಿ ಬೇರೊಂದು ಬಗೆಯ ಲಯವೂ ಗೋಚರವಾಗುವುದು. ಮೊದಲಿನ ನಾಲ್ಕು ಸಾಲುಗಳಲ್ಲಿ ಕಂಗೊಳಿಸುವ ವಾಕ್ಯಖಂಡಗಳ ರಚನಾಸಾಮ್ಯವೆ ಈ ಹೊಸ ಲಯಕ್ಕೆ ಕಾರಣವೆಂಬುದು, ಈ ರೀತಿ ಬರೆಯುವುದರಿಂದ ತಟ್ಟನೆ ನಮ್ಮ ಗಮನಕ್ಕೆ ಬರುತ್ತಿದೆ.

ಇದರಂತೆ ಹರಿಹರದೇವನ :

ಕರಮೆಸಡಿತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋತ್-
ಕರದ ವಿಪತ್ತು ತಾರೆಗಳ ತುತ್ತು ಸುಧಾಂಬುಧಿಯೊತ್ತು ಜಾರಸೌಂ-
ದರಿಯರ ಮಿತ್ತುವಂಬರಪುಲಿಂದಿಯ ಮೂಗಿನ ಮುತ್ತು ನೋಡಲ-
ಚ್ಚರಿಯೆನಿಸಿತ್ತು ಮೂಡದೆಸೆಯಿಂದೆಸೆಯಿತ್ತು ಹಿಮಾಂಶುಮಂಡಲಂ.

ಎಂಬೀ ಪದ್ಯವನ್ನು ಒಳಗಣ ವಾಕ್ಯಖಂಡಗಳ ರಚನಾಸಾಮ್ಯವನ್ನನುಸರಿಸಿ ಒಡೆದು ಕೆಳಗೆ ಕಾಣಿಸಿದಂತೆ ಬರೆಯಬಹುದು ;

ಕರಮೆಸೆದಿತ್ತು, ಕೌಮುದಿಯ ಬಿತ್ತು,
ಚಕೋರಿಯ ತುತ್ತು, ನೀರಜೋತ್ಕರದ ವಿಪತ್ತು,
ತಾರೆಗಳ ತುತ್ತು, ಸುಧಾಂಬುಧಿಯೊತ್ತು,
ಜಾರಸೌಂದರಿಯರ ಮಿತ್ತು, ಅಂಬರಪುಲಿಂದಿಯ ಮೂಗಿನ ಮುತ್ತು,
ನೋಡಲಚ್ಚರಿಯುನಿಸಿತ್ತು, ಮೂಡಪೆಸೆಯಿಂದೆಸೆಯಿತ್ತು
ಹಿಮಾಂಶುಮಂಡಲಂ.

ಇಲ್ಲಿ ವಾಕ್ಯಖಂಡಗಳ ರಚನಾಸಾಮ್ಯಕ್ಕೆ ಪ್ರಾಸ ಅನುಪ್ರಾಸಗಳ, ಎಂದರೆ ಆಂತರಿಕವಾದ ಇನ್ನೊಂದು ಲಯದ, ಸಾಹಾಯ್ಯವಿದೆಯೆಂಬುದು ಸ್ಪಷ್ಟವಿದೆ. ಈ ಬಗೆಯ ಲಾಲಿತ್ಯವನ್ನನುಸರಿಸಿ ಓದುವುದರಿಂದ ಪ್ರತಿ ಪಾದದ ಕೊನೆಯಲ್ಲಿ ನಿಯತವಾಗಿ ಯತಿಯುಳ್ಳ (ಸಂಸ್ಕೃತಜನ್ಯ)ಅಕ್ಷರ ವೃತ್ತಗಳ ಬೇಸರ ತರುವ ಏಕತಾನತೆ ( monotony ) ಯನ್ನು ತಪ್ಪಿಸಬಹುದಲ್ಲದೆ, ಪಾದಪಾದಗಳಲ್ಲಿ ಬೇರೆ ಬೇರೆ ಕಡೆಗಳಲ್ಲಿ ಹಲವು ಎಡೆಗಳಲ್ಲಿ ನಿಲ್ಲುವ ಅವಕಾಶವನ್ನು ಕಲ್ಪಿಸಿ, ಅನೇಕ ಪ್ರಕಾರದ ವೈವಿಧ್ಯವನ್ನೂ ಸಾಧಿಸಬಹುದು. ಸಂಸ್ಕೃತದಲ್ಲಿ ಸಾಧ್ಯವಾಗದ ಈ ವೈವಿಧ್ಯವನ್ನು ನಿಯತಸ್ಥಾನದ ಯತಿಯುನ್ನು ಮೀರಿ, ಕನ್ನಡ ಕವಿಗಳು ಹಲವಂದದಿಂದ ವೃತ್ತಪದ್ಯಗಳಲ್ಲಿಯೆ ಸಾಧಿಸಿರುವುದು ಕನ್ನಡ ಸಾಹಿತ್ಯದ ಒಂದು ಸಂಸ್ಮರಣೀಯ ವೈಶಿಷ್ಟ್ಯವಾಗಿದೆ.

ಇನ್ನೊಂದು ಉದಾಹರಣೆಯೆಂದು ಕುಮಾರ ವ್ಯಾಸನ ಸುಪ್ರಸಿದ್ಧ ಪದ್ಯವನ್ನು ಈ ಕೆಳಗೆ ಕಾಣಿಸಿದ ರೀತಿಯಲ್ಲಿ:

ಅರಸುಗಳಿಗಿದು ವೀರ
ದ್ವಿಜರಿಗೆ ಪರಮವೇದದ ಸಾರ
ಯೋಗೀಶ್ವರರ ತತ್ತ್ವವಿಚಾರ
  ಮಂತ್ರಿಜನಕ್ಕೆ ಬುದ್ಧಿಗುಣ;
ವಿರಹಿಗಳ ಶೃಂಗಾರ
ವಿದ್ಯಾಪರಿಣತರ ಅಲಂಕಾರ
  ಕಾವ್ಯಕೆ ಗುರು—
ವೆನಲು ರಚಿಸಿದ ಕುಮಾರವ್ಯಾಸ ಭಾರತವ.

ಎಂದು ಬರೆಯುವುದರಿಂದ ಅದರಲ್ಲಿಯ ಆಂತರಿಕ ಲಯ ಸ್ಫುಟವಾಗಿ ಎದ್ದು ಕಾಣುವುದು. ಅಲ್ಲದೆ, 'ಮಂತ್ರಿಜನಕ್ಕೆ ಬುದ್ಧಿಗುಣ' ಮತ್ತು 'ಕಾವ್ಯಕೆ ಗುರು' ಎಂಬ ನುಡಿಗಡಣಗಳು ಆ ಲಯಕ್ಕೆ ಭಂಗವೊಡ್ಡಿ ಆ ಲಯವನ್ನು ಇನ್ನಷ್ಟು ಢಾಳವಾಗಿಯೆ ಸೂಚಿಸುತ್ತಿವೆಯೆಂಬುದೂ ಇಲ್ಲಿ ವ್ಯಕ್ತವಾಗುವುದು.

ವಾಕ್ಯಗಳ ಅಂಗಾಂಗಗಳ ರಚನಾಸಾಮ್ಯದಲ್ಲಿ ತೋರುವ ಲಯವೇ ಪುರಾತನ ಭಾಷೆಗಳಲ್ಲಿ ಒಂದಾದ ಹಿಬ್ರೂ (Hebrew) ಭಾಷೆಯ ಪದ್ಯ ರಚನೆಗೆ ಆಧಾರವಾಗಿತ್ತೆಂಬುದೂ ಬಹುಭಾಷಾಪಂಡಿತರಿಗೆ ವೇದ್ಯವಾದ ಸಂಗತಿಯಾಗಿದೆ.[೨೪] ಮೂಲದಲ್ಲಿ ಹಿಬ್ರೂಭಾಷೆಯಲ್ಲಿ ರಚಿತವಾಗಿದ್ದ ಜ್ಯೂ ಮತ್ತು ಕ್ರಿಶ್ಚಿಯನ್ ಮತಗಳ ಧರ್ಮಗ್ರಂಥವಾಗಿದ್ದ ಬೈಬಲ್ (Bible) ಗ್ರಂಥವು ಕ್ರಿ. ಶ. ೧೭ ಶತಮಾನದಲ್ಲಿ ಇಂಗ್ಲಿಷ ಪಂಡಿತ ಮಂಡಲಿಯೊಂದರಿಂದ ರಾಜಾಶ್ರಯದಲ್ಲಿ ಇಂಗ್ಲಿಷಿಗೆ ಅನುವಾದಿಸಲಾಯಿತು. ಆ ಕಾಲದಿಂದಲೂ ಈ ಅನುವಾದ ಆಂಗ್ಲಸಾಹಿತ್ಯದಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದಿದೆ. ಈ ಭಾಷಾಂತರವು ಹಿಬ್ರೂಭಾಷೆಯಲ್ಲಿಯ ಲಯವನ್ನು ಬಹುಮಟ್ಟಿಗೆ ಕಾಪಾಡಿಕೊಂಡು ಬಂದಿದೆ[೨೫]. ಆದರೆ, ಇದರ ಮುದ್ರಣ ಆರಂಭದಿಂದಲೂ ಮೂರು ಶತಮಾನಕಾಲ ಅತೃಪ್ತಿಕರವಾಗಿಯೆ ಉಳಿದಿದ್ದಿತು ಈ ಗ್ರಂಥ ಒಂದೇ ವಿಧವಾಗಿ ಸರಳಗದ್ಯದ ರೀತಿಯಲ್ಲಿಯೆ, ಆದರೂ ವಾಕ್ಯಸಮುದಾಯ (Paragraph)ಗಳಿಲ್ಲದೆ, ಒಂದೊಂದೆ ವಾಕ್ಯ ಬೇರೆ ಬೇರೆಯಾಗಿ ಕ್ರಮಾಂಕಗಳೊಂದಿಗೆ ಮುದ್ರಿತವಾಗುತ್ತ ಬಂದಿದೆಯೆಂಬುದು ಇದನ್ನು ನೋಡಿದವರಿಗೆಲ್ಲ ಗೊತ್ತಿದ್ದ ಮಾತಾಗಿದೆ. ಮತಾಭಿಮಾನ, ಚಿಕ್ಕಂದಿನ ಅಭ್ಯಾಸ–ಇವುಗಳ ನೆರವಿಲ್ಲದೆ, ಬೈಬಲ್ ಗ್ರಂಥವನ್ನು ಆದ್ಯಂತವಾಗಿ ಓದುವುದು ದುಷ್ಕರವೆ ಸರಿ. ಆದರೂ ಉಚ್ಚಸಾಹಿತ್ಯವೆಂಬ ದೃಷ್ಟಿಯಿಂದ ಭಾಷೆಯ ಶುದ್ಧತೆಗಾಗಿ, ಶೈಲಿಯ ರಮ್ಯತೆಗಾಗಿ ಈ ಗ್ರಂಥದ

ಕೆಲವೊಂದು ವಿಶಿಷ್ಟಭಾಗಗಳನ್ನು ಮಾತ್ರ ಮನನಮಾಡುವ ಸಂಪ್ರದಾಯವು ನೆಲೆಗೊಂಡಿದ್ದಿತು.

ಈ ಬೈಬಲ್‌ಗ್ರಂಥದಲ್ಲಿ ಇತಿಹಾಸ, ಕಥೆ, ಪ್ರಬಂಧ, ಖಂಡಕಾವ್ಯ, ಭಾವಗೀತೆ, ಗಾದೆಯ ಮಾತುಗಳು, ನಾಟ್ಯಚ್ಛಟ ಮುಂತಾದ ಸಾಹಿತ್ಯದ ವಿವಿಧರೂಪಗಳು ಅಡಕವಾಗಿವೆಯೆಂಬ ಸಂಗತಿ ಈ ಗ್ರಂಥವನ್ನು ಆಳವಾಗಿ ಅಭ್ಯಾಸಮಾಡಿದ ಕೆಲ ಸಾಹಿತ್ಯಿಗರಿಗೆ ಮಾತ್ರ ಮನವರಿಕೆಯಾಗಿದ್ದಿತು. ಅಂತಹರಿಗೆ ಬಹುಕಾಲದಿಂದ ಬಂದ ಸಾಂಪ್ರದಾಯಿಕ ಮುದ್ರಣ ರೀತಿ ಅಸಮರ್ಪಕವಾಗಿಯೆ ತೋರುತ್ತಿದ್ದಿತು. ಈಚೆಗೆ ಕೆಲ ಸಾಹಿತ್ಯಾಭ್ಯಾಸಿಗಳ, ಪಂಡಿತರ ಮತ್ತು ಪ್ರಾಧ್ಯಾಪಕರ ದೀರ್ಘಪರಿಶ್ರಮದ ಫಲವಾಗಿ ಬೈಬಲ್ಲಿನಲ್ಲಿ ನೂತನ ಸಂಸ್ಕರಣಗಳು ಕೆಲವು ಪ್ರಸಾರವಾಗಿವೆ. ಅವುಗಲ್ಲಿ ನಾಟಕ, ಸಂಭಾಷಣೆ, ಪದ್ಯ, ಗಾದೆಯ ಮಾತು—ಮುಂತಾದ ಸಾಹಿತ್ಯದ ನಾನಾಬಗೆಗಳು ಸ್ಪಷ್ಟವಾಗಿ, ಕಣ್ಣಿಗೇ ಕಾಣುವ ರೀತಿಯಲ್ಲಿ ಮುದ್ರಿತವಾಗಿವೆ ಅಲ್ಲದೆ, ಬಹುಕಾಲ ಗದ್ಯವೆಂದು ಅಂಗೀಕೃತವಾದ ಹಲವು ಭಾಗಗಳು ಲಯಾನುಸಾರವಾಗಿ ಈ ನೂತನ ಸಂಸ್ಕರಣದಲ್ಲಿ ಪದ್ಯದಂದದಲ್ಲಿಯೆ ಅಚ್ಚಾಗಿರುವುದು ಇನ್ನೂ ವಿಶೇಷ. ಬೈಬಲ್ಲಿನ ಮೂಲಭಾಷೆಯಾದ ಹಿಬ್ರುವಿನಲ್ಲಿಯ ಪದ್ಯರಚನಾ ಪದ್ಧತಿಯನ್ನು ವಿಮರ್ಶಕರು ತಾರತಮ್ಯದೃಷ್ಟಿಯಿಂದ ಅಭ್ಯಾಸಮಾಡಿ, ಆವಶ್ಯಕವಾದ ಈ ಸುಧಾರಣೆಯನ್ನು ಕೈಕೊಂಡಿದ್ದಾರೆಂಬುದು ಸ್ಪಷ್ಟವಾಗಿ ಗೊತ್ತಾಗುವಂತಿದೆ.

ಇಷ್ಟವಾದ ಈ ಸುಧಾರಣೆಯ ಫಲವಾಗಿ ಆಂಗ್ಲ ಬೈಬಲ್ಲಿನ ಬೆಲೆ ಜಾಗತಿಕ ಸಾಹಿತ್ಯದ ದೃಷ್ಟಿಯಿಂದ ಅತ್ಯಧಿಕವಾಗಿಯೆ ಏರಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದ. ಕನ್ನಡ ವಚನಸಾಹಿತ್ಯವೂ—ಅದರಲ್ಲಿಯೂ ಮುಖ್ಯವಾಗಿ ಬಸವಣ್ಣನವರ ವಚನಗಳು—ಇದೆ ಬಗೆಯ ಲಯವನ್ನು ಒಳಗೊಂಡಿರುವುದರಿಂದ ಇಂತಹ ಸುಧಾರಣೆಯನ್ನು ವಚನ ಸಾಹಿತ್ಯದ ಮುದ್ರಣದಲ್ಲಿಯೂ ಮಾಡಲು ಬರುವುದೆಂದು ನಮಗೆ ತೋಚಿರುವುದರಿಂದ, ಆ ವಿಷಯವನ್ನು ಕುರಿತು ಮುಂದೆ ಸಂಗ್ರಹವಾಗಿಯೇ ಪ್ರಸ್ತಾವ ಮಾಡುತ್ತೇವೆ.

೫

ವಚನಗಳು ಗದ್ಯದ ಒಂದು ಮಾದರಿ ಎಂದು ಸ್ಥೂಲವಾಗಿ ಹೇಳಬಹುದಾದರೂ, ಅವು ನಿಜವಾಗಿಯೂ, ಗದ್ಯದ ಒಂದು ವಿಶಿಷ್ಟವಾದರಿಯೆಂದೇ ಹೇಳುವವವುದು ವಿಹಿತ. ಸೂಕ್ಷ್ಮವಾಗಿ ವಿಚಾರಿಸಿದರೆ ವಿಚನಗಳು ಗದ್ಯಪದ್ಯದ ನಡುವಿನ ಒಂದು ಮಾದರಿಯೆಂದೇ ಹೇಳಬೇಕಾಗುವುದು. ವಚನಗಳಲ್ಲಿ ಗದ್ಯದ ನಿರರ್ಗಳತೆ ಇಲ್ಲದಿದ್ದರೂ ಅದರ ಸರಳತೆ ಇದೆ; ಪದ್ಯದ ಕ್ರಮಬದ್ಧ ಛಂದೋಗತಿ ಇಲ್ಲದಿದ್ದರೂ ಅದರ ಲಯವಿದೆ. ಹಲವು ವಚನಗಳಲ್ಲಿ ಈ ಲಯವು ಛಂದೋಗತಿಗೆ ಬಹು ಸಮೀಪವರ್ತಿಯಾಗಿರುವುದರಿಂದ ಅಂತಹ ವಚನಗಳನ್ನು ಹೆಚ್ಚು ವೆತ್ಯಾಸಮಾಡದೆ ಸರಾಗವಾಗಿ ಹಾಡಲು ಅನುಕೂಲವಾಗಿರುವುದು ಕಂಡುಬರುತ್ತಿದೆ೨೨. ಆದರೂ ವಚನಗಳಲ್ಲಿಯೂ ಲಯ ಒಮ್ಮೆಲೆ ಕಣ್ಣಿಗೆ ಕಾಣುವಷ್ಟು ಸ್ಥೂಲವಾಗಿಯಾಗಲಿ, ಕಿವಿಗೆ ಕೇಳುವಷ್ಟು ಘನವಾಗಿಯಾಗಲಿ ಇರದೆ ಹೆಚ್ಚು ಸೂಕ್ಷ್ಮವಾಗಿಯೆ ಇರುತ್ತಿದೆ.

ವಚನಗಳಲ್ಲಿಯ ಲಯ ಅನೇಕ ರೀತಿಯಲ್ಲಿ ಗೋಚರವಾಗಬಹುದಾಗಿದೆ. ಒಮ್ಮೊಮ್ಮೆ ಅದು ಆದಿ, ಮಧ್ಯ, ಅಥವಾ ಅಂತ್ಯ ಪ್ರಾಸಗಳಲ್ಲಿ ಕಂಗೊಳಿಸಬಹುದು. ಈ ಪ್ರಾಸ ಕೆಲವಕ್ಷರಗಳ ಪುನರಾವೃತ್ತಿಯನೊಳಗೊಳ್ಳಬಹುದು; ಇಲ್ಲವೆ ಒಂದು ಇಡಿಯ ಶಬ್ದದ ಪುನರಾವೃತ್ತಿಯಾಗಿರಬಹುದು. ಹಲವು ನಾರಿ ಹಿಬ್ರು ಪದ್ಧತಿಯಂತೆ ವಾಕ್ಯಗಳ ಅಥವಾ ವಾಕ್ಯಾಂಗಗಳ ರಚನಾಸಾಮ್ಯದಿಂದ ಈ ಲಯವನ್ನು ಗುರುತಿಸಬಹುದು. ಮತ್ತೆ ಕೆಲವೆಡೆಗಳಲ್ಲಿ ಅರ್ಥಸಾಮ್ಯದಲ್ಲಿಯೆ ಈ ಲಯವನ್ನು ಕಾಣಬಹುದು. ಹೀಗೆ ಹಲವಂದದಿಂದೆ ಸಾಧಿತವಾದ ಈ ಲಯವನ್ನು ಕಂಡು ಹಿಡಿದು, ಅದು ಓದುಗರಿಗೂ ಸ್ಪಷ್ಟವಾಗಿ ಕಾಣುವ ರೀತಿಯಲ್ಲಿ ವಚನಗಳ ವಿವಿಧ ಭಾಗಗಳನ್ನು ಪಾದಾಪಾದವಾಗಿ ವಿಂಗಡಿಸಿ ಮುದ್ರಿಸಿದರೆ ಅವುಗಳ ಲಾಲಿತ್ಯ ಹೆಚ್ಚು ಸ್ಫುಟವಾಗಿ ಹೊರಹೊಮ್ಮುವುದೆಂಬುದರಲ್ಲಿ ಸಂದೇಹವಿಲ್ಲ. ಇದೇ ರೀತಿ, ಈಗ ಎಷ್ಟೋ ಕಡೆಗಳಲ್ಲಿ ಈಗ ಸಂದಿಗ್ಧವೆಂದು

ತೋರುವ ವಚನಗಳ ಅರ್ಥವೂ ಸುಗಮವಾಗುವುದೆಂದು ಕಂಡಿತವಾಗಿ ಹೇಳಬಹುದು. ಇದೂ ಅಲ್ಲದೆ, ಸಾಂಪ್ರದಾಯಿಕವಾದ ಪದ್ಧತಿಯಿಂದ ಮುದ್ರಣವಾದ ಅನೇಕ ವಚನಗಳಲ್ಲಿ ನಿರರ್ಥಕವೆಂದೊ, ಅನಾವಶ್ಯಕವಾಗಿ ಪುನರುಕ್ತವಾದುವೆಂದೊ ತೋರುವ ಪದಗಳು, ಅವೇ ವಚನಗಳನ್ನು ಲಯಾನುಸಾರವಾಗಿ ಮುದ್ರಿಸಿದಾಗ, ಆವಶ್ಯಕವೆಂದೂ ಭಾವಗರ್ಭಿತವೆಂದೂ ಕಂಡು ಬರುವುವು; ಮೇಲಾಗಿ, ಆಯಾ ವಚನಗಳ ಲಯವು ಅಂತಹ ಪದಗಳನ್ನೆ ಅವಲಂಬಿಸಿರುವುದೆಂದೂ ಗೋಚರವಾಗುವುದು. ಈ ಮಾತಿನ ಯಥಾರ್ಥತೆಯನ್ನು ತೋರಿಸುವುದಕ್ಕಾಗಿ, ಒಂದೆರಡು ಉದಾಹರಣೆಗಳನ್ನು ಇಲ್ಲಿ ಕೊಡುವುದು ಉಚಿತವೆಂದು ಬಗೆಯುತ್ತೇವೆ:

(೧) ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ ಗ್ರಹಣ. ಸಂಕ್ರಾಂತಿಯಿಂದ ವೆಗ್ಗಳ ಏಕಾದಶಿ, ವ್ಯತೀಪಾತದಿಂದ ವೆಗ್ಗಳ. ಸೂಕ್ಷ್ಮ ಶಿವಪಥವನರಿದವಂಗೆ ಹೋಮ ನೇಮ ಜಪತಪದಿಂದ ವೆಗ್ಗಳ. ಕೂಡಲಸಂಗಮದೇವ ನಿಮ್ಮ ಮಾಣದೆ ನೆನೆವವಂಗೆ.

ಇದೊಂದು ಬಸವಣ್ಣನವರ ವಚನ; ಸಾಂಪ್ರದಾಯಿಕ ರೀತಿಯಲ್ಲಿ ಅಚ್ಚಾದಂತೆಯೇ ಇಲ್ಲಿ ಉದಾಹರಿಸಲಾಗಿದೆ. ಈ ವಚನದ ಅರ್ಥವನ್ನು—ಕೂಡಲಸಂಗನ ಭಕ್ತರಿಗೆ ತಿಥಿ, ನೇಮ, ಹೋಮ, ಮೊದಲಾದುವು ಮಹತ್ತ್ವವುಳ್ಳವಲ್ಲ—ಎಂದು ಸ್ಥೂಲವಾಗಿ ಮಾಡಿಕೊಳ್ಳಬಹುದಾದರೂ, ಶಬ್ದಶಃ ಇದರ ಸರಿಯಾದ ಅರ್ಥವನ್ನು ನಿರ್ಧರಿಸುವುದು ಬಹು ಪ್ರಯಾಸಕರವೆ ಸರಿ! ಕಷ್ಟಪಟ್ಟು ಅರ್ಥಹಚ್ಚಹೋದರೆ: ಗ್ರಹಣವು ಇಪ್ಪತ್ತುನಾಲ್ಕು ತಿಥಿಗಳಿಗಿಂತ ಅಧಿಕ; ಸಂಕ್ರಾಂತಿಗಿಂತ ಏಕಾದಶಿ ಅಧಿಕ; (ಆದರೆ ಸಂಕ್ರಾಂತಿ ಗ್ರಹಣ ಇವುಗಳಲ್ಲಿ ಯಾವುದು ಅಧಿಕವೆಂಬುದು ತಿಳಿಯುವಂತಿಲ್ಲ)—ಮುಂದೆ, ವ್ಯತೀಪಾತಕ್ಕಿಂತ ಹೆಚ್ಚಿನದು—ಯಾವುದು? ಗೊತ್ತಾಗುವ ಹಾಗಿಲ್ಲ. ಇರಲಿ, ಇನ್ನೂ ಮುಂದಕ್ಕೆ ಹೋದರೆ—ಹೋಮ ನೇಮಾದಿಗಳಿಂದ ವೆಗ್ಗಳ—ಆವುದು ? ತಿಳಿಯುವುದು ಅಸಾಧ್ಯ ! ಇದರ ಮೇಲೆ, 'ಶಿವಪಥವನರಿದವಂಗೆ' ಮತ್ತು ನಿಮ್ಮ 'ಮಾಣದೆ ನೆನೆವವಂಗೆ'-ಇವುಗಳ ಮಧ್ಯೆ 'ಹೋಮನೇಮಜಪತಪಗಳಿಂದ ವೆಗ್ಗಳ' ಎಂಬ ನುಡಿಗಡಣವೊಂದು ಬಂದು ಇಡಿಯ ವಚನವನ್ನು ಒಡೆಯಲಾರದ ಒಗಟನ್ನಾಗಿ ಮಾಡಿದೆ.

ಆದರೆ, ಈ ವಚನದಲ್ಲಿ ಹುದುಗಿರುವ ಲಯವು ಏನನ್ನವಲಂಬಿಸಿದೆ ಎಂಬುದನ್ನು ವಿಚಾರಿಸಿದಾಗ, 'ವೆಗ್ಗಳ' ಎಂಬ ಶಬ್ದದ ಪುನರುಕ್ತಿ, 'ಶಿವಪಥವನರಿದವಂಗೆ ಮತ್ತು 'ನಿಮ್ಮ ಮಾಣದೆ ನೆನೆವಂಗೆ' ಎಂಬಲ್ಲಿ ತೋರುವ ರಚನಾ ಸಾಮ್ಯ, ಇವು ಈ ಲಯವನ್ನು ಸೂಚಿಸಲು ಸಾಹಾಯ್ಯ ಮಾಡುತ್ತಿವೆಯೆಂದು ಗೋಚರವಾಗುವುದು. ಈ ಲಯವನ್ನನುಸರಿಸಿ, ಪಾದಾಪಾದಗಳನ್ನಾಗಿ ವಿಂಗಡಿಸಿ, ಈ ವಚನವನ್ನು ಕೆಳಗೆ ಕಾಣಿಸಿದಂತೆ ಬರೆಯಬಹುದು:

ಇಪ್ಪತ್ತು ನಾಲ್ಕು ತಿಥಿಯಿಂದ ವೆಗ್ಗಳ,
ಗ್ರಹಣ-ಸಂಕ್ರಾಂತಿಯಿಂದ ವೆಗ್ಗಳ,
ಏಕಾದಶಿ- ವ್ಯತೀಪಾತದಿಂದ ವೆಗ್ಗಳ,
ಸೂಕ್ಷ್ಮ ಶಿವಪಥವನರಿದವಂಗೆ—
ಹೋಮನೇಮಜಪತಪಗಳಿಂದ ವೆಗ್ಗಳ,
ಕೂಡಲ ಸಂಗಮದೇವಾ, ನಿಮ್ಮ ಮಾಣದೆ ನೆನೆವವಂಗೆ ! (೬೦೯)

ಈಗ ಸರಿಯಾದ ಅರ್ಥಕ್ಕೆ ಸರಳಮಾರ್ಗವೊಂದು ಏರ್ಪಟ್ಟಂತಾಯಿತೆಂದು ತಾನೇ ಕಾಣುವುದು. "ಸೂಕ್ಷ್ಮ ಶಿವಪಥವನರಿದವನಿಗೆ ಇಪ್ಪತ್ತು ನಾಲ್ಕು ತಿಥಿ, ಗ್ರಹಣ, ಸಂಕ್ರಾಂತಿ, ಏಕಾದಶಿ, ವ್ಯತಿಪಾತ ಮೊದಲಾದ-ಪವಿತ್ರವೊ ಅನಿಷ್ಟಕಾರಕವೊ ಎಂದೆನಿಸಿದ—ವಿಶಿಷ್ಟ ದಿನಗಳಲ್ಲಿ ಮಾತ್ರ, ಅವಕ್ಕೆಂದೆ ನಿರ್ದಿಷ್ಟಗೊಳಿಸಿದ ಆಚರಣೆಗಳನ್ನು ಆಚರಿಸುವುದಕ್ಕಿಂತ ಹೆಚ್ಚಿನ ಆಚರಣೆಯೊಂದಿದೆ: ಅವುದೆಂದರೆ ಆ ಸೂಕ್ಷ್ಮ ಶಿವಪಥವೆ. ಅದು ಪಥ ( =ದಾರಿ ) ವಾದುದರಿಂದ ಅದನ್ನು ಸದಾ ಬಿಡುವಿಲ್ಲದೆ ನಡೆಯಲೆ ಬೇಕು; ಪ್ರತಿದಿನವೂ-ಪ್ರತಿಕ್ಷಣವೂ ನಡೆದರೆ ಮಾತ್ರ ಆ ದಾರಿ ಮುಂದಕ್ಕೆ ಸಾಗುವುದು; ಅದಿಲ್ಲದೆ, ಅವುದಾದರೊಂದು ವಿಶಿಷ್ಟದಿನ, ಆ ದಿನಕ್ಕೆ ಮಾತ್ರ ವಿಧಿಸಿದ ಮಾರ್ಗದಲ್ಲಿ ನಡೆದರೆ ಅದು ಓರನ್ನವಾದ ಬಟ್ಟೆಯೂ ಎನಿಸಲಾರದು, ಪ್ರಗತಿಯೂ ಆಗಲಾರದು. ಅದೆ ರೀತಿ, ಕೂಡಲ ಸಂಗಮದೇವನನ್ನು ಮಾಣದೆ ( =ತಪ್ಪದೆ ) ಸದಾಕಾಲ ನೆನೆಯುತ್ತಿರುವವನಿಗೆ ಆ ನೆನಹೆ ಹೋಮನೇಮಜಪತಪಗಳಿಂದ ವೆಗ್ಗಳವಾದುದು"—

ಎಂದು ಈ ವಚನದ ಅರ್ಥವನ್ನು ಸಮರ್ಪಕವಾಗಿ ಮಾಡಬಹುದು. ಮೇಲೆ ತೋರಿಸಿದಂತೆ ಲಯಾನುಸಾರವಾಗಿ ಈ ವಚನವನ್ನು ಬರೆಯುವುದರಿಂದ ಇದರಲ್ಲಿ ಎಷ್ಟೊಂದು ಅರ್ಥವೈಶಾಲ್ಯವು ಹುದುಗಿದೆ ಎಂಬುದು ಸ್ಪಷ್ಟವಾಗಿ ಕಂಗೊಳಿಸುತ್ತಿದೆ. ಆವುದಾದರೊಂದು ವಿಶಿಷ್ಟವಾದ ತಿಥಿ ಇಲ್ಲವೆ ದಿನ ಉಳಿದ ದಿನಗಳಿಗಿಂತ ಹೆಚ್ಚು ಪವಿತ್ರವಾದುದು, ಪುಣ್ಯಪ್ರದವಾದುದು, ಫಲದಾಯಕವಾದುದು ಎಂಬ, ಅಥವಾ ಅನಿಷ್ಟಕರವಾದುದು, ಆದುದರಿಂದ ಶಾಂತಿಮಾಡಲು ತಕ್ಕುದು ಎಂಬ ವೈದಿಕ ಮತಾನುಯಾಯಿಗಳ ಸಂಪ್ರದಾಯಬದ್ಧವಾದ ಕಲ್ಪನೆಗಳು ನಿಜವಾಗಿಯೂ ಭ್ರಾಮಕವಾದುವು, ಆದುದರಿಂದ ಶಿವಭಕ್ತರಿಗೆ ಸಲ್ಲವು— ಎಂಬುದೆ ಈ ವಚನದ ಆಶಯ. ಇದು 'ಅಷ್ಟಮಿ, ನವಮಿ ಎಂಬ ಕಲ್ಪಿತವೇಕೋ,' 'ನಿಚ್ಚ ನಿಚ್ಚ ಶಿವರಾತ್ರಿ ಮಾಡುವುದು' ಇತ್ಯಾದಿ ಬಸವಣ್ಣನವರ ಇನ್ನಿತರ ವಚನಗಳ ಅಭಿಪ್ರಾಯಕ್ಕೆ ಅನುರೂಪವಾಗಿಯೆ ಇದೆಯೆಂಬುದೂ ಸ್ಪಷ್ಟವಿದೆ.

ವಚನಗಳಲ್ಲಿ ಸಾಮಾನ್ಯವಾಗಿ ತೋರುವ ಲಯವನ್ನನುಸರಿಸುವುದರಿಂದಲೆ ಅನೇಕ ಸಂದರ್ಭಗಳಲ್ಲಿ ಅರ್ಥವು ಸುಗಮವಾಗುವುದೆಂಬುದು ಓದುಗರ ಮನದಟ್ಟುವುದಕ್ಕೆಂದು ಇನ್ನೊಂದು ಉದಾಹರಣೆಯನ್ನು ನೋಡಬಹುದು:

(೨) ಆದಿ ಅನಾದಿ ಇಲ್ಲದಂದು ಅಜಾಂಡ ಬ್ರಹ್ಮಾಂಡವಿಲ್ಲದಂದು ತಾನೆ. ನಾದ ಬಿಂದು ಕಳಾತೀತನು ಜನಪರಮರಿಲ್ಲದಂದು ತಾನೆ. ನಾಮ ರೂಪಕ್ರಿಯಾತೀತನು ಸಚರಾಚರಗಳೆಲ್ಲ ರಚನೆಗೆ ಬಾರದಂದು ತಾನೆ. ಅಖಂಡಪರಿಪೂರ್ಣನು, ಅಪ್ರಮಾಣ, ಅಗಮ್ಯ ಅಗೋಚರದತ್ತಲಾದ ಮಹಾಘನ ಚೈತನ್ಯಲಿಂಗ, ನೋಡಾ, ಅಪ್ರಮಾಣ ಕೂಡಲ ಸಂಗಮದೇವ.

ಈ ವಚನವನ್ನು ಮೊದಲು ಮುದ್ರಿಸಿದ ರೀತಿಯಲ್ಲಿಯೆ ಇಲ್ಲಿ ಉದಾಹರಿಸಿದ್ದೇವೆ. ಇದರಲ್ಲಿ(ಕೆಲಮಟ್ಟಿಗೆ ಲಯಾನುಸಾರವಾಗಿ)ಸಣ್ಣ ಸಣ್ಣ ವಾಕ್ಯಗಳನ್ನು ಮಾಡಿದುದು ಕಂಡುಬರುತ್ತಿದೆ. ಆದರೆ ರಚನಾಸಾಮ್ಯವನ್ನು

ಇನ್ನಿಷ್ಟು ಸೂಕ್ಷ್ಮವಾಗಿ ಅನುಲಕ್ಷಿಸಿದರೆ ಈ ವಚನವನ್ನು ಮುಂದೆ ಕಾಣುವ ತೆರದಲ್ಲಿ ಬರೆಯಬಹುದೆಂಬುದು ಸ್ಪಷ್ಟವಾಗುತ್ತಿದೆ:

ಆದಿ ಅನಾದಿ ಇಲ್ಲದಂದು, ಅಜಾಂಡಬ್ರಹ್ಮಾಂಡವಿಲ್ಲದಂದು
ತಾನೇ ನಾದುಬಿಂದು ಕಲಾತೀತನು.
ಜನಪರಮರಿಲ್ಲದಂದು
ತಾನೇ ನಾಮರೂಪಕ್ರಿಯಾತೀತನು.
ಸಚರಾಚರಗಳೆಲ್ಲ ರಚನೆಗೆ ಬಾರದಂದು
ತಾನೇ ಅಖಂಡ ಪರಿಪೂರ್ಣನು–
ಅಪ್ರಮಾಣ ಆಗಮ್ಯ ಅಗೋಚರದತ್ತಲಾದ
ಮಹಾಘನಚೈತನ್ಯಲಿಂಗ, ನೋಡಾ,
ಅಪ್ರಮಾಣ ಕೂಡಲ ಸಂಗಮದೇವ

ಹೀಗೆ ವಾಕ್ಯಾವಾಕ್ಯಾಂಗಗಳ ರಚನಾಸಾಮ್ಯವನ್ನನುಸರಿಸಿ ಬರೆಯುವುದ ರಿಂದ ಈ ವಚನದ ಅರ್ಥ ಸಾಮಾನ್ಯವಾಚಕರಿಗೂ ಸುಸ್ಪಷ್ಟವಾಗಿ ಅವ ಗತವಾಗುವುದೆಂಬದನ್ನು ಮತ್ತೆ ಬೇರೆ ಹೇಳಬೇಕಾಗಿಲ್ಲ.

ಸಾಂಪ್ರದಾಯಿಕವಾಗಿ ಮುದ್ರಿಸಿದ ವಚನಗಳು ಒಮ್ಮೊಮ್ಮೆ ಎಷ್ಟು ಅಸಮರ್ಪಕವಾಗಿ ತೋರುವುವೆನ್ನುವುದಕ್ಕೆ ಇನ್ನೊಂದು ವಚನ ವನ್ನು[೩೧] ಉದಾಹರಿಸಿದರೆ ತಪ್ಪಾಗಲಾರದು:

(೩) ಹೊತ್ತಾರೆ ಎದ್ದು ಲಿಂಗದೇವನ ದೃಷ್ಟಿಯಾರೆ ನೋಡದವನ ಸಂಸಾರವೇಕವನ, ಬಾಳುವೇನವನ, ಬೀಳುವೇನವನ, ಸಂಸಾರವೇನವನ, ನಡೆ ಯೇನವನ, ನುಡಿಯೇನವನ, ಸಂಸಾರವೇನವನ? ಕರ್ತೃ ಕೂಡಲ ಸಂಗಮ ದೇವ, ನಿಮ್ಮ ತೊತ್ತುಗೆಲಸವ ಮಾಡದವನ ಸಂಸಾರವೇನವನ?

ಈ ವಚನ ಅರ್ಥ, ಒಟ್ಟಾರೆ: ನಸುಕಿನಲ್ಲಿ ಎದ್ದು ಲಿಂಗದೇವನ ಕಣ್ಣು ತುಂಬ ನೋಡದವನ, ಈಶ್ವರಸೇವೆಯನ್ನು ಮಾಡದವನ ಬಾಳು ವ್ಯರ್ಥ—ಎಂದು ಹೊಳೆಯುವುದು ಸರಿಯೆ; ಆದರೂ ಇದರಲ್ಲಿ ನಾಲ್ಕು ಬಾರಿ ಪುನರುಕ್ತವಾಗುವ 'ಸಂಸಾರವೇನವನ' ಎಂಬ ಪದದ ಸ್ವಾರಸ್ಯ ಗೊತ್ತಾಗುವಂತಿಲ್ಲ; ಕೇವಲ ನಿರರ್ಥಕವೆಂದೇ ತೋರುವುದರಲ್ಲಿ ಸಂದೇಹ

ವಿಲ್ಲ. ಆದುದರಿಂದ "ವಚನಧರ್ಮಸಾರ"ದಲ್ಲಿ[೩೨] ಈ ವಚನವನ್ನು ಮುಂದಿನಂತೆ ತಿದ್ದಿದುದು ಕಂಡುಬರುತ್ತಿದೆ :

ಹೊತ್ತಾರೆ ಎದ್ದು ಲಿಂಗದೇವನ ದೃಷ್ಟಿಯಾರೆ ನೋಡದವನ ಸಂಸಾರವೇನವನ, ಬಾಳುವೆ ಏನವನ, ಬೀಳುವೆ ಏನವನ, ನಡೆ ಏನವನ, ನುಡಿ ಏನವನ, ಕರ್ತ ಕೂಡಲ ಸಂಗಮದೇವಾ, ನಿಮ್ಮ ತೊತ್ತುಗೆಲಸವ ಮಾಡದವನ ಬದುಕೇನವನ ?

ಈ ರೀತಿ ಸುಧಾರಣೆ ಮಾಡಿದ್ದರೂ, 'ಬಾಳುವೆ ಏನವನ, ಬದುಕೇನವನ' ಎಂಬ ಪದಗಳಾದರೂ 'ಸಂಸಾರವೇನವನ' ಎಂಬರ್ಥವನ್ನೆ ಕೊಡುವುದರಿಂದ, ಅವು ಮತ್ತೆ ಪುನರುಕ್ತಗಳೆಂದೇ ತೋರುವುದಿಲ್ಲವೆ ? ಆದುದರಿಂದ, ತಾಳೆಪೋಲೆಯ ಮಾತೃಕೆಗಳನ್ನು ಪುನಃ ಅವಲೋಕಿಸಿ,[೩೩] ಅವುಗಳ ಸಾಹಾಯ್ಯದಿಂದ ಈ ವಚನದೊಳಗಿನ ಕೆಲವು ಶಬ್ದಗಳನ್ನು ಸಂಸ್ಕರಿಸಿ, ಲಯಾನುರೋಧವಾಗಿ ಕೆಳಗೆ ಕಾಣಿಸಿದಂತೆ ಬರೆಯುವುದರಿಂದ ಈ ವಚನದ ನಿಜವಾದ ಅರ್ಥ ಸರಿಯಾಗಿ ಹೊರಹೊಮ್ಮುವುದೆಂದು ತಾನೆ ತೋರುವುದರಲ್ಲಿ ಸಂದೇಹವಿಲ್ಲ :

ಹೊತ್ತಾಱೆ ಎದ್ದು ಲಿಂಗದೇವನ ದೃಷ್ಟಿಯಾರೆ ನೋಡದವನ ಸಂಸಾರವೇನವನ?
ಬಾಳುವೆಣನ ಬೀಳುವೆಣನ ಸಂಸಾರವೇನವನ ?
ನಡೆವೆಣನ ನುಡಿವೆಣನ ಸಂಸಾರವೇನವನ ?
ಕರ್ತ ಕೂಡಲ ಸಂಗಮದೇವಾ,
ನಿಮ್ಮ ತೊತ್ತುಗೆಲಸವ ಮಾಡದವನ ಸಂಸಾರವೇನವನ ? (೧೫೭)

ಈ ತೆರನಾಗಿ ವಿಂಗಡಿಸಿ ಬರೆಯುವುದರಿಂದ 'ಸಂಸಾರವೇನವನ' ಎಂಬ ನುಡಿಗಡಣ ಪ್ರತಿಯೊಂದು ಪಾದದ ಕೊನೆಗೆ ಬರುವುದರ ಔಚಿತ್ಯ ಮತ್ತು ಸ್ವಾರಸ್ಯ ಚೆನ್ನಾಗಿ ವ್ಯಕ್ತವಾಗುವುವು. ಅರ್ಥ: ಜೀವಿಸುತ್ತಿದ್ದರೂ ಹೆಣನಂತಿರುವವನ, ಈಗಲೆ ಸಾಯುವನೊ ಎನ್ನುವಂತಿರುವವನ, ಹಾಗೆಯೇ ಮಾತಾಡುವಲ್ಲಿಯೂ ನಡೆವಲ್ಲಿಯೂ ಈ ಕ್ಷಣವೆ ಸಾಯುವನೇನೊ ಎನ್ನುವಷ್ಟು ನಿರ್ವಿಣ್ಣನಾದವನ ಸಂಸಾರವು ಹೇಗೆ ನಿರರ್ಥಕವೊ, ಹಾಗೆಯೆ ನಸುಕಿನಲ್ಲೆದ್ದು ಲಿಂಗದೇವನ ಕಣ್ಣು ತುಂಬ ನೋಡದವನ, ಈಶಸೇವೆ

ಯನ್ನು ಮಾಡದವನ ಬಾಳು ಹಾಳು—ಎಂದಾಗುವುದು. ಈ ವಚನದಲ್ಲಿ ಬಳಸಿದ ಪ್ರತಿಯೊಂದು ಪದಕ್ಕೂ ಮಾರ್ಮಿಕವಾದ ಅರ್ಥವಿದೆ. ಎಂಬುದೂ ಚೆನ್ನಾಗಿ ವೇದ್ಯವಾಗುವುದು. ಅಲ್ಲದೆ, ವಚನ ಶೈಲಿ ಎಷ್ಟು ಭಾವಗರ್ಭಿತವಾದುದೆಂಬುದೂ ಸರಿಯಾಗಿ ಮನದಟ್ಟುವುದು ಈ ರೀತಿ ಮುದ್ರಣದಿಂದ.

ಇದೇ ಬಗೆಯ ಇನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದಾದರೂ, ವಚನಭಾಗಗಳನ್ನು ಲಯಾನುಸಾರವಾಗಿ ಅಥವಾ ರಚನಾ ಸಾಮ್ಯವನ್ನನುಸರಿಸಿ ವಿಂಗಡಿಸಿ ಬೇರೆ ಬೇರೆ ಸಾಲಾಗಿ ಮುದ್ರಿಸುವುದು ಅರ್ಥದ ಸುಗಮತೆಗೆ ಅನುಕೂಲವಾಗುವುದೆಂಬ ವಿಚಾರವು ಇದುವರೆಗೆ ಕೊಟ್ಟ ನಿದರ್ಶನಗಳಿಂದಲೆ ಸ್ಪಷ್ಟವಾಗುವಂತಿರುವುದರಿಂದ ಹೆಚ್ಚಿನ ಉದಾಹರಣೆಗಳನ್ನು ಕೊಡುವ ಕಾರಣವಿಲ್ಲ. ಆದರೆ ಇಲ್ಲಿ ಗಮನಿಸತಕ್ಕ ಒಂದೆರಡು ಮಹತ್ತ್ವದ ಅಂಶಗಳೂ ಇವೆ.

ಯಾವುದೊಂದು ವಚನವನ್ನು ಎಲ್ಲರೂ ಒಂದೆ ವಿಧವಾಗಿ ವಿಭಾಗಿಸುವರೆಂದಾಗಲಿ, ವಿಭಾಗಿಸಬೇಕೆಂದಾಗಲಿ ನಮ್ಮ ಅಭಿಪ್ರಾಯವಲ್ಲ. ಒಬ್ಬರಿಗೆ ಒಂದು ವಿಧವಾಗಿ ಲಯತೋರಿದರೆ, ಇನ್ನೊಬ್ಬರಿಗೆ ಇನ್ನೊಂದು ವಿಧವಾಗಿ ಕಾಣಬಹುದು. ಒಂದೇ ವಚನದಲ್ಲಿ ಪ್ರಾಸಾನುಪ್ರಾಸಗಳಿಂದ ಪ್ರತೀತವಾಗುವ ಆಂತರಿಕಲಯವೂ ಇರಬಹುದು; ವಾಕ್ಯಾಂಗಗಳ ರಚನಾ ಸಾಮ್ಯವೂ ಇರಬಹುದು. ಆಗ, ಒಬ್ಬರು ಆಂತರಿಕ ಲಯವನ್ನನುಸರಿಸಿ ವಚನವನ್ನು ತುಂಡರಿಸಿದರೆ, ಇನ್ನೊಬ್ಬರು ರಚನಾಸಾಮ್ಯವನ್ನವಲಂಬಿಸಿ ಆ ವಾಕ್ಯವನ್ನು ವಿಭಜಿಸಬಹುದು ಇಂತಹ ಸಂದರ್ಭಗಳಲ್ಲಿ ಒಂದು ಸರಿ, ಇನ್ನೊಂದು ತಪ್ಪು ಎಂದು ಕಂಡಿತವಾಗಿ ಹೇಳುವುದು ಅಶಕ್ಯವೆನಿಸಬಹುದು. ಅಂತೂ ಕಿವಿಗೆ ಇಂಪೆನಿಸುವ ರೀತಿಯಲ್ಲಿ, ಅರ್ಥಕ್ಕೆ ಅನುಕೂಲವಾಗುವ ತೆರದಲ್ಲಿ ವಚನಗಳನ್ನು ಹೇಳುವುದೂ ಬರೆಯುವುದೂ ಸಾಧಿಸುವುದೆ ಮುಖ್ಯ. ಅದಕ್ಕನುರೂಪವಾಗುವಂತೆ ವಚನಗಳನ್ನು ಮುದ್ರಿಸುವುದು ಆವಶ್ಯಕವೆಂಬ ಮಾತು ಸಹೃದಯರಿಗೆ ಮನದಟ್ಟಾದರಾಯಿತು. ಇಂಗ್ಲಿಷ

ಬೈಬಲ್ಲಿನ ನೂತನ ಸಂಸ್ಕರಣಗಳಲ್ಲಿಯೂ ಸಹ; ಒಂದೇ ವಾಕ್ಯಸಮು ದಾಯವನ್ನು ಬೇರೆ ಬೇರೆ ಸಂಪಾದಕರು ಭಿನ್ನ ಭಿನ್ನ ಪ್ರಕಾರವಾಗಿ ವಿಭಜಿಸಿದ-ದು ಕಂಡುಬರುತ್ತಿದೆ. ಉದಾಹರಣೆಗೆಂದು ಒಂದನ್ನು ಇಲ್ಲಿ ಕೊಡುತ್ತೇವೆ. (ಹಿಂದೆ ಇದೆ ಪ್ರಸ್ತಾವನೆಯ ಪುಟ (xxvi)ದ ಅಡಿಟಿಪ್ಪಣಿಯಲ್ಲಿ ಕೊಟ್ಟ) St Johnದ ಆರಂಭದ ವಾಕ್ಯಗಳಾದ :

In the beginning was the word, and the word was with the God........

ಎಂದು ಆರಂಭವಾಗುವ ಐದುವಾಕ್ಯಗಳ ಸಮುದಾಯವನ್ನೆ ಇತ್ತೀಚಿನ ಇಂಗ್ಲಿಷ್ ಕವಿಗಳಲ್ಲಿ ಸುಪ್ರಸಿದ್ಧರಾದ Robert Bridges ಎಂಬವರು ತಾವು ಸಂಪಾದಿಸಿದ The Spirit of Man ಎಂಬ ಸಂಕಲನ ಗ್ರಂಥ (No: 42) ದಲ್ಲಿ ಲಯಾನುಸಾರವಾಗಿ ಪದ್ಯರೂಪದಲ್ಲಿ೩೪ ಮುದ್ರಿಸಿದುದನ್ನು ಓದುಗರು ನೋಡಬಹುದು. ಇದರಿಂದ, ಸಂಸ್ಕರಣಕಾರರ ಪರಿಶ್ರಮ, ಪಾಂಡಿತ್ಯ, ಅನುಭವ, ಒಲವು—ಇವೆಲ್ಲವುಗಳ ಫಲವಾಗಿ ಸಂಸ್ಕರಣದ ರೀತಿಯಲ್ಲಿ ಭೇದಗಳುಂಟಾಗುವುದು ಸಾಧ್ಯವಿದೆಯೆಂಬುದು ಇಲ್ಲಿ ವ್ಯಕ್ತವಾಗುವುದು. ಆದರೆ, ನಾವು ಇದುವರೆಗೆ ವಿವೇಚಿಸಿದ ತತ್ತ್ವಗಳಿಗನುರೂಪವಾಗಿ ವಚನಗಳ ಸಂಸ್ಕರಣವನ್ನು ಶಾಸ್ತ್ರೀಯವಾದ ರೀತಿಯಲ್ಲಿ ಕೈಕೊಳ್ಳುವುದು ಈಗ ಆವಶ್ಯಕವಿದ್ದಂತೆ ಸಾಧ್ಯವೂ ಇದೆ ಎಂಬುದನ್ನು ವಾಚಕರು ಒಪ್ಪಬಹುದೆಂದು ಎಣಿಸುತ್ತೇವೆ. ಈ ತತ್ತ್ವಗಳಿಗನುಸಾರವಾಗಿಯೆ ನಮಗೆ ಸೂಕ್ತಕಂಡ ತೆರದಲ್ಲಿ ಬಸವಣ್ಣನವರ ವಚನಗಳನ್ನು ಮುದ್ರಿಸುವ ಸಾಹಸವನ್ನು ಮಾಡಿದ್ದೇವೆ ಈ ಸಂಸ್ಕರಣದಲ್ಲಿ.

೬

ಕನ್ನಡ ಪುಸ್ತಕಗಳ ಮುದ್ರಣದಲ್ಲಿ ಈಗ ಬಳಕೆಯಲ್ಲಿ ಬಂದಿರುವ ವಿರಾಮ ಚಿಹ್ನಗಳು ಪಾಶ್ಚಾತ್ಯರಿಂದ ಎರವಲಾಗಿ ಬಂದುವು ಎಂಬುದು ಎಲ್ಲರಿಗೂ ತಿಳಿದ ವಿಷಯುವೇ ಆಗಿದೆ. ಆದರೆ ಕನ್ನಡದ ಹಳೆಯ ಹಸ್ತಲಿಖಿತ ಪ್ರತಿಗಳಲ್ಲಿ ಪದ್ಯದ ಪಾದಗಳನ್ನು ವಿಂಗಡಿಸಲು ಒಂದು ಲಂಬ

ರೇಖೆ ( | ) ಯನ್ನು, ಪದ್ಯದ ಅರ್ಧವನ್ನೂ ಮುಗಿತಾಯವನ್ನೂ ಸೂಚಿಸ ಲಿಕ್ಕೆ ಜೋಡು ಲಂಬ ರೇಖೆ ( || ) ಗಳನ್ನು ಬಳಸುತ್ತಿದುದು ಕಂಡು ಬರುತ್ತಿದೆ. ಗದ್ಯದಲ್ಲಿ ಸಾಮಾನ್ಯವಾಗಿ ವಾಕ್ಯದ ಕೊನೆಯಲ್ಲಿ ಒಂದು ಲಂಬರೇಖೆಯಿರುವುದುಂಟು. ವಚನಗಳ ಸಹ್ತಲಿಖಿತ ಪ್ರತಿಗಳಲ್ಲಿ ಈ ಲಂಬರೇಖೆಯ ಉಪಯೋಗ ಕಂಡುಬರುತ್ತಿದ್ದರೂ ಅದು ಅನೇಕ ಕಡೆ ವಾಕ್ಯದ ಮಧ್ಯದಲ್ಲಿಯೂ ಹಲವು ಬಾರಿ ಉಪಯೋಗವಾದುದು ಗೊತ್ತಾಗು ತ್ತಿದೆ. ಈ ಬಗೆಯ ಉಪಯೋಗಕ್ಕೆ ಯಾವ ಕಟ್ಟುನಿಟ್ಟೂ ಇದ್ದಂತೆ ತೋರುವುದಿಲ್ಲವಾದರೂ, ಎಷ್ಟೊ ಸಂದರ್ಭಗಳಲ್ಲಿ ಅದರಿಂದ ಅರ್ಥ ಸರಳ ವಾಗುವುದೆಂದೂ ಕಂಡುಬರುತ್ತಿದೆ.

ಬಸವಣ್ಣನವರ ವಚನಗಳ ಈ ಸಂಸ್ಕರಣದಲ್ಲಿ ನಾವು ಈಗಿನ ರೂಢಿ ಗನುಸಾರವಾಗಿ ಪಾಶ್ಚಾತ್ಯ ವಿರಾಮಚಿಹ್ನಗಳನ್ನೆ ಬಳಸಿದ್ದೇವೆ. ಕನ್ನಡ ದಲ್ಲಿಯ ವಾಕ್ಯಸರಣಿ ಸಾಮಾನ್ಯವಾಗಿ ಅರ್ಥವನ್ನು ಬಳಸಿಕೊಂಡೆ ಹೋಗುವುದರಿಂದ ಈ ವಿರಾಮಚಿಹ್ನಗಳ ಆವಶ್ಯಕತೆ ಕನ್ನಡಕ್ಕೆ ಅಷ್ಟೊಂ ದಿಲ್ಲವೆಂಬ ಅಭಿಪ್ರಾಯದವರು ಇರುವರಾದರೂ[೩೫] 'ವಚನ'ದಂತಹ ಬಿಗಿ ಯಾದ ಸಂಗ್ರಹಾತ್ಮಕವಾದ ಶೈಲಿಯಲ್ಲಿ ಈ ಚಿಹ್ನಗಳ ಪ್ರಯೋಜನ ಬಹಳವಾಗಿ ಇದೆಯೆಂದೇ ನಮ್ಮ ಮತ.

ಅಲ್ಪವಿರಾಮ, ಅರ್ಧವಿರಾಮ, ಪೂರ್ಣವಿರಾಮ ಚಿಹ್ನಗಳನ್ನು ಸಾಮಾನ್ಯವಾಗಿ ಎಲ್ಲರೂ ಬಳಸುವ ರೀತಿಯಲ್ಲಿಯೆ ಇಲ್ಲಿಯೂ ಬಳಸ ಲಾಗಿದೆ. ಒಂದು ವಚನದಲ್ಲಿ ಬರುವ ವಾಕ್ಯಗಳನ್ನು ಲಯಾನುಸಾರ ವಾಗಿ ಒಡೆದು ಅನೇಕ ಸಾಲುಗಳನ್ನಾಗಿ ಮುದ್ರಿಸಿದ್ದೇವೆ. ಆದರೆ ಮುದ್ರಣ ಕಾಗದದ ಪರಿಮಿತಿಗನುಸಾರವಾಗಿ ಇಂತಹ ಸಾಲುಗಳನ್ನು ಮತ್ತೆ ಒಡೆ ಯುವ, ಹೆಚ್ಚುಕಡಿಮೆ ಮಾಡಿಕೊಳ್ಳುವ ಪ್ರಸಂಗಗಳು ಅನೇಕ ಸಲ ಒದ ಗಿವೆ. ವಾಕ್ಯಾರಂಭದ ಸಾಲನ್ನು ಉಳಿದ ಸಾಲುಗಳಿಗಿಂತ ಸ್ವಲ್ಪ ಎಡ ಗಡೆಗೆ ಮುಂಚಾಚುವಂತೆ ಅಚ್ಚುಮಾಡಿದೆ. ಪ್ರಶ್ನಾರ್ಥಕ ಚಿಹ್ನವನ್ನೂ ಉದ್ಗಾರಸೂಚಕ ಚಿಹ್ನವನ್ನೂ ಸೂಕ್ತತೋರಿದಲ್ಲೆಲ್ಲ ಉಪಯೋಗಿಸಿದೆ.

ಉದ್ಗಾರಸೂಚಕ ಚಿಹ್ನೆ ಸ್ವಲ್ಪ ಹೆಚ್ಚಾಗಿಯೆ ಪ್ರಯೋಗವಾಗಿದೆಯೆಂದು ಕೆಲವರಿಗೆ ತೋರಬಹುದು. ಬಸವಣ್ಣನವರ ವಚನಗಳು ಅವರ ಹೃದಯ ದಿಂದ ನೇರವಾಗಿ ಹೊರಹೊಮ್ಮಿದವೆಂದು ತೋರುವುದರಿಂದ ಈ ಚಿಹ್ನೆಗೆ ಹೆಚ್ಚು ಎಡೆಯಿದೆಯೆಂದು ನಾವು ಭಾವಿಸಿದ್ದೇವೆ.

ಇಂಗ್ಲಿಷಿನಲ್ಲಿ ಹೆಚ್ಚು ರೂಢವಾಗಿರುವ, ಕನ್ನಡದಲ್ಲಿ ಅಷ್ಟು ಬಳಕೆ ಯಲ್ಲಿಲ್ಲದ ಕೋಲನ್ (colon) ಎಂಬ (:) 'ಅಡಕಿಲ' ಚಿಹ್ನೆಯನ್ನು ನಾವು ಈ ಸಂಸ್ಕರಣದಲ್ಲಿ ಹೊಸದಾಗಿ ಉಪಯೋಗಮಾಡಿದ್ದೇವೆ ಮೊದಲು ಬಂದ ಒಂದು ವಿಚಾರಕ್ಕೆ ವಿವರಣೆಯೆಂದೊ ವಿಸ್ತಾರವೆಂದೊ ವಿರೋಧಕವೆಂದೊ ತೋರಬಹುದಾದ ಮುಂದಿನ ವಾಕ್ಯಭಾಗದ ಸಂಬಂಧ ವನ್ನು ಸೂಚಿಸುವುದಕ್ಕೆ—ಎಂದರೆ ಕೇವಲ ಸಮುಚ್ಚಾಯಕವಲ್ಲದ ಇನ್ನಿ ತರ ಸಂಬಂಧಗಳನ್ನು ಸೂಚಿಸುವುದಕ್ಕೆ—ಈ ಚಿಹ್ನೆಯನ್ನು ಎರಡು ವಾಕ್ಯ ಭಾಗಗಳ ಮಧ್ಯದಲ್ಲಿ ಬಳಸಿದ್ದೇವೆ. ಈ ಚಿಹ್ನೆಯ ಈ ಬಗೆಯ ಉಪ ಯೋಗ ಹೊಸದಾದುದರಿಂದ ಇಲ್ಲಿ ಅದರ ಬಳಕೆಯ ಒಂದೆರಡು ಉದಾ ಹರಣೆಗಳನ್ನು ಕೊಟ್ಟರೆ ಓದುಗರಿಗೆ ಅನುಕೂಲವೆನಿಸಬಹುದು:

(೧) ಕರಿಘನ: ಅಂಕುಶ ಕಿರಿದೆನ್ನಬಹುದೆ? ಬಾರದಯ್ಯಾ (೬)

ಮೊದಲಿನ ಭಾಗಕ್ಕೂ ಮುಂದಿನ ಭಾಗಕ್ಕೂ ವಿರೋಧ.

(೨) ಎನ್ನ ನಡೆಯೊಂದು ಪರಿ: ಎನ್ನ ನುಡಿಯೊಂದು ಪರಿ:
ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯಾ, (೩೦)

ಇಲ್ಲಿ ಮೊದಲಿನ ಸಾಲಿನಲ್ಲಿ ಬಂದ ಎರಡು ವಾಕ್ಯಖಂಡಗಳು ವೈಪರೀತ್ಯ ವನ್ನು ಸೂಚಿಸುತ್ತಿವೆ. ಮುಂದಿನ ಸಾಲಿನಲ್ಲಿ ಬಂದ ವಾಕ್ಯಖಂಡವು ಅವೆರಡಕ್ಕೂ ವಿವರಣೆಯಾಗಿದೆ.

(೩) ಅಂಗ ಕಂಡ ಕೋಲಾಸೆ ಮತ್ತೇಕಯ್ಯಾ? ಲಿಂಗ ಕಂಡ ಪ್ರಾಣದಾಸೆ ಮತ್ತೇಕಯ್ಯಾ? ಭಕ್ತ ಕಂಡ ತನುಮನದಾಸೆ ಮತ್ತೇಕಯ್ಯಾ? ನಿಮ್ಮಂಕೆಗೆ ಝುಂಕೆಗೆ ಶಂಕಿತನಾದರೆ ಎನ್ನ ಲಿಂಗತನಕ್ಕೆ ಹಾನಿ, ಕೂಡಲ ಸಂಗಮದೇವಾ!

ಇದ್ದಕ್ಕಿದ್ದಂತೆ ಈ ವಚನದ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳುವುದು

ದುಸ್ತರವೆ ಅಹುದು. ಕೆಲವು ಮಾತೃಕೆಗಳಲ್ಲಿ 'ಕಂಡು' ಎಂಬುದಕ್ಕೆ ಪ್ರತಿಯಾಗಿ 'ಕಂಡಾ' ಎಂದೂ ದೊರೆಯುತ್ತಿದೆ. ಈ ವಚನವನ್ನು ಕೆಳಗೆ ಕಂಡಂತೆ ಬರೆಯುವುದರಿಂದ ಬಹು ಸ್ವಾರಸ್ಯವಾದ ಅರ್ಥ ಹೊರಡುತ್ತದೆ:

ಅಂಕ ಕಂಡಾ: ಕೋಲಾಸೆ ಮತ್ತೇಕಯ್ಯಾ ?
ಲೆಂಕ ಕಂಡಾ: ಪ್ರಾಣದಾಸೆ ಮತ್ತೇಕಯ್ಯಾ ?
ಭಕ್ತ ಕಂಡಾ: ತನುಮನದಾಸೆ ಮತ್ತೇಕಯ್ಯಾ ?
ನಿಮ್ಮ ಅಂಕೆಗೆ ಝುಂಕೆಗೆ ಶಂಕಿತನಾದರೆ
ಎನ್ನ ಲೆಂಕತನಕ್ಕೆ ಹಾನಿ,
ಕೂಡಲ ಸಂಗಮದೇವಾ ! ( ೭೨೮ )

ಇದರ ಅರ್ಥವನ್ನು ಈ ರೀತಿ ಮಾಡಬಹುದು: "(ನಾನು) ಅಂಕ (ಕಂಡೆಯಾ), ಎಂದ ಮೇಲೆ ನಾನು (ಸೂಜಿ-ಬಾಳು ಮೊದಲಾಗಿ) ಯಾವ ಆಯುಧ (=ಕೋಲ)ದಿಂದಾದರೂ ಕಾದಬೇಕು; ಅದು ನನ್ನ ಕರ್ತವ್ಯ. ಒಳ್ಳೆಯ ಆಯುಧ ದೊರೆತರೆ ಮಾತ್ರ ಯುದ್ಧಮಾಡಬಹುದೆಂಬ (ಕೋಲ) ಆಸೆ ಮತ್ತೇಕೆ? ನಾನು ಲೆಂಕ (ಭೃತ್ಯ) ನಾದುದರಿಂದ ಸ್ವಾಮಿಕಾರ್ಯಕ್ಕಾಗಿ ಮಡಿಯಲೂ ಬೇಕು; ಎಂದ ಮೇಲೆ ಪ್ರಾಣದಾಸೆ ಮತ್ತೇಕೆ ? ನಾನು ಭಕ್ತನಾದುದರಿಂದ ತನುಮನಧನಗಳನ್ನು ದಾಸೋಹದಲ್ಲಿ ಸವಿಸಲೆಬೇಕು; ಅದು ತನ್ನ ಧರ್ಮ; ಎಂದ ಮೇಲೆ, ಕೂಡಲ ಸಂಗಮದೇವಾ, ನಿನ್ನ ಆಜ್ಞೆಗೆ ಅಥವಾ ಬೆದರಿಕೆಗೆ ನಾನು ಬೆದರಿದರೆ ನಿನ್ನ ಸೇವಕನಲ್ಲಾ—" ಎಂದು ಸರಳವಾಗಿ ಮಾಡಿಕೊಳ್ಳಬಹುದಲ್ಲವೆ? ಇಲ್ಲಿ 'ಕಂಡಾ' ಎಂಬುದರ ಮುಂದೆ ಪ್ರಶ್ನೆ ಚಿಹ್ನೆಯನ್ನೂ ಬಳಸಬಹುದ; ಆದರೆ ನಮ್ಮ ದೃಷ್ಟಿಯಲ್ಲಿ ಈ ಅಡಕಿಲು ಚಿಹ್ನವೆ ಹೆಚ್ಚು ಸೂಕ್ತವೆಂದು ತೋರಿದೆ.

**ಒಂಟಿ (' ') ಅಥವಾ ಜೋಡು (" ") ಅವತರಣ ಚಿಹ್ನ**ಗಳನ್ನು ಅಲ್ಲಲ್ಲಿ ಬಳಸಿದ್ದೇವೆ. ಆದರಿಂದ ಅರ್ಥವ್ಯಕ್ತಿ ಸುಗಮವಾಗುವುದೆಂದು ನಮ್ಮ ಎಣಿಕೆ. ಇನ್ನು ವಾಕ್ಯಸರಣಿಯಲ್ಲಿ ಭಂಗದೋರಿದಾಗ ಅದನ್ನು ಸೂಚಿಸುವುದಕ್ಕೆಂದು ( dash ಡಾಷ್ ) ಎಂಬ (—) ಸರಳ ರೇಖೆಯನ್ನು ಉಪಯೋಗಿಸಿದ್ದೇವೆ. ವಾಕ್ಯ ಭಂಗವಾಗಿ; ನಡುವೆ ಬೇರೆ

ವಿಚಾರ ಬಂದಿದ್ದರೆ, ಅಂತಹ ವಾಕ್ಯಭಂಗವನ್ನು, ಅದರ ಹಿಂದೆಯೂ ಮುಂದೆಯೂ ಈ ಸರಳರೇಖೆಯನ್ನು ಬಳಸಿ, ಇತರ ಭಾಗಗಳಿಂದ ಪ್ರತ್ಯೇಕಿಸಿದ್ದೇವೆ. ಉದಾ:

(೪) ಮುನ್ನಿನ ಆದ್ಯರ ಪಥಂಗಳು ಇನ್ನಾರಿಗೆಯೂ ಅಳವಡದು, ನೋಡಾ. ಬಲ್ಲೆನಾಗಿ ಒಲ್ಲೆನವರು ಸಲ್ಲರು ಶಿವಪಥಕ್ಕೆ. ಒಳ್ಳಿಹ ಮೈಲಾರನ ಸಿಂಗಾರದಂತೆ, ವೇಶಿಯ ಬಾಯಂಜಲನುಂಬ ದಾಸಿಯ ಸಂಸಾರದಂತೆ ಕೂಡಲ ಸಂಗನ ಶರಣರ ನರಿಯದ ಉಳಿದ ಭಂಗಿತರ ೩೭.

ಇದಕ್ಕೆ ತಕ್ಕ ವಿರಾಮ ಚಿಹ್ನೆಗಳನ್ನು ಬಳಸಿ ಕೆಳಗಿನಂತೆ ಬರೆಯುವುದರಿಂದ ಅರ್ಥ ಸರಳವಾಗುವುದರಲ್ಲಿ ಸಂದೇಹವಿಲ್ಲ:

ಮುನ್ನಿನ ಆದ್ಯರ ಪಂಥಂಗಳು ಇನ್ನಾರಿಗೆಯೂ ಅಳವಡದು, ನೋಡಾ!
ಬಲ್ಲೆನಾಗಿ ಒಲ್ಲೆನು— ಅವರು ಸಲ್ಲರು ಶಿವಪಥಕ್ಕೆ,
ಒಳ್ಳಿಹ ಮೈಲಾರನ ಸಿಂಗಾರದಂತೆ
ವೇಶಿಯ ಬಾಯಂಜಲನುಂಬ ದಾಶಿಯ ಸಂಸಾರದಂತೆ—
ಕೂಡಲ ಸಂಗನ ಶರಣರನರಿಯದ ಉಳಿದ ಭಂಗಿತರ ! (೬೩೩)

ಈ ವಚನದ ಎರಡನೆಯ ವಾಕ್ಯವನ್ನು ಈ ರೀತಿ ಅನ್ವಯಿಸಿಕೊಳ್ಳಬಹುದೆಂದು ಕಾಣುತ್ತದೆ. "ಕೂಡಲ ಸಂಗನ ಶರಣರನರಿಯದ ಉಳಿದ ಭಂಗಿತರನ್ನು ಬಲ್ಲೆನಾಗಿ (ನಾನು) ಅವರನ್ನು ಒಲ್ಲೆನು; ಒಳ್ಳಿಹ ಮೈಲಾರನ ಸಿಂಗಾರದಂತೆ, ವೇಶಿಯ ಬಾಯಂಜಲ ತಿನ್ನುವ ದಾಸಿಯ ಸಂಸಾರದಂತೆ ಅವರು ಶಿವಪಥಕ್ಕೆ ಸಲ್ಲರು"––ಎಂದು.

ವಿರಾಮಚಿಹ್ನೆಗಳನ್ನು' ಬಳಸುವಲ್ಲಿ ಒಂದು ಕ್ರಮಬೇಕು, ವಿಶೇಷ ಜಾಗ್ರತೆಯೂ ಬೇಕು–ಎಂದು ಹೇಳಬೇಕಾಗಿಲ್ಲ ಆದರೆ ಅಂತ ಓರನ್ನವಾದ ಬಗೆ ಏರ್ಪಡಬೇಕಾದರೆ ಕನ್ನಡದಲ್ಲಿಯ ಮುದ್ರಣಕಲೆ ಇನ್ನೂ ಬಹುದೂರ ಮುಂದುವರಿಯಬೇಕು ಸಾಧ್ಯವಿದ್ದಷ್ಟು ಎಚ್ಚರಿಕೆಯನ್ನು ತಳೆದಿದ್ದೇವೆ ಎಂದು ಮಾತ್ರ ನಾವು ಇಲ್ಲಿ ಹೇಳಬಹುದು

ಆದರೆ ಸಕೃದ್ದರ್ಶನಕ್ಕೆ ಈ ವಚನ ಹರಿಬ್ರಹ್ಮರನ್ನು ಮರೆಯಲಾಗದು, ಶಿವನನ್ನು ಮರೆಯಬಹುದು. ಎಂದು ಅರ್ಥವಾಗುವಂತೆ ಕಾಣುವುದರಿಂದ, ಇತ್ತೀಚಿನ ಹಸ್ತಲಿಖಿತ ಪ್ರತಿಗಳಲ್ಲಿ:

ಮರೆಯಲಾಗದೆ ಹರಿಯು? ಮರೆಯಲಾಗದೆ ಬ್ರಹ್ಮನ?
ಮರೆಯಲಾಗದೆ ತೆತ್ತೀಸಕೋಟಿ ದೇವರ್ಕಳ?
ನಮ್ಮ ಕೂಡಲ ಸಂಗಮದೇವನ ಮರೆಯಲಿಹುದು!

ಎಂದು ತಿದ್ದಿ ಬರೆದಿರಬೇಕೆಂದು ತೋರುತ್ತಿದೆ. ಈ ಪಾಠವೇ ಶ್ರೀ ಹಳಕಟ್ಟಿಯವರ "ಬಸವೇಶ್ವರನ ವಚನಗಳ"ಲ್ಲಿ ಅಂಗೀಕೃತವಾಗಿದೆ[೪೬]. ಆದರೆ ಬಸವಣ್ಣನವರು ಹರಿಬ್ರಹ್ಮರನ್ನು ನಂಬುತ್ತಿದ್ದವರನ್ನು ಕುರಿತು ವ್ಯಂಗ್ಯವಾಗಿ ನುಡಿದ ವಚನವಿದೆಂದು ನಮಗೆ ತೋರುತ್ತಿದೆ. ಇಲ್ಲಿ 'ಮಱೆ' ಎಂಬ ಶಬ್ದದಲ್ಲಿ ದ್ವಂದ್ವಾರ್ಥವಿದೆಯೆಂದೂ ಹೇಳಬಹುದು. 'ಮಱೆ' ಕ್ರಿಯಾಪದವಾದಾಗ 'ವಿಸ್ಮರಣೆಹೊಂದು' ಎಂಬ ಅರ್ಥವನ್ನೂ ನಾಮ ವಾದಾಗ 'ಆಶ್ರಯ'ವನ್ನೂ ಸೂಚಿಸುತ್ತಿದೆ. ಆದುದರಿಂದ, "ಹರಿಬ್ರಹ್ಮ ರನ್ನು ಮರೆಯುವುದು ಈ ಜನರಿಗೆ ಆಗುವುದಿಲ್ಲ; ಆದರೆ ಆ ದೇವತೆಗಳ ಆಶ್ರಯವೂ ಇವರಿಗೆ ಸಿಕ್ಕುವುದಿಲ್ಲ. ಕೂಡಲ ಸಂಗಮನನ್ನು ಮರೆಯ ಬಹುದೆಂದು ತಿಳಿದಿದ್ದಾರೆ ಇವರು; ಆದರೆ ಕೊನೆಗೆ ಇವರಿಗೆ ನಿಜವಾದ ಆಶ್ರಯಸ್ಥಾನ ಆತನೆ" ಎಂಬುದೇ ಬಸವಣ್ಣನವರ ಅಭಿಪ್ರಾಯವಿದ್ದಿರ ಬೇಕು[೪೭]. ಆದುದರಿಂದ ಈ ಸಂಸ್ಕರಣದಲ್ಲಿ ಈ ವಚನದ ತಿದ್ದುಪಡಿ ಯನ್ನು ನಾವು ತಾಳೆವೋಲೆಯ ಪ್ರತಿಗಳಿಗನುರೂಪವಾಗಿ ಶುದ್ಧಿಪತ್ರಿಕೆ ಯಲ್ಲಿ ಕೊಟ್ಟದ್ದೇವೆ.

೯ ಜಂಗಮುಕ್ಕೆಱೆದರೆ ಸ್ಥಾವರ ನೆನೆಯಿತ್ತು. (೧೯೬)

ಎಂಬಲ್ಲಿ 'ನೆನೆ' ಎಂಬ ಶಬ್ದದಲ್ಲಿ (೧) ತೊಯ್ಯು (೨) ಸ್ಮರಿಸು ಎಂಬೆರಡು ಅರ್ಥಕ್ಕೂ ಎಡೆಯಿದೆ. [ (ಸ್ಥಾವರ) ಲಿಂಗಕ್ಕೆ ಅಗ್ಗವಣಿ ನೀರಿನಿಂದ ಮಜ್ಜನಕ್ಕೆರೆವುದಕ್ಕಿಂತ ಜಂಗಮರಿಗೆ ಧನವನ್ನು ಸುರಿಸಿದರೆ ಲಿಂಗ ತೃಪ್ತಿ ಯಾಗುವುದೆಂಬ ಭಾವ. ]

ಆದುದರಿಂದ, ಕೋಶದಲ್ಲಿ ನಮಗೆ ದ್ವಂದ್ವಾರ್ಥವಿದೆಯೆಂದು ತೋರಿದ ಎಡೆಗಳಲ್ಲಿ ಶಬ್ದಗಳಿಗೆ ಬೇರೆ ಬೇರೆ ಅರ್ಥಗಳನ್ನು (೧) ಮತ್ತು (೨) ಅಂಕೆಗಳಿಂದ ಸೂಚಿಸಿದ್ದೇವೆ.

ಈ ವಚನಗಳಲ್ಲಿ ಬಳಕೆತಪ್ಪಿ, ಅಂತೆಯೆ, ಅಪರಿಚಿತ ಅಥವಾ ಹೊಸ ವೆನಿಸುವ ಶಬ್ದಗಳು ಅನೇಕವಿರುವುವೆಂಬ ದೃಷ್ಟಿಯಿಂದಲೂ, ಎಷ್ಟೋ ಕಡೆಗಳಲ್ಲಿ ಶ್ಲೇಷೆಗೆ ಅವಕಾಶವಿರುವುದೆಂಬ ದೃಷ್ಟಿಯಿಂದಲೂ ಕೋಶದ ಆವಶ್ಯಕತೆ ಇರುವುದೆಂಬುದು ನಾವು ಮೇಲೆ ಕೊಟ್ಟ ಉದಾಹರಣೆಗಳಿಂದ ಓದುಗರಿಗೆ ಸ್ಪಷ್ಟವಾಗುವುದೆಂದು ಆಶಿಸುತ್ತೇವೆ. ಈ ಕೋಶವನ್ನು ಸಿದ್ಧ ಪಡಿಸುವಲ್ಲಿ ನಾವು ಸಾಧ್ಯವಿದ್ದಷ್ಟು ಶ್ರದ್ಧೆ-ಜಾಗ್ರತೆಗಳನ್ನು ವಹಿಸಿದ್ದೇ ವೆಂದು ಹೇಳಬಹುದಾದರೂ, ನಮ್ಮ ಕಾರ್ಯ ಸಂಪೂರ್ಣ ತೃಪ್ತಿಕರ ವಾಗಿದೆಯೆಂದು ಹೇಳಲಾರೆವು. ಹಲವು ಶಬ್ದಗಳಿಗೆ ನಮಗೆ ಸರಿಯಾದ ಅರ್ಥ ದೊರೆಯದ್ದರಿಂದ ಅಂತಹ ಕಡೆಗಳಲ್ಲಿ (ಪ್ರಶ್ನೆಚಿಹ್ನೆಯನ್ನು ಬಳಸಿ) ಅರ್ಥವನ್ನು ಕೊಡದೆ ಹಾಗೆ ಬಿಟ್ಟಿದ್ದೇವೆ. ವಾಚಕರೂ, ಪಂಡಿತರೂ, ಜಿಜ್ಞಾಸುಗಳು ಪ್ರಮಾದಗಳನ್ನು ತಿದ್ದಲು ನೆರವಾಗುವರೆಂದು ಆಶಿಸುತ್ತೇವೆ

ವಚನಗಳ ಕೈಬರೆಹದ ಕೆಲವು ತಾಳೆವೋಲೆಯ ಪ್ರತಿಗಳಲ್ಲಿ ಹಳ ಗನ್ನಡದಲ್ಲಿ ಬಳಕೆಯಾಗುತ್ತಿದ್ದ ಶಕಟ ರೇಫೆ (ಱ)ಯ ಪ್ರಯೋಗ ಕಂಡು ಬರುತ್ತಿದೆ. ಆದರೆ ಅದು ಯಾವಾಗಲೂ ಸರಿಯಾಗಿಯೆ ಉಪಯೋಗ ವಾಗಿದೆಯೆಂದು ಹೇಳಲಾಗದು. ಆದರೂ ಈ ವರ್ಣದ ಉಪಯೋಗದಿಂದ ಎಷ್ಟೋ ಕಡೆಗಳಲ್ಲಿ ಅರ್ಥ ಸುಗಮವಾಗುವುದೆಂದು ಕಂಡುಬರುತ್ತಿದೆ. ಉದಾಹರಣೆಗಾಗಿ:

(೧೦) ಉಱು ತಾಗಿದ ಮೃಗವು ಒಂದಡಿಯಿಡುವುದೆ? (೭೯೨)

ಎಂಬಲ್ಲಿ ಬಂದಿರುವ 'ಉಱು' ಎಂಬುದನ್ನು 'ಉರಿ' ಎಂದು ಬರೆದರೆ ಅದು 'ಪಶು-ಪಕ್ಷಿಗಳನ್ನು ಹಿಡಿಯುವ ಬಲೆ'ಯನ್ನು ಸೂಚಿಸುತ್ತಿದೆಂಬುದು ವಾಚಕರಿಗೆ ಗೊತ್ತಾಗದೆ ಹೋಗುವ ಸಂಭವವಿದೆ. ಆದುದರಿಂದ, ಈ ಸಂಸ್ಕರಣದಲ್ಲಿ ಱಕಾರವನ್ನು ಬಳಸಿದ್ದೇವೆ. ಆದರೆ, ಅಜ್ಞಾನದಿಂದಾ

ಗಲಿ ಮರೆವೆಯಿಂದಾಗಲಿ ಇದರ ಬಳಕೆಯಲ್ಲಿ ತಪ್ಪುಗಳಾಗುವ ಸಂಭವ ವಿರುವುದರಿಂದ, ಅಂತಹ ಅಶುದ್ಧಗಳನ್ನು ಮುಂದಿನ ಮುದ್ರಣದಲ್ಲಿ ಸರಿಗೊಳಿಸಲಾಗುವುದು.

೮

ಈ ವಚನಗಳನ್ನು ಸಂಸ್ಕರಿಸುವ ಕಾರ್ಯದಲ್ಲಿ ಅನೇಕ ತಾಳಿವೋಲೆಯ ಮತ್ತು ಕೈಬರೆಹದ ಕಾಗದದ ಪ್ರತಿಗಳನ್ನೂ, ಹಲವು ಮುದ್ರಿತ ಪ್ರತಿಗಳನ್ನೂ, ಅಲ್ಲದೆ ಕೆಲವು ಟೀಕಿನ ಪ್ರತಿಗಳನ್ನೂ ಉಪಯೋಗಿಸಿಕೊಂಡಿದ್ದೇವೆ. ರಾ. ಬ. ಹಳಕಟ್ಟಿಯವರು ಸಂಪಾದಿಸಿದ (ಹಳೆಯ ಪದ್ಧತಿಯ) ಎಲ್ಲ ಸಂಸ್ಕರಣಗಳನ್ನೂ "ಹೊಸಪದ್ಧತಿಯ ಬಸವೇಶ್ವರನ ವಚನಗಳು" ಎಂಬುದರ (೧೯೪೨) ಆವೃತ್ತಿಯನ್ನೂ ಬಳಸಿಕೊಂಡಿದ್ದೇವೆ.

ಕೈಬರೆಹದ, ತಾಳೆವೋಲೆಯ, ಮತ್ತು ಕಾಗದದ ಪ್ರತಿಗಳಲ್ಲೆಲ್ಲ ಸಾಮಾನ್ಯವಾಗಿ ವಚನಗಳ ಆನುಪೂರ್ವಿ ಒಂದೇ ವಿಧವಾಗಿದೆ. ಅಲ್ಲಲ್ಲಿ ಒಂದೆರಡು ಅಪವಾದಗಳೂ ಉಂಟು. ಆದರೆ ಇಂತಹ ಅಪವಾದಗಳು ಪ್ರತಿಮಾಡುವವರ ಕಣ್ತಪ್ಪಿನಿಂದಾದುವುವೆಂದು ಹೇಳಲು ಬರುವಂತಿದೆ. ಆದುದರಿಂದ, ನಾವು ಹೆಚ್ಚು ಪ್ರತಿಗಳಲ್ಲಿ ಕಾಣುವ ಆನುಪೂರ್ವಿಯನ್ನೆ ಅನುಸರಿಸಿದ್ದೇವೆ. ಅಪವಾದಗಳನ್ನು ಅಡಿಟಿಪ್ಪಣಿಯಲ್ಲಿ ನಿರ್ದೇಶಿಸಿದ್ದೇವೆ.

ಈ ವಚನಗಳಿಗೆ "ಷಟ್‌ಸ್ಥಳದ ವಚನಗಳು" ಎಂದೆ ತಾಳೆವೋಲೆಯ ಮಾತೃಕೆಗಳಲ್ಲಿ ದೊರೆಯುತ್ತಿದೆ, ಕೈಬರೆಹದ ಪ್ರತಿಗಳಲ್ಲೆಲ್ಲ ಈ ವಚನಗಳನ್ನು ಷಟ್‌ಸ್ಥಳಾನುಸಾರವಾಗಿಯೆ ವಿಭಾಗಮಾಡಿದುದೂ ಕಂಡು ಬರುತ್ತಿದೆ; ಅಲ್ಲದೆ, ಪ್ರತಿಯೊಂದು ಸ್ಥಳದಲ್ಲಿಯೂ ಮತ್ತೆ ಉಪವಿಭಾಗಗಳಿದ್ದುದೂ ಗೋಚರವಾಗುತ್ತಿದೆ. ಆದುದರಿಂದ ನಾವು ಈ ಎಲ್ಲ ಭಾಗ-ವಿಭಾಗಗಳನ್ನು ಈ ಸಂಸ್ಕರಣದಲ್ಲಿ ಇದ್ದಂತೆ ಉಳಿಸಿಕೊಂಡಿದ್ದೇವೆ.

ಹಲವರು—ಬಸವಣ್ಣನವರ, ಇಲ್ಲವೆ ಇನ್ನಿತರ ವಚನಕಾರರ ವಚನಗಳು ಬಿಡಿ ಬಿಡಿಯಾಗಿಯೆ ರಚಿತವಾದುವು; ಅವುಗಳಿಗೆಲ್ಲ ಪರಸ್ಪರ ಸಂಬಂಧವನ್ನು ಕಲ್ಪಿಸಿ, ಸ್ಥಳಕಟ್ಟುಗಳನ್ನು ಬಹುಕಾಲದ ತರುವಾಯ

ಬೇರೆಯವರು ಮಾಡಿರಬೇಕು-ಎಂದು ಊಹಿಸುತ್ತಾರೆ. ಆದರೆ ಈ ಊಹೆಗೆ ಬಲವತ್ತರವಾದ ಆಧಾರಗಳು ಇದ್ದಂತೆ ನಮಗೆ ತೋರುವುದಿಲ್ಲ ಅದೇನೆ ಇರಲಿ, ಈ ಸ್ಥಳಕಟ್ಟುಗಳ ಮತ್ತು ಅವಾಂತರ ವಿಭಾಗಗಳು ನಿರ್ದೇಶವು ಎಲ್ಲ ಮಾತೃಕೆಗಳಲ್ಲಿಯೂ ಒಂದೇ ವಿಧವಾಗಿರುವುದರಿಂದ ಅವುಗಳನ್ನು ಇದ್ದಂತೆ ಇಟ್ಟುಕೊಳ್ಳುವುದು ಲೇಸೆಂಬ ನಿರ್ಣಯಕ್ಕೆ ನಾವು ಬಂದಿದ್ದೇವೆ. ಕೆಲವು ಸಂದರ್ಭಗಳಲ್ಲಿ ಮೊದಲಿನ ಒಂದು ಸ್ಥಳದಲ್ಲಿ ಬರುವ ಹಿಂದಣ ಒಂದು ವಚನಕ್ಕೂ ಮತ್ತೊಂದು ಸ್ಥಳದಲ್ಲಿ ಬರುವ ಮುಂದಣ ಇನ್ನೊಂದು ವಚನಕ್ಕೂ ಸಕೃದ್ದರ್ಶನಕ್ಕೆ ಕಾಣಬರುವ ವಿರೋಧ ಈ ಸ್ಥಳಕಟ್ಟುಗಳ ಹಿನ್ನೆಲೆಯಲ್ಲಿಯೆ ಬಗೆಹರಿಯುವುದೆಂದು ಗೊತ್ತಾಗುವುದರಿಂದ ಸ್ಥಳಕಟ್ಟುಗಳನ್ನು ಕಾಯ್ದುಕೊಳ್ಳುವುದು ಆವಶ್ಯಕವೆಂದು ನಮಗೆ ತೋರಿದೆ[೪೮]. ಶ್ರೀ ಹಳಕಟ್ಟಿಯವರೆ ಸ್ಥಳಕಟ್ಟಿನ ಮಹತ್ತ್ವವನ್ನು ಕುರಿತು "ಯಾವುದಕ್ಕೆ ಇಂಗ್ಲಿಷದಲ್ಲಿ ಮಿಸ್ಟಿಸಿಜಮ್ ಎಂಬ ಹೆಸರು ಇದೆಯೊ (ಇದಕ್ಕೆ ನಾವು 'ಶಿವಾನುಭವ, ಎಂಬ ಹೆಸರನ್ನು ಕೊಟ್ಟಿದ್ದೇವೆ) ಆ ವಿಷಯವು ಷಟ್‌ಸ್ಥಲ ವಿಷಯಗಳಲ್ಲಿ ಅಡಕವಾಗಿದ್ದು ಈ ಸ್ಥಲಗಳಿಗೆ ಅನುಸರಿಸಿ ವಚನಗಳ ಜೋಡಣೆ ಇರುವುದುಂಟು" ಎಂದು ಹೇಳಿದುದು[೪೯] ಸರಿಯೆಂದು ನಮ್ಮ ಅಭಿಪ್ರಾಯ.

ಈಗ ಪ್ರಚಾರದಲ್ಲಿರುವ ಬಸವಣ್ಣನವರ ವಚನಗಳಲ್ಲಿ ಕೆಲವಾದರೂ ಪ್ರಕ್ಷಿಪ್ತ ವಚನಗಳು ಸೇರಿರಬೇಕೆಂದೂ, ಪರಸಮಯ ನಿಂದಾವ್ಯಂಜಕಗಳೆಂದೆನಿಸುವ ವಚನಗಳು ಆ ವರ್ಗಕ್ಕೆ ಸೇರಬೇಕಾದುವೆಂದೂ ಕೆಲವರು--ಬಸವಣ್ಣನವರ ಬಗೆಗೆ ಸದಭಿಮಾನವನ್ನು ತಾಳಿಯೆ--ತರ್ಕಿಸುತ್ತಾರೆ. ಆದರೆ ನಾವು ನೋಡಿದ ಎಲ್ಲ ಕೈಬರೆಹದ ಪ್ರತಿಗಳಲ್ಲಿಯೂ ಇವೆಲ್ಲ ವಚನಗಳು ಓರಸ್ನವಾಗಿಯೆ ಇರುವುವು; ಅಲ್ಲದೆ, ಬಸವಣ್ಣನವರ ವಚನಗಳನ್ನು 'ಗೀತೆಗಳೆ'ಂದು ಕರೆದು ಅವುಗಳನ್ನು ಬಹುವಾಗಿ ಹೊಗಳಿದ ಹರಿಹರದೇವನು ಆ ವಚನಗಳ ಪರಿವಿಡಿಯನ್ನೆ ಹೇಳುವನೊ ಎಂಬಂತೆ, ತನ್ನ ಬಸವರಾಜದೇವರರಗಳೆಯಲ್ಲಿ[೫೦] ಅವುಗಳನ್ನು ಕೆಳಗೆ ಕಾಣಿಸಿದಂತೆ ಬಣ್ಣಿಸಿರುವುದು ಈ ಸಂದರ್ಭದಲ್ಲಿ ನೆನಪಿನಲ್ಲಿಡಲು ತಕ್ಕುದಾಗಿದೆ:

ನೆನೆನೆನೆದು ಪುಳುಕಿಸುತೆ ಗೀತವುಂ ಪಾಡುತುಂ
ಮುನಿದು ಸಂಗಂಗೆ ಹೊಸಗೀತವುಂ ಹಾಡುತುಂ
ಮೂದಲಿಸಿ ಹಾಡುತುಂ ಮುದ್ದಿಸುತೆ ಹಾಡುತುಂ
ಆದರಿಸಿ ಹಾಡುತುಂ ಮೇರೆಗೆಡೆ ಹಾಡುತುಂ
ಗೀತಂಗಳೊಳಗೇಕನಿಷ್ಠೆ ಹೊಳೆಹೊಳೆಯುತಿರೆ
ಗೀತಂಗಳೊಳಗಭವಭಕ್ತಿ ಬೆಳೆಬೆಳೆಯುತಿರೆ
ಗೀತದೊಳ್ ಸಂಗನಾಧಿಕ್ಯಮೊಪ್ಪುತ್ತುಮಿರೆ
ಗೀತದೊಳ್ ಶರಣರ ಸಮುಗ್ರವೇ ಜಗಿಲುತಿರೆ
ಗೀತದೊಳ್ ಪರದೈವಶೋಷಣಂ ತೋಱುತಿರೆ
ಗೀತದೊಳ್ ಪರಸಮಯಭೀಷಣಂ ಪೊಣ್ಮುತಿರೆ
ಗೀತಂ ಶಿವಂಗೆ ಕರ್ಣಾಭರಣವಾಗುತಿರೆ
ಗೀತಮೀಶನ ದಯಾಕರುಷಣವದಾಗುತಿರೆ
ಹಾಡುತುಂ ಶರಣರೊಳ್ ಬಸವಣ್ಣನೊಪ್ಪಿದಂ
ಆಡುತುಂ ಭಕ್ತನಿಧಿ ಬಸವಣ್ಣನೊಪ್ಪಿದಂ.

ಪರದೈವಶೋಷಣಕರವಾದ ಪರಸಮಯಭೀಷಣವೆನಿಸುವ ಬಸವಣ್ಣನವರ ವಚನಗಳು ಹರಿಹರದೇವನ ಕಾಲದಲ್ಲಿಯೆ ಪ್ರಚಾರದಲ್ಲಿದ್ದುವಾದುದರಿಂದ, ಇಂತಹ ವಚನಗಳು ಪ್ರಕ್ಷಿಪ್ತವಾಗಿರಬಹುದೆ ಎಂಬ ವಿಷಯವನ್ನು ವಿವೇಚಿಸುವ ಗೊಡೆವೆಗೆ ನಾವು ಕೈಯಾನಲಿಲ್ಲ.

ಬಸವಣ್ಣನವರ ಷಟ್‌ಸ್ಥಳದ ವಚನಗಳಿಗೆ ಹಲವು ಬಗೆಯ ಟೀಕೆಗಳು ಅನೇಕ ಶತಮಾನಗಳಿಂದಲೂ ಬಳಕೆಯಲ್ಲಿದ್ದಂತೆ ಕಂಡು ಬರುತ್ತಿದೆ. ನಮಗೆ ದೊರಕಿದ ಟೀಕಿನ ಪ್ರತಿಗಳಲ್ಲಿ ಕೆಲವು ತಾಳೆವೋಲೆಯ ಮೇಲೆಯೂ ಇವೆ. ಆದರೆ ಇವುಗಳಿಂದ ವಚನಗಳ ಪಾಠದ ಶುದ್ಧತೆಗಾಗಲಿ, ಅರ್ಥದ ಸುಗಮತೆಗಾಗಲಿ ಹೆಚ್ಚು ನೆರವಾಗುವಂತೆ ನಮಗೆ ತೋರಿಲ್ಲ. ಮೇಲಾಗಿ ಈ ಟೀಕೆಗಳು ಶಿವಾನುಭವ, ಶೈವಸಿದ್ಧಾಂತ, ವೇದಾಂತ ಮುಂತಾದ ಪರಂಪರೆಗಳಿಗನುಸಾರವಾಗಿ ಬೇರೆ ಬೇರೆಯಾಗಿರುವಂತೆಯೂ ಕಂಡುಬಂದಿದೆ. ಈ ಟೀಕೆಗಳಿಂದ ಅಲ್ಲೊಂದು ಇಲ್ಲೊಂದು ಶಬ್ದಕ್ಕೆ ಸಾಂಪ್ರದಾಯಿಕ ಅರ್ಥವೇನಿದ್ದಿತೆಂಬುದು ಗೊತ್ತಾಗಬಹುದಾ

ಗಿದೆ. ಒಟ್ಟಿನಲ್ಲಿ ಟೀಕಿನ ಪ್ರತಿಗಳಿಂದ ನಮಗೆ ಹೆಚ್ಚಿನ ಪ್ರಯೋಜನ ವೇನೂ ಆಗಲಿಲ್ಲವೆಂದೇ ಹೇಳಬೇಕಾಗಿದೆ.

೬

ಈ ಸಂಸ್ಕರಣದಲ್ಲಿ ಕೆಲವು ಚಿತ್ರಗಳನ್ನೂ ಸೇರಿಸಲಾಗಿದೆ. ಅವು ಗಳಲ್ಲಿ ಕೂಡಲ ಸಂಗಮದಲ್ಲಿಯ ಬಸವಣ್ಣನವರು ಐಕ್ಯಹೊಂದಿದ ಸ್ಥಾನ ವನ್ನು ಸೂಚಿಸುವ ಕಲ್ಲಮಂಟಪದ ಚಿತ್ರವೊಂದಾಗಿದೆ. ಇನ್ನೊಂದು ಶಿವನ ನಾಟ್ಯವನ್ನು ಪ್ರಕಟಿಸುವ ನಟರಾಜನ ಚಿತ್ರ. ಇದು ದಕ್ಷಿಣಭಾರತನಲ್ಲಿ ಅತಿ ಪ್ರಚಾರದಲ್ಲಿರುವ, ಬಹುಭಾವಗರ್ಭಿತ ಶಿಲ್ಪವೆಂದು ಜಗತ್ತಿನಲ್ಲಿಯೆ ಪ್ರಸಿದ್ಧವಿರುವ, ಕಂಚಿನ ಮೂರ್ತಿಯ ಛಾಯಾಚಿತ್ರ[೫೧]. ವೀರಶೈವರು ಮೂರ್ತಿಪೂಜಕರಲ್ಲವಾದುದರಿಂದ, ಬಸವಣ್ಣನವರ ವಚನಗಳ ಗ್ರಂಥದಲ್ಲಿ ಈ ಚಿತ್ರವನ್ನು ಸೇರಿಸಿದುದರ ಔಚಿತ್ಯವನ್ನು ಕೆಲವರು ಪ್ರಶ್ನಿಸಬಹುದು. ಆದರೆ ನಟೇಶ್ವರ ಮೂರ್ತಿಯ ವರ್ಣನೆ ಬಸವಣ್ಣನವರ ವಚನಗಳಲ್ಲಿಯೆ ಬಂದಿರುವುದರಿಂದಲೂ[೫೨], ಅದು ಚೈತನ್ಯಮೂರ್ತಿಯಾಗಿರುವುದರಿಂದಲೂ, ಬಸವಣ್ಣನವರು ತಮ್ಮ ಒಂದು ವಚನದಲ್ಲಿ[೫೩] "ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನ ವಾಗಿರ್ದೆ'' ಎಂದು ಹೇಳಿಕೊಂಡಿರುವುದರಿಂದಲೂ ಅವುಗಳ ದ್ಯೋತಕ ವೆಂದು ಈ ಚಿತ್ರವನ್ನು ಈ ಸಂಸ್ಕರಣದಲ್ಲಿ ಉದ್ದೇಶಪೂರ್ವಕವಾಗಿಯೆ ಸೇರಿಸಿದ್ದೇವೆ. ಇದೇ ನಟೇಶ ಮೂರ್ತಿಯು ಹಿನ್ನೆಲೆಯಲ್ಲಿ ನಾಟ್ಯವಾಡು ತ್ತಿದ್ದಂತೆ, ಬಸವಣ್ಣನವರು ವಿಚಾರಮಗ್ನರಾಗಿ ಕುಳಿತಂತೆ ಬರೆದಿರುವ ಚಿತ್ರವನ್ನು ಈ ಸಂಸ್ಕರಣದ ರಕ್ಷಾಪತ್ರದ ಮೇಲೆ ಮುದ್ರಿಸಲಾಗಿದೆ. ಈ ಸುಂದರ ಚಿತ್ರವನ್ನು ಈ ಸಂಸ್ಕರಣಕ್ಕೆಂದೆ ಬರೆದುಕೊಟ್ಟ ಸುಪ್ರಸಿದ್ಧ ಚಿತ್ರಕಲಾ ಪ್ರವೀಣರಾದ ಶ್ರೀ ಮಿಣಜಿಗಿ ಮಡಿವಾಳಪ್ಪನವರು ಎ ಆರ್. ಎ. (ಲಂಡನ್) ಅವರಿಗೆ ನಾವು ತುಂಬ ಉಪಕೃತರು.

ಈ ಸಂಸ್ಕರಣವನ್ನು ಅಚ್ಚಿಗೆ ಸಿದ್ಧಪಡಿಸುವಲ್ಲಿ, ಪಾಠಾಂತರಗಳನ್ನು ಗುರುತಿಸುವಲ್ಲಿ, ನಮಗೆ ಧಾರವಾಡದ ರಾಜಾಲಖಮಗೌಡಾ ಹೈಸ್ಕೂಲ್ಕಿನ

ಶಿಕ್ಷಕರ ವರ್ಗದವರ ಸಾಹಾಯ್ಯ ಬಹಳವಾಗಿದೆ; ಅವರಿಗೆಲ್ಲ ಈ ಮೂಲಕ ನಮ್ಮ ವಂದನೆಯನ್ನು ಸಮರ್ಪಿಸುತ್ತೇವೆ. ಬಸವಣ್ಣನವರ ವಚನಗಳ ತಾಳೆವೋಲೆಯ, ಕೈಬರೆಹದ ಪ್ರತಿಗಳನ್ನು ನಮಗೆ ಉಪಯೋಗಕ್ಕಾಗಿ ಕೊಟ್ಟ ಎಲ್ಲ ಮಹನೀಯರಿಗೂ ಸಂಸ್ಥೆಗಳಿಗೂ ನಾವು ಚಿರ ಋಣಿಗಳು.

---

# ಅಡಿಟಿಪ್ಪಣಿಗಳು

೧ Meditations of Marcus Aurelius; Anelects of Confucius; Sayings of Lord Buddha; Imitation of Christ by Thomas a Kempis—ಇತ್ಯಾದಿ.

೨ ಕುವೆಂಪು: "ವಚನಕಾರ ಬಸವೇಶ್ವರರು" (ಪ್ರಬುದ್ಧ ಕರ್ನಾಟಕ, ಸಂಪುಟ ೩೧, ಸಂಚಿಕೆ ೧, ಪುಟ ೧೧).

೩ ಉದಾಹರಣಾರ್ಥವಾಗಿ: "The New Shakespeare" Edited by Quiller-Couch and Wilson (Cambridge University Press)

೪ ಶ್ರೀ ಎಸ್. ಅನಂತರಂಗಾಚಾರ್ಯ: "ಕನ್ನಡ ಗ್ರಂಥಗಳ ಸಂಪಾದನೆ ಅಥವಾ ಸಂಸ್ಕರಣ" (ಪ್ರಬುದ್ಧ ಕರ್ನಾಟಕ, ಸಂಪುಟ ೩೧, ಸಂಚಿಕೆ ೨, ಪುಟ ೯೩–೧೧೫).

೫ ಕರ್ನಾಟಕ ಕಾದಂಬರಿ: ಪದ್ಯ ೯೨೨; (ಪ್ರಬುದ್ಧ ಕರ್ನಾಟಕ ಸಂಪುಟ ೩೧, ಸಂಚಿಕೆ ೨, ಪುಟ ೯೭).

೬ ಪ್ರಬುದ್ಧ ಕರ್ನಾಟಕ, ಸಂಪುಟ ೩೧, ಸಂಚಿಕೆ ೨, ಪುಟ ೯೭.

೭ 'ಮಿಡುಕುವುದೆ'ಂದರೆ ಬರಿ ಒದ್ದಾಡುವುದೆಂತಲ್ಲ; ಅದು ಚಿಂತೆಯನ್ನು ಸೂಚಿಸುತ್ತಿದೆ. ಅದು 'ಕಿಡಿ'ಯಲ್ಲಿಯಾದರೂ ತೋರುವ ಬಗೆ ಹೇಗೆ? ಅದರೆ, ಚಿಂತೆಗೂ ಕಿಚ್ಚಿಗೂ ಹೋಲಿಕೆಯನ್ನು ಕಲ್ಪಿಸುವುದು ಸಾಮಾನ್ಯವಾಗಿದೆ; ಈ ಪದ್ಯದಲ್ಲಿಯೆ ಆ ಹೋಲಿಕೆ ಇದೆ. ಕಿಚ್ಚಿನ ಕಿಡಿ ಮಿಡುಕುವುದು ಕಣ್ಣಿಗೆ ಕಾಣುತ್ತಿದೆ. ಮೇಲಾಗಿ, 'ಮಿಡುಕು' ಮತ್ತು 'ಮಿನುಗು' ಇವು ಸಮೀಪ

ಸಂಬಂಧದ ಶಬ್ದಗಳಿಂದೂ ತೋರುತ್ತಿದೆ. ಕಡೆಗೆ 'ಮುಡುಕುಜು' ಎಂಬ ಪರ್ಯಾಯ ಶಬ್ದ ಬಸವಣ್ಣನವರ ವಚನದಲ್ಲಿ (೨೧೨) ಪ್ರಯೋಗವಾದುದು ಈ ಸಂದರ್ಭದಲ್ಲಿ ಗಮನಾರ್ಹವಾಗಿದೆ.

೮ "After considerable experience, I feel justified in saying that in mosteases ignorance and conceit are the fruitful qarents of conjectural emendation"-William Aldis Wright, General Introduction: The Tempest, P. vii: (The New Shakespeare, edited by Sir Arthur Quiller-Couch & John Dover Wilson).

೯ The fact is there is only one general principle of emendation, which is in its essence devoid of principle. At its finest it is an inspiration. which obeys no laws and cannot be produced to order--W. W. Greig: (Bradby's Shakespeare Criticism, p. 76).

೧೦ ಕರ್ನಾಟಕ ಕವಿಚರಿತೆ ಭಾಗ ೧, (೧೯೨೪), ಪುಟ ೪೭.

೧೧ "ಹೊಸಪದ್ಧತಿಯ ಬಸವೇಶ್ವರನ ವಚನಗಳು": ವಚನ ಸಂ: ೨೯೫

೧೨ ಮಾಹೇಶ್ವರನ ಶರಣಸ್ಥಳ, ವಚನ ಸಂ: ೧೮ (ಶ್ರೀ ಹಳಕಟ್ಟಿಯವರ "ಬಸವೇಶ್ವರನ ವಚನಗಳು" ಮೂರನೆಯ ಆವೃತ್ತಿ ೧೯೩೪).

೧೩ V. S. Apte: The Practical Sanskrit-English Dictionary, p. 612 & 587.

೧೪ ಸಿಂಗಿರಾಜಪುರಾಣ, ಸಂಧಿ ೪೬, ಪದ್ಯ ೨೫.

೧೫ ಶ್ರೀ ಹಳಕಟ್ಟಿಯವರ "ಬಸವೇಶ್ವರ ವಚನಗಳು" (೩ನೆಯ ಆವೃತ್ತಿ ೧೯೩೪) ಪುಟ, ೧೯.

೧೬ "ಹೊಸಪದ್ಧತಿಯ ಬಸವೇಶ್ವರನ ವಚನಗಳು" (೧೯೪೨) ಪುಟ, ೧೬.

೧೭ ಅದೆ: ಪುಟ ೬೭.

೧೮ "ಕನ್ನಡ ಬಾವುಟ" (ಮೊದಲನೆಯ ಸಂಸ್ಕರಣ) ಪುಟ ೪೨. ಆದರೆ ಇತ್ತೀಚೆಯ ಸಂಸ್ಕರಣದಲ್ಲಿ ಸರಿಯಾಗಿ ತಿದ್ದಲಾಗಿದೆ.

೧೯ ಹರಿಹರದೇವನ "ಬಸವರಾಜದೇವರ ರಗಳೆ": (ಶ್ರೀ ಟಿ. ಎಸ್. ವೆಂಕಣ್ಣಯ್ಯನವರಿಂದ ಸಂಪಾದಿತ) ಸ್ಥಳ ೯, ಪುಟ ೬೪.

೨೦ ರಾಘವಾಂಕ: "ಸಿದ್ಧರಾಮಚರಿತ್ರ": ಸಂಧಿ ೩. ಪದ್ಯ ೩೬.

೨೧ ನಾಗಚಂದ್ರ: ಮಲ್ಲಿನಾಥ ಪುರಾಣ: ಆಶ್ವಾಸ ೩ ಪದ್ಯ ೧೧೧.

೨೨ ಗಿರಿಜಾಕಲ್ಯಾಣ, ಆಶ್ವಾಸ ೪, ಪದ್ಯ ೯೫.

೨೩ ಕುಮಾರವ್ಯಾಸ ಭಾರತ, ಆದಿಪರ್ವ ಸಂಧಿ ೧, ಪದ್ಯ ೧೬.

೨೪ One of the chief interests of Hebrew among the worlds great literatures is the uniqueness of its verse system, founded less on verbal rhythm than on parallelism of whole expressions. The other languages, burdened as they are with versification of counted syllables and measured verbal sounds, the harmonious intr-cacies and elastic windings of lyric poetry, have to be attained by a triumph of thought over mechanism: Hebrew poetry carries its lyric rhythm into the very thought itself R. G. Moulton: The Modern Reader's Bible (1934) p. 1431.

೨೫ But parallelism of clauses is independent of particular languages, and appears in any adequate translation--Ibid p. 1518

೨೬ W. I. Courtney. Literary Man's Bible; R. G. Moulton: the Modern Readar's Bible; E. Sunderland Bates; The Bible Designed to be Read as Literature; John Sterling: The Bible For Today &c.

೨೭ ಸಾಂಪ್ರದಾಯಿಕವಾದ ಮೊದಲಿನ ಪದ್ಧತಿಗೂ ನೂತನ ಪದ್ಧತಿಗೂ ಇರುವ ಭೇದವನ್ನು ತೋರಿಸುವದಕ್ಕಾಗಿ ಒಂದು ಉದಾಹರಣೆಯನ್ನು ಇಲ್ಲಿ ಕೊಡುವುದು ಅಸಮಂಜಸವೆನಿಸಲಾರದು. ಬೈಬಲ್ಲಿನಲ್ಲಿ ಒಂದು ಮಹತ್ತ್ವದ ಭಾಗವಾದ 'ಸೆಂಟ್‌ಜಾನ' (St-John) ಎಂಬುದರ ಆರಂಭದ ಕೆಲವು ವಾಕ್ಯಗಳು ಸಾಂಪ್ರದಾಯಿಕ ಬೈಬಲ್ಲಿನಲ್ಲಿ ಕೆಳಗೆ ಕಾಣಿಸಿದ ರೀತಿಯಲ್ಲಿ ಮುದ್ರಿತವಾಗಿವೆ:

1 In the beginning was the Word and the Word was with God and the Word was God.

2 The same was in the beginning with God.

3 All things were made by him; and without him was not anything made that was made.

4 In him was lif( ; and the light was the life; of men.

5 And the light shineth in darkness; and the darkness Comprehended it not.

ಈ ರೀತಿ ಮುದ್ರಿಸುವುದರಿಂದ ಈ ಐದು ವಾಕ್ಯಗಳೂ (ಒಂದೊಂದು ವಾಕ್ಯದ ಅರ್ಥ ಸರಳವಾಗಿದೆಯೆಂಬದೂ) ಒಂದೇ ವಿಚಾರಕ್ಕೆ ಸಂಬಂಧಪಟ್ಟುವು ಎಂಬ ಅಂಶ ಓದುಗರಿಗೆ ಒಮ್ಮೆಲೆ ಹೊಳೆಯುವುದಿಲ್ಲವೆಂದೇ ಹೇಳಬೇಕು. ಇದನ್ನ The Modern Readers' Bible ಎಂಬ ನೂತನ ಸಂಸ್ಕರಣದಲ್ಲಿ. ಅದರ ಸಂಪಾದಕರೂ ಸುಪ್ರಸಿದ್ಧ ಬೈಬಲ್‌ಪಂಡಿತರೂ ಬೈಬಲ್ಲಿನ ನೂತನ ಸಂಸ್ಕರಣಗಳ ಪ್ರಥಮ ಪುರಸ್ಕರ್ತರೂ ಆದ Richard G Moulton ಅವರು ಈ ರೀತಿ ಮುದ್ರಿಸಿದುದು ಕಂಡುಬರುತ್ತಿದೆ:

" IN THE BEGINNIG WAS THE WORD:
AND THE WORD WAS WITH GOD:
AND THE WORD WAS GOD.

The same was in the beginning with God. All things were made through him and without him was not any-thing made.

ಇತ್ಯಾದಿ. ಇಲ್ಲಿ ಮೇಲಿನ ಐದು ವಾಕ್ಯಗಳೆಲ್ಲ ಒಂದೆ ವಿಚಾರಕ್ಕೆ ಸಂಬಂಧಪಟ್ಟುವು ವೆಂಬುದು ಸ್ಪಷ್ಟವಾಗುತ್ತಿದೆಯಲ್ಲದೆ, ಮೊದಲಿನ ವಾಕ್ಯದಲ್ಲಿಯ ಲಯವೂ ಚೆನ್ನಾಗಿ ಒಡೆದು ಕಾಣುತ್ತಿದೆ.

೨೮ ಇತ್ತೀಚೆಗೆ 'ವಚನಗಾಯನ'ವು ಎಲ್ಲ ಕಡೆಗೂ ಪ್ರಸಾರವಾದುದೆ ಈ ಮಾತನ್ನು ಸಮರ್ಥಿಸುತ್ತಿದೆ. ಅಲ್ಲದೆ, "ವಚನಕಾರ ಬಸವೇಶ್ವರರು" ಎಂಬ ಲೇಖನ ಪ್ರಬುದ್ಧಕರ್ನಾಟಕ ಸಂ: ೩೧, ಸಂಚಿಕೆ ೧) ದಲ್ಲಿ ಶ್ರೀ 'ಕುವೆಂಪು' ಅವರು (ಪುಟ ೧೩) ಬರೆದ ಮಾತುಗಳೂ ಇದಕ್ಕೆ ಸಾಕ್ಷಿಯಾಗಿವೆ.

೨೯ "ಹೊಸಪದ್ಧತಿ ಬಸವೇಶ್ವರನ ವಚನಗಳು" ಶ್ರೀ ಫ. ಗು. ಹಳಕಟ್ಟಿ ಸಂಪಾದಿತ) ಕ್ರಮಸಂಖ್ಯೆ ೫೩೦, ಪುಟ ೮೭.

೩೦ ಶ್ರೀ ರಂಗನಾಥ ದಿವಾಕರ ಅವರ "ವಚನಶಾಸ್ತ್ರರಹಸ್ಯ" (ದ್ವಿತೀಯ ಮುದ್ರಣ ಪುಟ ೩.)

೩೧ "ಹೊಸಪದ್ಧತಿಯ ಬಸವೇಶ್ವರನ ವಚನಗಳು" ಪುಟ ೪೪.

೩೨ ಪುಟ ೧೪೦.

೩೩ 'ಬಾಳುವೇನವನ, ಬೀಳುವೇನವನ, ನಡೆಯೋನವನ, ನುಡಿಯೋನವನ' ಎಂಬೀ ಶಬ್ದಗಳು ತಾಳವೋಲೆಯ ಪ್ರತಿಗಳಲ್ಲಿ 'ಬಾಳ್ವೆಣನ, ಬೀಳ್ವೆಣನ ನಡೆವೆಣನ, ನುಡಿವೆಣನ' ಎಂದಿವೆ ಎಂದು ನಮ್ಮ ಲಕ್ಷ್ಯವನ್ನು ಅತ್ತ ಮೊದಲು ಎಳೆದುದಕ್ಕಾಗಿ ನಾವು ಶ್ರೀ ಉತ್ತಂಗಿ ಚೆನ್ನಪ್ಪನವರಿಗೆ ಋಣಿಯಾಗಿದ್ದೇವೆ.

೩೪ In the beginning was MIND
and tha Mind was with God,
and the Mind was God.
The same was in the beginning with God.
All things were made by it:
And without it was not anything made that was made.
In it was life,
and the life was the light of men.
And the light shineth in the darkness,
and the darkness overpowered it not .. ..

ರಾಬರ್ಟ್ ಬ್ರಿಜ್ಜಿಸ್ ಅವರು ಒಳ್ಳೆಯ ಕವಿಗಳಾದುದರಿಂದ ಈ ವಚನದಲ್ಲಿಯ ಪದ್ಯಲಯವನ್ನು ಗುರುತಿಸಿ ಪದ್ಯಬಂಧದಲ್ಲಿ ಈ ವಚನವನ್ನು ಮುದ್ರಿಸಿದುದು ಉಚಿತವೆ ಆಗಿದೆ.

೩೫ One of the beauties of Kanarese is that all the pauses and intonations, which in English are represented by punctuation, are expressed by the vernacular idiom itself: so that no well-constructed Kanarese sentence requires any marks of punctuation whatsoever. —E. P. Rice: A History of Kanarese Literature (1921), P. 104.

೩೬ (ಶ್ರೀ ಹಳಕಟ್ಟಿ ಸಂಪಾದಿತ) "ಬಸವೇಶ್ವರನ ವಚನಗಳು" (೧೯೩೪) ಪುಟ ೯೫; "ಹೊಸಪದ್ಧತಿಯ ಬಸವೇಶ್ವರನ ವಚನಗಳು" (೧೯೪೨) ಪುಟ ೭೩.

೩೭ (ಮೇಲಿನವೆ) "ಬಸವೇಶ್ವರನ ವಚನಗಳು" (೧೯೩೪) ಪುಟ; ೯೮; "ಹೊಸಪದ್ಧತಿಯ ಬಸವೇಶ್ವರನ ವಚನಗಳು" (೧೮೪೨) ಪುಟ; ೨.

೩೮ (ಮೇಲಿನದೆ) "ಬಸವೇಶ್ವರನ ವಚನಗಳು" (೧೯೩೪) ಪುಟ ೧೦೨ ಶ್ರೀ. ಎಂ. ಆರ್. ಶ್ರೀನಿವಾಸಮೂರ್ತಿ ಅವರ "ಭಕ್ತಿಭಂಡಾರಿ ಬಸವಣ್ಣನವರು" (ಪರಿಷ್ಕೃತ ಮುದ್ರಣ) ಪುಟ ೬೨; ಆದರೆ (ಶ್ರೀ ಹಳಕಟ್ಟಿಯವರ) "ಹೊಸಪದ್ಧತಿಯ ಬಸವೇಶ್ವರ ವಚನಗಳು" ಇದರಲ್ಲಿ 'ಬಾಲವ' ಎಂಬ ಶಬ್ದವನ್ನು ಬಿಟ್ಟು ಮುದ್ರಿಸಲಾಗಿದೆ. ಅವರಿಂದಲೆ ಸಂಪಾದಿತವಾದ ಈ ವಚನಗಳ ಮೊದಲನೆಯ ಆವೃತ್ತಿಯಲ್ಲಿ 'ಬಸುಗುತ್ತ' ಎಂಬುದಕ್ಕೆ ಪ್ರತಿಯಾಗಿ 'ಮುಸುಗುತ್ತ' ಎಂದಿರುವುದು.

೩೯ ಕಿಟ್ಟೆಲ್ ಅವರ ಕನ್ನಡ-ಇಂಗ್ಲಿಷ್ ನಿಘಂಟು (ನೋ: 'ಬಸು' ಮತ್ತು ಬಸುಳ್) ಪುಟ ೧೦೯೨; ಮತ್ತು ಹಲಾಯುಧನ "ಅಭಿದಾನ ರತ್ನಮಾಲೆ" (ಮದ್ರಾಸು ವಿಶ್ವವಿದ್ಯಾನಿಲಯದ ಪ್ರಕಟಣೆ) ಪುಟ ೯೯.

೪೦ (ಶ್ರೀ ಹಳಕಟ್ಟಿಯವರ) "ಬಸವೇಶ್ವರನ ವಚನಗಳು" (೧೯೪೪) ಪುಟ ೯೯; ಹೊಸಪದ್ಧತಿಯ "ಬಸವೇಶ್ವರನ ವಚನಗಳು" ಪುಟ: ೪೮.

೪೧ ಇಂತಹ ಕಡೆಗಳಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಯಿದೆಯೆಂಬುದನ್ನೂ ಮರೆಯಲಾಗದು. ಉದಾಹರಣಾರ್ಥವಾಗಿ: ಹರಿಹರದೇವನ ಮಾದಾರ ಚೆನ್ನಯ್ಯನ ರಗಳೆ (ಸಾಲು ೩೧೩) ಯಲ್ಲಿ ಚೆನ್ನಯ್ಯನ ಗುಪ್ತಭಕ್ತಿಯನ್ನು ಶಿವನು ಬಹಿರಂಗಪಡಿಸಿದನೆಂಬ ಸಂದರ್ಭದಲ್ಲಿ "ಮೇದಿನಿಗೆ ಬೀರಿಗರುವಾಯಿತೆನ್ನಯ ಭಕ್ತಿ" ಎಂಬಲ್ಲಿ 'ಬೀರಿಗರು' ಎಂಬುದು ಅರ್ಥವಾಗುವುದಿಲ್ಲವೆಂದು ಬಗೆದು ಅದನ್ನು 'ಬೀದಿಗಳು' ಎಂದು ತಿದ್ದಿದರೆ ಅರ್ಥ ಸ್ಪಷ್ಟವಾಗುವುದೆಂದು ಪ್ರಬುದ್ಧ ಕರ್ನಾಟಕ: ಸಂಪುಟ ಸಂಚಿಕೆ ೩೧ ಪುಟ ೯೯) "ಕನ್ನಡ ಗ್ರಂಥಗಳ ಸಂಪಾದನೆ ಅಥವಾ ಸಂಸ್ಕರಣ" ಎಂಬ ಲೇಖದಲ್ಲಿ ಶ್ರೀ ಎಸ್ ಅನಂತರಂಗಾಚಾರ್ಯರವರು ಸೂಚಿಸಿದ್ದಾರೆ. ಆದರೆ "ಬೀದಿಗಳುವಾಯಿತ್ತು" ಎಂಬುದನ್ನು ಹೇಗೆ ಅರ್ಥಯಿಸಬೇಕೆಂಬದನ್ನು ಅವರು ತಿಳಿಸಿಲ್ಲ. ಅದನ್ನು 'ಬೀದಿಗೆ ಅಳು ವಾಯಿತ್ತೆ'ಂದಾಗಲಿ 'ಬೀದಿಯ ಕಳುವಾಯಿತ್ತೆ'ಂದಾಗಲಿ ಎರಡು ರೀತಿಯಲ್ಲಿ ಅನ್ವಯಿಸಿಕೊಳ್ಳಬಹುದೆಂದು ಕಾಣುತ್ತಿದೆ. ಆದರೆ ಈ ಎರಡು ರೀತಿಯಲ್ಲಿಯೂ

ನಮಗೆ ಸರಿಯಾದ ಅಥವಾ ಸ್ಪಷ್ಟವಾದ ಅರ್ಥವಾಗಲಿಲ್ಲ. ಇವೆರಡರಲ್ಲಿಯೂ ಹಿಂದೆ ಇರುವ 'ಮೇದಿನಿಗೆ' ಎಂಬುದರ ಔಚಿತ್ಯ ತಿಳಿಯದೆ ಹೋಗುತ್ತಿದೆ. ಆದರೆ ಮೊದಲಿದ್ದ ಪಾಠವನ್ನೆ ಇಟ್ಟುಕೊಂಡು ''ಮೇದಿನಿಗೆ ಬೀರಿಗರು ವಾಯಿತ್ತು" (=ಜಗತ್ತಿಗೆಲ್ಲ ಗೊತ್ತಾಗಿ ಬಹಳ ದೊಡ್ಡದಾಯಿತು) ಎಂದು ಸಮರ್ಪಕವಾಗಿ ಅರ್ಥ ಮಾಡಿಕೊಳ್ಳಲು ಬರಬಹುದಲ್ಲವೆ?

೪೨ ಶ್ರೀ ಹಳಕಟ್ಟಿಯವರ ''ಬಸವೇಶ್ವರನ ವಚನಗಳು'' (೧೯೩೪) ಪುಟ ೩೧; ಹೊಸಪದ್ಧತಿಯ ''ಬಸವೇಶ್ವರನ ವಚನಗಳು'' (೧೯೪೨) ಪುಟ ೧೧೨.

೪೩ ಈ ಶಬ್ದ ಕೈಬರೆಹದ ಪ್ರತಿಗಳಲ್ಲಿ 'ಪೆಯ' ಎಂದು ದೊರೆಯುತ್ತಿದೆ. ಕನ್ನಡ ನಿಘಂಟುಗಳಲ್ಲಿ ಈ ಶಬ್ದ ನಮಗೆ ದೊರೆಯಲಿಲ್ಲ. ತೆಲುಗಿನಲ್ಲಿ ಇದು 'ಪೆಯ್ಯ' ಎಂದು ದೊರಕುತ್ತಿದೆ. ಆ ರೂಪವನ್ನೇ ಇಲ್ಲಿ ಇಟ್ಟುಕೊಂಡಿದ್ದೇವೆ.

೪೪ ಶ್ರೀ ಹಳಕಟ್ಟಿಯವರ ''ಬಸವೇಶ್ವರನ ವಚನಗಳು'' (೧೯೩೪) ಪುಟ ೨೩೮; ''ಹೊಸ ಪದ್ಧತಿಯ ಬಸವೇಶ್ವರನ ವಚನಗಳು'' (೧೯೪೨) ಪುಟ: ೧೧೩.

೪೫ ಸೌಂದರನಂಬಿಯು ತನ್ನ ಪ್ರಿಯೆಯ ಸ್ತನದಲ್ಲಿಯೆ ಶಿವನನ್ನು ಆವ್ಹಾನಿಸಲು ಶಿವನು ಅಲ್ಲಿಯೆ 'ಓ' ಎಂದನೆಂಬುದು ಸುಪ್ರಸಿದ್ಧ ಕಥೆಯಾಗಿದೆ. ಕನ್ನಡ ಸಾಹಿತ್ಯದಲ್ಲಿ ಅನೇಕ ಕಡೆಗಳಲ್ಲಿ ಇದರ ಉಲ್ಲೇಖವಿದೆ. ಬಸವಣ್ಣನವರ ಇನ್ನೊಂದು (೬೮೧) ವಚನದಲ್ಲಿಯೂ ಇದರ ಸ್ಪಷ್ಟವಾದ ಉಲ್ಲೇಖವಿದೆ.

೪೬ ''ಬಸವೇಶ್ವರನ ವಚನಗಳು" (೧೯೩೪) ಪುಟ ೮೪; ಹೊಸಪದ್ಧತಿಯ ಬಸವೇಶ್ವರನ ವಚನಗಳು (೧೯೪೨) ಪುಟ ೮೦; (ಇದರಲ್ಲಿ ಕೊನೆಯ ಸಾಲು 'ನಮ್ಮ ಕೂಡಲ ಸಂಗಮದೇವರ ಮರೆಯಲಹುದೆ?' ಎಂಬ ಪಾಠಾಂತರವಿದೆ.

೪೭ ಹರಿ ಬ್ರಹ್ಮಾದಿಗಳೂ ಭವದಲ್ಲಿ ಬರುವವರಾದುದರಿಂದ ಅವರು ಮೋಕ್ಷ ಕೊಡಲು ಶಕ್ತರಲ್ಲವೆಂದೆ ವೀರಶೈವರ ನಂಬುಗೆ. ರಾಜಶೇಖರವಿಳಾಸದ ಕೆಳಗಣ ಪದ್ಯವು (೮. ೩. ಪ. ೪೨) ಈ ಅಭಿಪ್ರಾಯವನ್ನು ಸಮರ್ಥಿಸುತ್ತಿದೆ:

ಭವದೊಳ್ ಬರ್ಪಮರರ್ಕಳಂ ಭವವಿಮುಕ್ತ್ಯರ್ಥಂ ಶರಣ್ಬೊಕ್ಕೊಡೇ
ನವರೇನೀವರೆ ಮುಕ್ತಿಯಂ ಭವಹರಂ ನೀನಲ್ಲದಿಷ್ಟಾರ್ಥಮಂ
ತವೆ ಮಾಡಲ್ ಸುರಪಾದಪಂ ನೆರೆಗುಮೀ ಬರ್ಬೂರವೃಕ್ಷಂಗಳೀ
ವುವೆ ಕೇಳಂತಿರೆ ನೀನೆ ಮೋಕ್ಷವರದಂ ಶ್ರೀಶೈಲಜಾವಲ್ಲಭಾ

೪೮ ಸ್ಥಳಕಟ್ಟುಗಳ ಮಾತು ಬಿಟ್ಟರೂ, ಕೆಲಕೆಲವು ಸಂದರ್ಭಗಳಲ್ಲಿ ಒಂದು ವಚನದ ಸರಿಯಾದ ಅರ್ಥಕ್ಕೆ ಅದರ ಹಿಂದಿನ ನೆರವು ಆವಶ್ಯಕವೆನಿಸುತ್ತಿದೆ ಈಗಿನ ಕ್ರಮದ ಮೇರೆಗೆ. ಆದರೆ ಶ್ರೀ ಹಳಕಟ್ಟಿಯವರ (೧೯೪೨ರ) "ಹೊಸ ಪದ್ಧತಿಯ ವಚನಗಳ"ಲ್ಲಿ ಈ ಅನುಪೂರ್ವಿಯು ತಪ್ಪಿದೆ. ಉದಾ: ಬಸವಣ್ಣನವರ ೯೩೧ನೆಯ "ಆ ಭಸ್ಮತಾಗಿ ಬ್ರಹ್ಮ ತನ್ನ ಕಪಾಲವಿಡಿದನು" ಇತ್ಯಾದಿಯಾದ ವಚನ ತಿಳಿಯಬೇಕಾದರೆ ಅದರ ಹಿಂದಿನ (೯೩೦) ವಚನವಾದ "ಒಲೆಯಡಿಯಸುರುಹಿದೊಡೆ" ಎಂಬುದರ ನೆರವು ಬೇಕಾಗುತ್ತಿದೆ. ಆದರೆ "ಹೊಸ ಪದ್ಧತಿಯ ವಚನಗಳಲ್ಲಿ" ಇವು ಅನುಕ್ರಮವಾಗಿ ೮೨೧ ಮತ್ತು ೭೯೭ ಆಗಿವೆ; ಹೀಗೆಯೆ ಪರಸ್ಪರ ಸಂಬಂಧವಿದ್ದ ೯೦೫ ಮತ್ತು ೯೦೬ ವಚನಗಳೂ "ಹೊಸ ಪದ್ಧತಿಯ ವಚನಗಳಲ್ಲಿ ಕ್ರಮತಪ್ಪಿ ೭೬೧ ಮತ್ತು ೬೭೫ ಆಗಿವೆ. ಇದರಿಂದ ಸರಿಯಾದ ಅರ್ಥಕ್ಕೆ ತೊಂದರೆಯಾಗುವುದೆಂಬುದನ್ನು ಬೇರೆ ಸೂಚಿಸುವ ಕಾರಣವಿಲ್ಲ.

೪೯ ಶಿವಾನುಭವ, ಅಗಸ್ಟ ೧೯೩೧.

೫೦ ಸ್ಥಳ ೯, ಸಾಲು ೧೯೫—೨೦೮ (ಶ್ರೀ ಟಿ. ಎಸ್. ವೆಂಕಣ್ಣಯ್ಯನವರ ಸಂಸ್ಕರಣ ಪುಟಗಳು ೬೪—೬೫)

೫೧ ನಟೇಶ ಮೂರ್ತಿಯಿಂದ ತೋರ್ಪಡುವ ಭಾವಗಳನ್ನು ಕುರಿತು:— "The essential signficance of Shiva's Dance is threefold: First, it is the image of Rhythmic Play as the source of all Movement within the Cosmos, which is Represented by the Arch: Secondly, the purpose of his Dance is to Release the countless souls of men from the snare of Illusion: Thirdly, the Place of the dance Chidambaram the Centre of the Universe is within the Heart"-- Anand K. Coomaraswami: The Dance of Shiva: P. 93,-- ಹೇಳಿದುದು ಪರಮಾತ್ಮನ ಬಗೆಗೆ ವೀರಶೈವರಿಗಿರುವ ಭವ್ಯಕಲ್ಪನೆಗೆ ಅನುಕೂಲವೆ ಆಗಿದೆ.

೫೨ ವಚನ ೫೪೦

೫೩ ವಚನ ೩

—



ಕೂಡಲ ಸಂಗಮದ ಮಂಟಪ

|| ಶ್ರೀ ||

# ಷಟ್‌ಸ್ಥಳದ ವಚನಗಳು

---

## ೧. ಭಕ್ತಿಸ್ಥಳ

### (೧) ಪಿಂಡಸ್ಥಳ

ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು;
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು;
ನನೆಯೊಳಗಣ ಪರಿಮಳದಂತಿದ್ದಿತ್ತು;
ಕೂಡಲ ಸಂಗಮದೇವಾ, ಕನ್ಯೆಯ ಸ್ನೇಹದಂತಿದ್ದಿತ್ತು. ||೧

### (೨) ಪಿಂಡಜ್ಞಾನಸ್ಥಳ

೧

ಕಾಳಿಯ ಕಣ್ ಕಾಣದಿಂದ ಮುನ್ನ, ತ್ರಿಪುರಸಂಹಾರದಿಂದ ಮುನ್ನ,
ಹರಿವಿರಂಚಿಗಳಿಂದ ಮುನ್ನ, ಉಮೆಯ ಕಲ್ಯಾಣದಿಂದ ಮುನ್ನ,
ಮುನ್ನ, ಮುನ್ನ, ಮುನ್ನ—
ಅಂದಿಂಗೆಳೆಯ ನೀನು: ಹಳೆಯ ನಾನು,
ಮಹಾದಾನಿ ಕೂಡಲ ಸಂಗಮದೇವಾ. |೨ ||

೨

ಅಯ್ಯಾ, ನೀನು ನಿರಾಕಾರವಾಗಿರ್ದಲ್ಲಿ
ನಾನು ಜ್ಞಾನವೆಂಬ ವಾಹನವಾಗಿರ್ದೆ, ಕಾಣಾ.
ಅಯ್ಯಾ, ನೀನು ನಾಟ್ಯಕ್ಕೆ ನಿಂದಲ್ಲಿ
ನಾನು ಚೈತನ್ಯವೆಂಬ ವಾಹನವಾಗಿರ್ದೆ, ಕಾಣಾ.
ಅಯ್ಯಾ, ನೀನು ಆಕಾರವಾಗಿರ್ದಲ್ಲಿ
ನಾನು ವೃಷಭನೆಂಬ ವಾಹನವಾಗಿರ್ದೆ, ಕಾಣಾ.
ಅಯ್ಯಾ, ನೀನೆನ್ನ ಭವವ ಕೊಂದಹೆನೆಂದು
ಜಂಗಮಲಾಂಛನನಾಗಿ ಬಂದಲ್ಲಿ,
ನಾನು ಭಕ್ತನೆಂಬ ವಾಹನವಾಗಿರ್ದೆ, ಕಾಣಾ,
ಕೂಡಲ ಸಂಗಮದೇವಾ. || ೩ ||

೩

ಅಯ್ಯಾ, ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ
ಬಾರದಿರ್ದೊಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ!
ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನಯ್ಯಾ.
ಪ್ರಥಮಭವಾಂತರದಲ್ಲಿ ಶಿಲಾದನೆಂಬ
ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ನಿಮ್ಮ ಭೃತ್ಯನ ಮಾಡಿಯೆನ್ನ ನಿರಿಸಿಕೊಂಡಿರ್ದಿರಯ್ಯಾ.
ಎರಡನೆಯ ಭವಾಂತರದಲ್ಲಿ ಸ್ಕಂದನೆಂಬ
ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ನಿಮ್ಮ ಕಾರುಣ್ಯವ ಮಾಡಿರಿಸಿಕೊಂಡಿರ್ದಿರಯ್ಯಾ.
ಮೂಱನೆಯ ಭವಾಂತರದಲ್ಲಿ ನೀಲಲೋಹಿತನೆಂಬ
ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ನಿಮ್ಮ ಲೀಲಾವಿನೋದದಿಂದಿರಿಸಿಕೊಂಡಿರ್ದಿರಯ್ಯಾ
ನಾಲ್ಕನೆಯ ಭವಾಂತರದಲ್ಲಿ ಮನೋಹರನೆಂಬ
ಗಣೇಶ್ವಶನ ಮಾಡಿ ಹೆಸರಿಟ್ಟು ಕರೆದು
ನಿಮ್ಮ ಮನಃಪ್ರೇರಕನಾಗಲೆಂದಿರಿಸಿಕೊಂಡಿರ್ದಿರಯ್ಯಾ.

ಅಯ್ದನೆಯ ಭವಾಂತರದಲ್ಲಿ ಕಾಲಲೋಚನನೆಂಬ
ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ಸರ್ವಕಾಲ ಸಂಹಾರವ ಮಾಡಿಸುತ್ತಿರ್ದಿರಯ್ಯಾ.
ಆಱನೆಯ ಭವಾಂತರದಲ್ಲಿ ವೃಷಭನೆಂಬ
ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ನಿಮಗೇಱಲು ವಾಹನನಾಗಲೆಂದಿರಿಸಿಕೊಂಡಿರ್ದಿರಯ್ಯಾ.
ಏಳನೆಯ ಭವಾಂತರದಲ್ಲಿ ಬಸವನೆಂಬ
ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು
ನಿಮ್ಮೊಕ್ಕುದ ಮಿಕ್ಕುದಕ್ಕೆ
ಯೋಗ್ಯನಾಗಲೆಂದಿರಿಸಿಕೊಂಡಿರ್ದಿರಯ್ಯಾ.
ಇದು ಕಾರಣ, ಕೂಡಲ ಸಂಗಮದೇವಾ,
ನೀವು ಬರಿಸಿದ ಭವಾಂತರದಲ್ಲಿ ನಾನು ಬರುತಿರ್ದೆನಯ್ಯಾ. || ೪ ||

೫

ಅಯ್ಯಾ ನಿಮ್ಮ ಶರಣನ ಮರ್ತ್ಯಕ್ಕೆ ತಂದೆಯಾಗಿ
ನೆನೆನೆನೆದು ಸುಖಿಯಾಗಿಯಾನು ಬದುಕಿದೆನಯ್ಯಾ.
ಅದೇನು ಕಾರಣ ತಂದೆಯೆಂದಱಿದೆನಯ್ಯಾ:
ಎನ್ನ ಕಾರಣ ತಂದೆಯೆಂದಱಿದೆನಯ್ಯಾ.
ಅಱಿದಱಿದು ನಿಮ್ಮ ಶರಣನು ಆಚರಿಸುವಾಚರಣೆಯ ಕಂಡು
ಕಣ್ದೆಱೆದೆನಯ್ಯಾ, ಕೂಡಲ ಸಂಗಮದೇವಾ. || ೫ ||

೬

‘ಕರಿ ಘನ: ಅಂಕುಶ ಕಿಱಿದೆ’ನ್ನ ಬಹುದೆ? ಬಾರದಯ್ಯಾ.
‘ಗಿರಿ ಘನ: ವಜ್ರ ಕಿಱಿದೆ’ನ್ನ ಬಹುದೆ? ಬಾರದಯ್ಯಾ.
‘ತಮಂಧ ಘನ: ಜ್ಯೋತಿ ಕಿಱಿದೆ’ನ್ನ ಬಹುದೆ? ಬಾರದಯ್ಯಾ.
‘ಮಱಹು ಘನ: ನಿಮ್ಮ ನೆನೆವ ಮನ ಕಿಱಿದೆ’ನ್ನ ಬಹುದೆ?
ಬಾರದಯ್ಯಾ, ಕೂಡಲ ಸಂಗಮದೇವಾ. || ೬ ||

## (೩) ಸಂಸಾರಹೇಯಸ್ಥಳ

೧

ಭವಬಂಧನ ಭವಪಾಶವಾದ ಕಾರಣವೇನಯ್ಯಾ?
ಹಿಂದಣ ಜನ್ಮಸಲ್ಲಿ ಲಿಂಗವ ಮಱೆದೆನಾಗಿ;
ಹಿಂದಣ ಸಿರಿಯಲ್ಲಿ ಜಂಗಮವ ಮಱೆದೆನಾಗಿ.
ಅಱಿದೊಡೀ ಸಂಸಾರವ ಹೊದ್ದಲೀವನೆ
ಕೂಡಲ ಸಂಗಮದೇವ? ॥ ೭ ॥

೨

ಸಂಸಾರಸಾಗರದ ತೆರೆ ಕೊಬ್ಬಿ
ಮುಖದ ಮೇಲೆ ಅಲೆಯುತ್ತಿದ್ದುದೇ, ನೋಡಾ!
ಸಂಸಾರಸಾಗರ ಉರದುದ್ದವೆ? ಹೇಳಾ!
ಸಂಸಾರಸಾಗರ ಕೊರಲುದ್ದವೆ? ಹೇಳಾ!
ಸಂಸಾರಸಾಗರ ಸಿರದುದ್ದವಾದಬಳಿಕ ಏನ ಹೇಳುವೆನಯ್ಯಾ?
ಅಯ್ಯಾ, ಅಯ್ಯಾ, ಎನ್ನ ಹುಯ್ಯಲ ಕೇಳಯ್ಯಾ,
ಕೂಡಲ ಸಂಗಮದೇವಾ, ನಾನೇವೆನೇವೆನಯ್ಯಾ? ॥ ೮ ॥

೩

ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ;
ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ!
ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು;
ಇನ್ನೆಂದಿಗೆ ಮೋಕ್ಷವಹುದೊ, ಕೂಡಲ ಸಂಗಮದೇವಾ? ॥ ೯ ॥

೪

ಇಲಿ ಗಡಹನೊಡ್ಡಿದಲ್ಲಿರ್ಪಂತೆ ಎನ್ನ ಸಂಸಾರ—
ತನು ಕೆಡುವನ್ನಕ್ಕ ಮಾಣದು;
ಹೆಱರ ಬಾಧಿಸುವುದು ತನು ಕೆಡುವನ್ನಕ್ಕ ಮಾಣದು;
ಹೆಱರ ಛಿದ್ರಿಸುವುದು ತನು ಕೆಡುವನ್ನಕ್ಕ ಮಾಣದು.
ಅಕಟಕಟಾ! ಸಂಸಾರಕ್ಕಾನಸತ್ತೆ,
ಕೂಡಲ ಸಂಗಮದೇವಾ. ॥ ೧೦ ॥

೫

ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆನಗಾಯಿತ್ತಯ್ಯಾ !
ಅಕಟಕಟಾ ! ಸಂಸಾರ ವೃಥಾ ಹೋಯಿತ್ತಲ್ಲಾ !
ಕರ್ತುವೇ, ಕೂಡಲ ಸಂಗಮದೇವಾ,
ಇವ ತಪ್ಪಿಸಿಯೆನ್ನುವ ರಕ್ಷಿಸಯ್ಯಾ. ॥ ೧೧ ॥

೬

ಶೂಲದ ಮೇಲಣ ವಿಭೋಗವೇನಾದೊಡೇನೊ ?
ನಾನಾವರ್ಣದ ಸಂಸಾರ ಹಾವ ಹಾವಡಿಗನ ಸ್ನೇಹದಂತೆ !
ತನ್ನಾತ್ಮ ತನಗೆ ಹಗೆಯಾದ ಬಳಿಕ
ಬಿನ್ನಾಣವುಂಟೆ, ಮಹಾದಾನಿ ಕೂಡಲ ಸಂಗಮದೇವಾ ? ॥೧೨॥

೭

ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ;
ಎನ್ನುವನು ಕಾಯಯ್ಯಾ, ಕಾಯಯ್ಯಾ !
ಹುರುಳಿಲ್ಲ ! ಹುರುಳಿಲ್ಲ !!
ಕೂಡಲ ಸಂಗಮದೇವಾ, ಶಿವಧೋ ! ಶಿವಧೋ !! ॥ ೧೩ ॥

೮

ನಾನೊಂದ ನೆನೆದೊಡೆ ತಾನೊಂದ ನೆನೆವುದು;
ನಾನಿತ್ತಲೆಳೆದೊಡೆ ತಾನತ್ತಲೆಳೆವುದು;
ತಾ ಬೇರೆಯೆನ್ನನಳಲಿಸಿ ಕಾಡಿತ್ತು;
ತಾ ಬೇರೆಯೆನ್ನ ಬಳಲಿಸಿ ಕಾಡಿತ್ತು;
ಕೂಡಲ ಸಂಗನ ಕೂಡಿಹೆನೆಂದೊಡೆ
ತಾನೆನ್ನ ಮುಂದುಗೆಡಿಸಿತ್ತು ಮಾಯೆ ! ॥ ೧೪

೯

ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ;
ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ;
ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ.

ಇದಾವಾವ ಪರಿಯಲ್ಲಿ ಕಾಡಿತ್ತು ಮಾಯೆ !
ಈ ಮಾಯೆಯು ಕಳಿವೊಡೆಯೆನ್ನಳವಲ್ಲ;
ನೀವೇ ಬಲ್ಲಿರಿ, ಕೂಡಲ ಸಂಗಮದೇವಾ. || ೧೫ ||

೧೦

ಕೊಡೆವಿಡಿಯೆ ಕುದುರೆಯ ದೃಢವುಳ್ಳ ರಾವುತನೇಱಿ—
ಕೊಡೆ ಕೋಟಿ ! ಶೂರರು ಹನ್ನಿಬ್ಬರಯ್ಯಾ !
ಚಂದ್ರಕಾಂತದ ಗಿರಿಯ ಗಜ ಬಂದು ಮೂದಲಿಸೆ
ಅಱಿದು ಕೊಲುವೊಡೆ ರಿಪುಗಳ ಕಲಿತನವ ನೋಡಾ !
ಆವಿಗೆಯೊಳೊದವಿದ ಪುತ್ತಳಿಯ ರೂಹಿನಂತಾಯಿತ್ತು,
ಕೂಡಲ ಸಂಗಮದೇವಾ, ನಿಮ್ಮ ಹೆಸರಿಲ್ಲದ ಹೆಸರು! || ೧೬ ||

೧೧

'ಇಂದಿಗೆಂತು ನಾಳಿಗೆಂತು' ಎಂದು
ಬೆಂಡೊಡಲ ಹೊರೆಯ ಹೊಯಿತ್ತೆನ್ನ ಸಂಸಾರ !
ಹಿಂದೆ ನಾನಾಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲಾ ;
ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲಾ !
ಎಂದೆಂದೂ ಸದಾಶಿವನ ಕುಂದದೆ ನೆನೆಯಲೀಯದೆ
ಕೊಂದುದಯ್ಯಾ ಈ ಮಾಯೆ, ಕೂಡಲ ಸಂಗಮದೇವಾ. || ೧೭ ||

೧೨

ದಿಟ ಪುಟ ಭಕುತಿ ಸಂಪುಟ ನೆಲೆಗೊಳ್ಳದಾಗಿ
ಟೆಂಬಕನನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ;
ಟೀವಕ ಟೆಂಬಕನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ,
ಕೂಡಲ ಸಂಗಮದೇವಯ್ಯಾ,
ಹೊನ್ನ ಹೆಣ್ಣ ಮಣ್ಣ ತೋಱಿ ! || ೧೮ ||

೧೩

ಆಸತ್ತೆನಲಸಿದೆನೆಂದೊಡೆ ಮಾಣದು;
ಬೇಸತ್ತೆ ಬೆಂಬಿದ್ದೆನೆಂದೊಡೆ ಮಾಣದು;
ಏವೆನೇವೆನೆಂದೊಡೆ ಮಾಣದು
ಕಾಯದ ಕರ್ಮದ ಫಲಭೋಗವು !
ಕೂಡಲ ಸಂಗನ ಶರಣರು ಬಂದು—
'ಹೋ, ಹೋ, ಅಂಜದಿರೆ'ಂದೊಡಾನು ಬರ್ದುಂಕುವೆನು. ||೧೯||

೧೪

ಸಂಸಾರವೆಂಬ ಸರ್ಪ ಮುಟ್ಟಲು
ಪಂಚೇಂದ್ರಿಯವಿಷಯವೆಂಬ ವಿಷದಿಂದೆ
ಆನು ಮುಂದುಗೆಟ್ಟೆನಯ್ಯಾ; ಆನು ಹೊರಳಿ ಬೀಳುತ್ತಿರ್ದೆನಯ್ಯಾ.
'ಓಂ ನಮಃ ಶಿವಾಯ' ಎಂಬ ಮಂತ್ರವ ಜಪಿಸುತ್ತಿರ್ದೆನಯ್ಯಾ,
ಕೂಡಲ ಸಂಗಮದೇವಾ. || ೨೦ ||

೧೫

ಅಱಿಯದೆ ಜನನಿಯ ಜಠರದಲ್ಲಿ,
ಬಾರದ ಭವಂಗಳಲ್ಲಿ ಬರಿಸಿದೆ, ತಂದೆ !
ಹುಟ್ಟಿತ್ತೇ ತಪ್ಪಾಯಿತ್ತೆ, ಎಲೆ ಲಿಂಗವೇ ?
ಮುನ್ನ ಹುಟ್ಟಿದುದಕ್ಕೆ ಕೃಪೆ ಮಾಡು ಲಿಂಗವೇ !
ಇನ್ನು ಹುಟ್ಟಿದೆನಾದೊಡೆ,
ಕೂಡಲ ಸಂಗಮದೇವಾ, ನಿಮ್ಮಾಣೆ ! || ೨೧ ||

೧೬

ಎಂದೋ ಸಂಸಾರದ ದಂದುಗ ಹಿಂಗುವುದು ?
ಎಂದೋ ಮನದಲ್ಲಿ ಪರಿಣಾಮವಹುದೆನಗೆಂದೋ, ಎಂದೋ ?
ಕೂಡಲ ಸಂಗಮದೇವಾ,
ಇನ್ನೆಂದೋ ಪರಮಸಂತೋಷದಲ್ಲಿಹುದೆನಗೆಂದೋ ? || ೨೨ ||

೧೭

ಲೇಸ ಕಂಡು ಮನ ಬಯಸಿ ಬಯಸಿ
ಆಸೆ ಮಾಡಿದೊಡಿಲ್ಲ, ಕಂಡಯ್ಯಾ!
ತಾಳಮರಕ್ಕೆ ಕೈಯ ನೀಡಿ
ಮೇಲೆ ನೋಡಿ ಗೋಣು ನೊಂದುದಯ್ಯಾ!
ಕೂಡಲ ಸಂಗಮದೇವ, ಕೇಳಯ್ಯಾ,
ನೀನೀವ ಕಾಲಕ್ಕಲ್ಲದಿಲ್ಲ, ಕಂಡಯ್ಯಾ! || ೨೩ ||

೧೮

ಮುನ್ನ ಮಾಡಿದ ಪಾಪ ಬೆನ್ನ ಬಿಡದನ್ನಕ್ಕ
ಇನ್ನು ಬಯಿಸಿದರುಂಟೆ?
ಭಕ್ತಿಯುಳ್ಳವರ ನೋಡಿ ನೋಡಿ ಬಯಸಿದರುಂಟೇ,
ಕೂಡಲ ಸಂಗಮದೇವರಲ್ಲಿ
ಮುನ್ನ ವರವ ಹಡೆಯದನ್ನಕ್ಕ? || ೨೪ ||

೧೯

ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ;
ಚಂದ್ರ ಕುಂದೆ ಕುಂದುವುದಯ್ಯಾ.
ಚಂದ್ರಂಗೆ ರಾಹುವಡ್ಡ ಬಂದಲ್ಲಿಯಂಬುಧಿ ಬೊಬ್ಬಿಟ್ಟಿತ್ತೆ?
ಅಂಬುಧಿಯ ಮುನಿಯಾಪೋಷಣವ ಕೊಂಬಲ್ಲಿ
ಚಂದ್ರಮನಡ್ಡ ಬಂದನೆ?
ಆರಿಗಾರೂ ಇಲ್ಲಾ: ಕೆಟ್ಟವಂಗೆ ಕೆಳೆಯಿಲ್ಲಾ!
ಜಗದ ನಂಟ ನೀನೇ, ಅಯ್ಯಾ, ಕೂಡಲ ಸಂಗಮದೇವಾ. || ೨೫ ||

೨೦

ಒಲೆ ಹತ್ತಿಯುರಿದೊಡೆ ನಿಲಬಹುದಲ್ಲದೆ,
ಧರೆ ಹತ್ತಿಯುರಿದೊಡೆ ನಿಲಬಾರದು.
ಏರಿ ನೀರುಣ್ಬೊಡೆ, ಬೇಲಿ ಕೆಯ್ಯ ಮೇವೊಡೆ,
ನಾರಿ ತನ್ನ ಮನೆಯಲ್ಲಿ ಕಳುವೊಡೆ,
ತಾಯ ಮೊಲೆವಾಲು ನಂಜಾಗಿ ಕೊಲುವೊಡೆ
ಇನ್ನಾರಿಗೆ ದೂರುವೆ, ಕೂಡಲ ಸಂಗಮದೇವಾ? || ೨೬ ||

೨೧

ಎನ್ನ ಗುಣಾವಗುಣವ ಸಂಪಾದಿಸುವೆ, ಅಯ್ಯಾ !
ಪ್ರತಿಯೆ, ಅಪ್ರತಿಮಸುಹಿಮಾ, ನಿಮಗಾನು ಪ್ರತಿಯೇ ?
ಕೂಡಲ ಸಂಗಮದೇವಾ, ನೀವು ಮಾಡಲಾನಾದೆನು ! || ೨೭ ||

೨೨

ಬೆದಕದಿರು, ಬೆದಕದಿರು; ಬೆದಕಿದೊಡೆ ಹುರುಳಿಲ್ಲ !
ಚಿತ್ತರಟ್ಟೆಯ ಕಾಯಲ್ಲಿ ಮತ್ತೇನನರಸುವಿರಯ್ಯಾ ?
ನಿಮ್ಮ ಮತ್ತವಿಕೆಯನೇ ಪೂರೈಸುವುದು,
ಕೂಡಲ ಸಂಗಮದೇವಾ. || ೨೮ ||

೨೩

ಎನ್ನ ಚಿತ್ತವು ಅತ್ತಿಯ ಹಣ್ಣು, ನೋಡಯ್ಯಾ;
ವಿಚಾರಿಸಿದೊಡೇನೂ ಹುರುಳಿಲ್ಲವಯ್ಯಾ !
ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಹ ಮಾಡಿ
ನೀವಿರಿಸಿದಿರಿ, ಕೂಡಲ ಸಂಗಮದೇವಾ. || ೨೯ ||

೨೪

ಎನ್ನ ನಡೆಯೊಂದು ಪರಿ: ಎನ್ನ ನುಡಿಯೊಂದು ಪರಿ:
ಎನ್ನೊಳಗೇನೂ ಶುದ್ಧವಿಲ್ಲ, ನೋಡಯ್ಯಾ.
ನುಡಿಗೆ ತಕ್ಕ ನಡೆಯ ಕಂಡೊಡೆ
ಕೂಡಲ ಸಂಗಮದೇವನೊಳಗಿರ್ಪನಯ್ಯಾ. || ೩೦ ||

೨೫

ಮುಂಗೈಯ ಕಂಕಣಕೆ ಕನ್ನಡಿಯ ತೋರುವಂತೆ--
ಎನ್ನ ಮನವು ನಿಧಾನವನೊಲ್ಲದೆ ಜಲಗ ಮಚ್ಚಿತ್ತು, ನೋಡಾ!
ನಾಯಿಗೆ ನಾರಿವಾಣವಕ್ಕುವುದೆ, ಕೂಡಲ ಸಂಗಮದೇವಾ ? || ೩೧ ||

೨೬

ಕೊಂಬಿನ ಮೇಲಣ ಮರ್ಕಟನಂತೆ
ನಿಂದಲ್ಲಿ ನಿಲ್ಲಲೀಯದೆನ್ನ ಮನವು;
ಹೊಂದಿದಲ್ಲಿ ಹೊಂದಲೀಯದೆನ್ನ ಮನವು !
ಕೂಡಲ ಸಂಗಮದೇವಾ, ನಿಮ್ಮ ಚರಣಕಮಲದಲ್ಲಿ
ಭ್ರಮರನಾಗಿರಿಸು, ನಿಮ್ಮ ಧರ್ಮ ! || ೩೨

೨೭

ಮರನನೇಱಿದ ಮರ್ಕಟನಂತೆ
   ಹಲವು ಕೊಂಬಿಂಗೆ ಹಾಯುತಲಿದೆ—
   ಬೆಂದ ಮನವ ನಾನೆಂತು ನಂಬುವೆನಯ್ಯಾ ?
   ಎಂತು ನಚ್ಚುವೆನಯ್ಯಾ ?
ಎನ್ನ ಕೂಡಲ ಸಂಗಮದೇವನಲ್ಲಿಗೆ ಹೋಗಲೀಯದಯ್ಯಾ ! ‖ ೩೩ ‖

೨೮

ಅಂದಣವನೇಱಿದ ಸೊಣಗನಂತೆ
   ಕಂಡೊಡೆ ಬಿಡದು ಮುನ್ನಿನ ಸ್ವಭಾವವನು—
   ಸುಡು ! ಸುಡು !! ಮನವಿದು ವಿಷಯಕ್ಕೆ ಹರಿವುದು;
   ಮೃಡ, ನಿಮ್ಮನನುದಿನ ನೆನೆಯಲೀಯದು.
ಎನ್ನೊಡೆಯ ಕೂಡಲ ಸಂಗಮದೇವಾ,
   ನಿಮ್ಮ ಚರಣವ ನೆನೆವಂತೆ ಕರುಣಿಸು,
   ಸೆಱಗೊಡ್ಡಿ ಬೇಡುವೆ, ನಿಮ್ಮ ಧರ್ಮ ! ‖ ೩೪ ‖

೨೯

ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆನ್ನ ಬಾಳುವೆ !
ಸಂಸಾರಸಂಗವ ಬಿಡದು ನೋಡೆನ್ನ ಮನವು.
ಈ ನಾಯಿತನವ ಮಾಣಿಸು,
   ಕೂಡಲ ಸಂಗಮದೇವಾ, ನಿಮ್ಮ ಧರ್ಮ ! ‖ ೩೫ ‖

೩೦

ಒಂದು ಮೊಲಕ್ಕೆ ನಾಯನೊಂಬತ್ತ ಬಿಟ್ಟಂತೆ
   'ಎನ್ನ ಬಿಡು, ತನ್ನ ಬಿಡೆ'ಂಬುದು ಕಾಯವಿಕಾರ;
   'ಎನ್ನ ಬಿಡು, ತನ್ನ ಬಿಡೆ'ಂಬುದು ಮನೋವಿಕಾರ !
ಕರಣೇಂದ್ರಿಯಂಗಳೆಂಬ ಸೊಣಗ ಮುಟ್ಟದ ಮುನ್ನ
   ಮನ ನಿಮ್ಮನೆಯ್ದುವುದೆ, ಕೂಡಲ ಸಂಗಮದೇವಾ ? ‖ ೩೬ ‖

೩೧

ದಂದುಗ ಬಿಡದು ಮನದ ಸಂದೇಹ ಹಿಂಗದಾಗಿ:
 ಮುಂದೆ ಲಿಂಗವ ಕಂಡಹೆನೆಂಬುದು ಹುಸಿ, ನೋಡಾ!
ಬೆಂದ **ಕರ**ಣಾದಿಗಳು ಒಂದೇ ಪಥವನಱಿಯವು:
 ಎಂತು ಶಿವಪಥವೆನಗೆ ಸಾಧ್ಯವಪ್ಪುದಯ್ಯಾ?
ಎನ್ನ ತಂದೆ, ಕೂಡಲ ಸಂಗಮದೇವಾ,
 ನಿನ್ನ ಶರಣರ ಬಳಿವಿಡಿದರೆ
 ಎನ್ನ ದಂದುಗ ಹಿಂಗುವುದು. ‖ ೩೭ ‖

೩೨

ತನ್ನ ವಿಚಾರಿಸಲೊಲ್ಲದು: ಇದಿರ ವಿಚಾರಿಸಹೋಹುದೀ ಮನವು!
ಏನು ಮಾಡುವೆನೀ ಮನವನು? ಎಂತು ಮಾಡುವೆನೀ ಮನವನು—
 ಕೂಡಲ ಸಂಗಮದೇವನ ಶರಣರ
 ನಚ್ಚದ, ಮಚ್ಚದ, ಬೆಂದ ಮನವನು? ‖ ೩೮ ‖

೩೩

ತನ್ನಿಚ್ಛೆಯ ನುಡಿದರೆ ನಚ್ಚುವುದೀ ಮನವು:
 ಇದಿರಿಚ್ಛೆಯ ನುಡಿದರೆ ಮಚ್ಚದೀ ಮನವು.
ಕೂಡಲ ಸಂಗನ ಶರಣರ
 ನಚ್ಚದ ಮನವ ಕಿಚ್ಚಿನೊಳಗಿಕ್ಕುವೆ! ‖ ೩೯ ‖

೩೪

ಸುಡಲೀ ಮನವೆನ್ನನುಡುಹನ ಮಾಡಿತ್ತು!
 ನಡೆವಲ್ಲಿ ನುಡಿವಲ್ಲಿಯಧಿಕನೆಂದೆನಿಸಿತ್ತು.
ಬೆಡಗಿನ ಕೀಲು ಕಳೆದು ಕೆಡೆದ ಬಳಿಕ
 ಕಡುಗೂರ್ಪ ಮಡದಿ ತಾ ಮುಟ್ಟಲಮ್ಮಳು;
 ಒಡಲನುರಿ ಕೊಂಬುದು; ಒಡವೆಯನರಸು ಕೊಂಬ;
 ಕಡುಗೂರ್ಪ ಮಡದಿಯ ಮತ್ತೊಬ್ಬ ಚೆನ್ನಿಗ ಕೊಂಬ!
ಮುನ್ನ ಮಾಡಿದುದು ತನ್ನ ಬೆನ್ನ ಬಿಡದನ್ನಕ್ಕ
 ಇನ್ನು ಮಾಡಿದೊಡೊಳವೆ, ಕೂಡಲ ಸಂಗಮದೇವಾ? ‖ ೪೦ ‖

**೩೫**

ವಚನದ ಹುಸಿ, ನುಸುಳೆಂತು ಮಾಣ್ಬುದೆನ್ನಾ ?
ಮನದ ಮರ್ಕಟತನವೆಂತು ಮಾಣ್ಬುದೆನ್ನಾ ?
ಹೃದಯದ ಕಲ್ಮಷವೆಂತು ಮಾಣ್ಬುದೆನ್ನಾ ?
ಕಾಯವಿಕಾರಕ್ಕೆ ತಱಿಸಲುವ್ರೋದೆನು:
ಎನಗಿದು ವಿಧಿಯೆ, ಕೂಡಲ ಸಂಗಮದೇವಾ ? || ೪೧ ||

**೩೬**

ಅಂಗದ ನೋಟವು ಲಿಂಗದ ಗಾತ್ರವು:
ಹಿಂಗದು ಮನದಲ್ಲಿ ನಾನಾವಿಕಾರವು.
ಬಂದಹನೆಂದಱಿಯಲಿಕ್ಕಿಲ್ಲವಾಗಿ ಸಂದೇಹ ಬಿಡದು;
ಮುಂದುಗಾಣದು ಲೋಕ !
ಬೆಂದ ಮಾಯಕ್ಕಂಜಿ ನಿಮ್ಮ ಮಱೆವೊಕ್ಕೆ,
ಕೂಡಲ ಸಂಗಮದೇವಾ. || ೪೨ ||

**೩೭**

ವಿಕಳನಾದೆನು ಪಂಚೇಂದ್ರಿಯಧಾತುವಿನಿಂದ;
ಮತಿಗೆಟ್ಟೆನು ಮನದ ವಿಕಾರದಿಂದ;
ಧೃತಿಗೆಟ್ಟೆನು ಕಾಯವಿಕಾರದಿಂದ.
ಶರಣುವೊಕ್ಕೆನು, ಕೂಡಲ ಸಂಗಮದೇವಯ್ಯಾ. || ೪೩ ||

**೩೮**

ಮುನಿದೆಯಾದೊಡೆ ಒಮ್ಮೆ ಜಱೆದೊಡೆ ಸಾಲದೆ ?
ಅಕಟಕಟಾ ! ಮದನಂಗೆ ಮಾಱುಗೊಡುವರೆ ?
ಹಗೆಗೆ ಮಾಱುಗೊಟ್ಟು ನಿನ್ನವರನೊಪ್ಪಿಸುವರೆ,
ಕೂಡಲ ಸಂಗಮದೇವಾ ? || ೪೪ ||

**೩೯**

ಆನೊಬ್ಬನು: ಸುಡುವರೈವರು !
ಮೇಲೆ ಕಿಚ್ಚು ಘನ: ನಿಲಲು ಬಾರದು !
ಕಾಡ ಬಸವನ ಹುಲಿ ಕೊಂಡೊಯ್ವರೆ
ಆರಯ್ಯಲಾಗದೆ, ಕೂಡಲ ಸಂಗಮದೇವಾ ? || ೪೫ ||

೪೦

ಆಸೆಯಾಮಿಸ, ತಾಮಸ, ಹುಸಿ, ವಿಷಯ,
ಕುಟಿಲ, ಕುಹಕ, ಕ್ರೋಧ, ಕ್ಷುದ್ರ, ಮಿಥ್ಯೆ—
ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ.
ಅದೇಕೆಂದೊಡೆ ನಿಮ್ಮತ್ತಲೆನ್ನ ಬರಲೀಯವು.
ಇದು ಕಾರಣ, ಇವೆಲ್ಲವ ಕಳೆದು
ಎನ್ನ ಪಂಚಯ್ಯವರ ಭಕ್ತರ ಮಾಡು,
ಕೂಡಲ ಸಂಗಮದೇವಾ. || ೪೬ ||

೪೧

ಎಂತೊ ಶಿವಭಕ್ತಿಯ ನಾನುಪಮಿಸುವೆನಯ್ಯಾ ?
ಎಂತೋ ಶಿವಾಚಾರವೆನಗೆ ವೇದ್ಯವಪ್ಪುದಯ್ಯಾ ?
ಕಾಮ, ಕ್ರೋಧ, ಲೋಭ, ಮೋಹದಿಂದೆ ಕಟ್ಟುವಡೆದೆನು;
ಹಸಿವು, ತೃಷೆ, ವ್ಯಸನದಿಂದೆ ಕುದಿಯುತ್ತಿದ್ದೇನೆ;
ಪಂಚೇಂದ್ರಿಯ, ಸಪ್ತಧಾತು
ಹಂಚುಹರಿ ಮಾಡಿ ಕಾಡಿಹುವಯ್ಯಾ !
ಅಯ್ಯಾ, ಅಯ್ಯಾ, ಎನ್ನ ಹುಯ್ಯಲ ಕೇಳಯ್ಯಾ—
ಕೂಡಲ ಸಂಗಮದೇವಾ, ನಾನೇವೆನೇವೆನಯ್ಯಾ ? || ೪೭ ||

೪೨

ಕಾಯವಿಕಾರ ಕಾಡಿಹುದಯ್ಯಾ;
ಮನೋವಿಕಾರ ಕೂಡಿಹುದಯ್ಯಾ;
ಇಂದ್ರಿಯವಿಕಾರ ಸುಳಿವುದಯ್ಯಾ !
ಸುಳುಹಿನೊಳಗೆ ಸುಳಿಯುತ್ತಲಿದ್ದೇನೆ: ಸಿಲುಕಿಸದಿರಯ್ಯಾ;
ಅನ್ಯಚಿತ್ತವಿರಿಸದಿರಯ್ಯಾ: ನಿಮ್ಮ ಚಿತ್ತವಿರಿಸಯ್ಯಾ.
ಅನುಪಮಸುಖಸಾರಾಯಶರಣರಲ್ಲಿ,
ಕೂಡಲ ಸಂಗಮದೇವಯ್ಯಾ, ಇದನೆ ಬೇಡುವೆನಯ್ಯಾ. || ೪೮ ||

೪೩

ಬಂದ ಯೋನಿಯನಱಿದು ಸಲಹೆನ್ನ, ತಂದೆ—
ಬೆಂದ ಮನವೆನ್ನ ಗತಿಗೆಡಿಸಿ ಕಾಡಿತ್ತು;
ಬೆಂದ ಮನವೆನ್ನ ಮತಿಗೆಡಿಸಿ ಕಾಡಿತ್ತು !
ಎನ್ನ ತಂದೆ, ಕೂಡಲ ಸಂಗಮದೇವಾ,
ಇವ ಮಾಣಿಸು, ನಿಮ್ಮ ಧರ್ಮ ! || ೪೯ ||

೪೪

ಬೆಳೆಯ ಭೂಮಿಯೊಳೊಂದು ಪ್ರಳಯದ ಕಸ ಹುಟ್ಟಿ
ತಿಳಿಯಲೀಯದು, ಎಚ್ಚಱಲೀಯದು !
ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯಾ, ಲಿಂಗತಂದೆ;
ಸುಳಿದೆಗೆದು ಬೆಳೆವೆನು, ಕೂಡಲ ಸಂಗಮದೇವಾ. || ೫೦ ||

೪೫

ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ;
ಹಸುವೇನ ಬಲ್ಲದು ? ಹಸುರೆಂದೆಳಸುವುದು.
ವಿಷಯರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ,
ಸುಬುದ್ಧಿಯೆಂಬುದಕವನೆಱೆದು,
ನೋಡಿ ಸಲಹಯ್ಯಾ, ಕೂಡಲ ಸಂಗಮದೇವಾ. || ೫೧ ||

೪೬

ಕೆಸಱಲ್ಲಿ ಬಿದ್ದ ಪಶುವಿನಂತಾನು
ದೆಸೆದೆಸೆಗೆ ಬಾಯ ಬಿಡುತ್ತಿದ್ದೇನಯ್ಯಾ.
ಅಯ್ಯಾ ! ಆರಯ್ವವರಿಲ್ಲ—ಅಕಟಕಟಾ!—
ಪಶುವೆಂದೆನ್ನ ಕೂಡಲ ಸಂಗಮದೇವ
ಕೊಂಬ ಹಿಡಿದೆತ್ತುವನ್ನಕ್ಕ ! || ೫೨ ||

೪೭

ಬಡಪಸು ಪಂಕದಲ್ಲಿ ಬಿದ್ದೊಡೆ ಕಾಲ ಬಡಿವುದಲ್ಲದೆ
ಬೇಱೆ ಗತಿಯುಂಟೆ ?
ಶಿವ ಶಿವಾ ! ಹೋದಹೆ, ಹೋದಹೆನಯ್ಯಾ !!

ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ—
ಪಶುವಾನು: ಪಶುಪತಿ ನೀನು!
ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ,
ಒಡೆಯ ನಿಮ್ಮ ಬಯ್ಯದಂತೆ ಮಾಡು,
ಕೂಡಲ ಸಂಗಮದೇವಾ. || ೫೩ ||

೫೪

ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ
'ಅಂಬೇ, ಅಂಬೇ' ಎಂದು ಕರೆಯುತ್ತಲಿದ್ದೇನೆ;
'ಅಂಬೇ, ಅಂಬೇ' ಎಂದು ಒಱಲುತ್ತಲಿದ್ದೇನೆ—
ಕೂಡಲ ಸಂಗಮದೇವ 'ಬಾಳು ಬಾಳೆ'ಂಬನ್ನಕ್ಕ. || ೫೪ ||

೫೫

ಸಮುದ್ರದೊಳಗಣ ಸಿಂಪಿನಂತೆ ಬಾಯ ಬಿಡುತ್ತಿದ್ದೇನಯ್ಯಾ.
ನೀವಲ್ಲದೆ ಮತ್ತಾರೂ ಎನ್ನನಱಿವವರಿಲ್ಲ, ನೋಡಯ್ಯಾ.
ಕೂಡಲ ಸಂಗಮದೇವಾ,
ನೀವಲ್ಲದೊಳಕೊಂಬವರಿಲ್ಲಯ್ಯಾ. || ೫೫ ||

೫೬

'ಅಯ್ಯಾ, ಅಯ್ಯಾ' ಎಂದು ಕರೆಯುತ್ತಲಿದ್ದೇನೆ;
'ಅಯ್ಯಾ, ಅಯ್ಯಾ' ಎಂದೊಱಲುತ್ತಲಿದ್ದೇನೆ;
'ಓ' ಎನ್ನಲಾಗದೆ, ಅಯ್ಯಾ?
ಆಗಳೂ ನಿಮ್ಮುವ ಕರೆಯುತ್ತಲಿದ್ದೇನೆ:
ಮೌನವೇ, ಕೂಡಲ ಸಂಗಮದೇವಾ? || ೫೬ ||

೫೭

ನೀ ಹುಟ್ಟಿಸಿದಲ್ಲಿ ಹುಟ್ಟದೆ ನೀ ಕೊಂದಲ್ಲಿ ಸಾಯದೆ
ಎನ್ನ ವಶವೆ, ಅಯ್ಯಾ?
ನೀವಿರಿಸಿದಲ್ಲಿರದೆ ಎನ್ನ ವಶವೆ, ಅಯ್ಯಾ?
ಅಕಟಕಟಾ! 'ಎನ್ನವನೆನ್ನವನೆ'ನ್ನಯ್ಯಾ,
ಕೂಡಲ ಸಂಗಮದೇವಯ್ಯಾ. || ೫೭ ||

೫೨

ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ
ಸಲಹುತ್ತ 'ಶಿವ ಶಿವಾ' ಎಂದೋದಿಸಯ್ಯಾ.
ಭಕ್ತಿಯೆಂಬ ಪಂಜರದೊಳಗಿಕ್ಕಿ ಸಲಹು,
ಕೂಡಲ ಸಂಗಮದೇವಾ. ‖ ೫೮ ‖

೫೩

ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯಾ, ತಂದೆ;
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ, ತಂದೆ;
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ, ತಂದೆ;
ನಿಮ್ಮ ಶರಣರ ಪಾದವಲ್ಲದೆ
ಅನ್ಯವಿಷಯಕ್ಕೆಳಸದಂತೆ ಇರಿಸು, ಕೂಡಲ ಸಂಗಮದೇವಾ. ‖ ೫೯ ‖

೫೪

ಎನ್ನ ಹಾಮು-ಕ್ಷೇಮ ನಿಮ್ಮದಯ್ಯಾ;
ಎನ್ನ ಹಾನಿ-ವೃದ್ಧಿ ನಿಮ್ಮದಯ್ಯಾ;
ಎನ್ನ ಮಾನಾಪಮಾನ ನಿಮ್ಮದಯ್ಯಾ:
ಬಳ್ಳಿಗೆ ಕಾಯಿ ದಿಮ್ಮಿತ್ತೆ, ಕೂಡಲ ಸಂಗಮದೇವಾ? ‖ ೬೦ ‖

೫೫

ಸಟೆಯಿಲ್ಲದಂತೆ, ಪ್ರಪಂಚುವಿಲ್ಲದಂತೆ, ವೈಶಿಕವಿಲ್ಲದಂತೆ
ನಡೆಸಯ್ಯಾ, ಲಿಂಗತಂದೇ;
ಒಂದು ನಿಮಿಷವಾದರೆಯೂ ನಿಮ್ಮ ಶರಣರ ಸಂಗದಲ್ಲಿರಿಸಯ್ಯಾ;
ಬೇಱೆ ಮತ್ತೆ ಅನ್ಯವ ತೋಱದಿರಯ್ಯಾ,
ಹೊಲಬುಗೆಟ್ಟೆನಯ್ಯಾ, ಕೂಡಲ ಸಂಗಮದೇವಾ. ‖ ೬೧ ‖

೫೬

''ಇವನಾರವ, ಇವನಾರವ, ಇವನಾರವ?"ನೆಂದೆನಿಸದಿರಯ್ಯಾ.
''ಇವ ನಮ್ಮವ, ಇವ ನಮ್ಮವ, ಇವ ನಮ್ಮವ"ನೆಂದೆನಿಸಯ್ಯಾ.
ಕೂಡಲ ಸಂಗಮದೇವಾ, ನಿಮ್ಮ ಮನೆಯ ಮಗನೆನಿಸಯ್ಯಾ. ‖ ೬೨ ‖

೫೭

ಹುಟ್ಟಿಂದು ಲೋಕದಲ್ಲಿ ಹುಟ್ಟಿಸಿ,
ಇಳಿಯಬಿಟ್ಟೊಡೆ ನಿಮ್ಮ ನಗುವರಯ್ಯಾ.
ಶಿವಬಟ್ಟೆಯೊಳೆನ್ನನು ಇರಿಸಯ್ಯಾ, ಹರನೇ,
ಹೊಲಬುಗೆಟ್ಟೆನು, ಬಟ್ಟೆಯ ತೋಱಯ್ಯಾ !
ಹುಯ್ಯಲಿಟ್ಟೆನು:—' ಗಣಂಗಳೂ ಕೇಳಿರಯ್ಯಾ,
ಕೂಡಲ ಸಂಗಮದೇವಯ್ಯನೆನ್ನ ಕಾಡಿಹನಯ್ಯಾ !' || ೬೩ ||

೫೮

ಅಕಟಕಟಾ ! ಶಿವ, ನಿನಗಿನಿತು ಕರುಣವಿಲ್ಲಾ;
ಅಕಟಕಟಾ ! ಶಿವ, ನಿನಗಿನಿತು ಕೃಪೆಯಿಲ್ಲಾ.
ಏಕೆ ಹುಟ್ಟಿಸಿದೆ ಇಹಲೋಕದುಃಖಿಯ, ಪರಲೋಕದೂರನ ?
ಏಕೆ ಹುಟ್ಟಿಸಿದೆ ?
ಕೂಡಲ ಸಂಗಮದೇವಾ, ಕೇಳಯ್ಯಾ,
ಎನಗಾಗಿ ಮತ್ತೊಂದು ತರುಮರನಿಲ್ಲವೇ ? || ೬೪ ||

೫೯

ನರ ಕೂರಂಬಿನಲೆಚ್ಚ, ಅವಂಗೊಲಿದೆಯಯ್ಯಾ :
ಅರಳಂಬಿನಲೆಚ್ಚ ಕಾಮನನುರುಹಿದೆಯಯ್ಯಾ !
ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ
ಬೇಡನ ಕೈಲಾಸಕೊಯ್ದೆಯಯ್ಯಾ :
ಎನ್ನನೇತಕ್ಕೊಲ್ಲೆ, ಕೂಡಲ ಸಂಗಮದೇವಾ ? || ೬೫ ||

೬೦

ನೀನೊಲಿದರೆ ಕೊಱಡು ಕೊನರುವುದಯ್ಯಾ ;
ನೀನೊಲಿದರೆ ಬಱಡು ಹಯನಹುದಯ್ಯಾ;
ನೀನೊಲಿದರೆ ವಿಷವೆ ಅಮೃತವಹುದಯ್ಯಾ ;
ನೀನೊಲಿದರೆ ಸಕಲ ಪಡಿಪದಾರ್ಥ ಇದಿರಲಿರ್ಪುವು,
ಕೂಡಲ ಸಂಗಮದೇವಾ. || ೬೬ ||

೬೧

ಮೇರುಗುಣವನರಿಸುವುದೆ ಕಾಗೆಯಲ್ಲಿ?
ಪರುಷಗುಣವನರಿಸುವುದೆ ಕಬ್ಬಿನದಲ್ಲಿ?
ಸಾಧುಗುಣವನರಿಸುವುದೆ ಅವಗುಣಿಯಲ್ಲಿ?
ಚಂದನಗುಣವನರಿಸುವುದೆ ತರುಗಳಲ್ಲಿ?
ಸರ್ವಗುಣಸಂಪನ್ನ ಲಿಂಗವೆ, ನೀನೆನ್ನಲ್ಲಿ ಅವಗುಣವನರಿಸುವುದೆ,
ಕೂಡಲ ಸಂಗಮದೇವಾ? ॥ ೬೭ ॥

೬೨

ಭವಭವದಲ್ಲೆನ್ನ ಮನವು ನೀವಲ್ಲದೆ—
ಭವಭವದಲ್ಲೆನ್ನ ಮನವು ಸಿಲುಕದೆ?
ಭವರಾಟಳದೊಳು ತುಂಬದೆ? ಕೆಡಹದೆ?
ಭವರೋಗವೈದ್ಯ ನೀನು, ಭವವಿರಹಿತ ನೀನು—
ಅವಧಾರು, ಕರುಣಿಸುವುದು, ಕೂಡಲ ಸಂಗಮದೇವಾ. ॥ ೬೮ ॥

೬೩

ಆಶೆಯೆಂಬ ಪಾಶದಲ್ಲಿ ಭವಬಂಧನವಾಗಿರ್ದೆನಯ್ಯಾ;
ಸಕೃತು ನಿಮ್ಮ ನೆನೆಯಲೆನಗೆ ತೆರಹಿಲ್ಲವಯ್ಯಾ!
ಕರುಣಾಕರಾ, ಅಭಯಕರಾ, ವರದಾನೀ, ಕರುಣಿಸಯ್ಯಾ;
ಸಂಸಾರಬಂಧನವನು ಮಾಣಿಸೆನಗೆ ಕೃಪೆಮಾಡಿ.
ನಿಮ್ಮ ಶ್ರೀಪಾದಪದ್ಮದಲ್ಲಿ ಭ್ರಮರನಾಗಿರಿಸು,
ಭಕ್ತಜನಮನೋವಲ್ಲಭಾ, ಕೂಡಲ ಸಂಗಮದೇವಾ. ॥ ೬೯ ॥

## (೪) ಗುರುಕರುಣ ಸ್ಥಳ

೧

ಮಡಕೆಯ ಮಾಡುವರೆ ಮಣ್ಣೇ ಮೊದಲು;
ತೊಡಗೆಯ ಮಾಡುವರೆ ಹೊನ್ನೇ ಮೊದಲು;
ಶಿವಪಥವನರಿವರೆ ಗುರುಪಥವೇ ಮೊದಲು;
ಕೂಡಲ ಸಂಗಮದೇವರನರಿವರೆ
ಶರಣರ ಸಂಗವೇ ಮೊದಲು. ॥ ೭೦ ॥

೨

ನೋಡಿ ನೋಡಿ ಮಾಡುವ ನೇಮ ಸಲ್ಲವು! ಸಲ್ಲವು!!
ತನುವುದ್ದೇಶ, ಮನವುದ್ದೇಶವಾಗಿ ಮಾಡುವ ನೇಮ ಸಲ್ಲವು! ಸಲ್ಲವು!!
ಗುರುಪಥವ ಮೀಱಿ ಮಾಡುವ ನೇಮ ಸಲ್ಲವು! ಸಲ್ಲವು!!
ಕೂಡಲ ಸಂಗಮದೇವಯ್ಯಾ,
ಇವು ನಿಮ್ಮ ನಿಜದೊಳಗೆ ನಿಲ್ಲವು! ನಿಲ್ಲವು!! || ೨೧ ||

೩

ಗುರುವಚನವಲ್ಲದೆ ಲಿಂಗವೆಂದೆನಿಸದು;
ಗುರುವಚನವಲ್ಲದೆ ನಿತ್ಯವೆಂದೆನಿಸದು;
ಗುರುವಚನವಲ್ಲದೆ ನೇಮವೆಂದೆನಿಸದು.
ತಲೆಯಿಲ್ಲದಟ್ಟೆಗೆ ಪಟ್ಟವ ಕಟ್ಟುವ
ಉಭಯಭ್ರಷ್ಟರ ಮೆಚ್ಚುವನೆ
ನಮ್ಮ ಕೂಡಲ ಸಂಗಮದೇವ? || ೨೨ ||

## (೫) ವಿಭೂತಿಯ ಸ್ಥಳ

೧

ಮುನ್ನ ಮಾಡಿದ ಪಾಪವೆಂತು ಹೋಹುದೆಂದು ಚಿಂತಿಸಬೇಡ:
ಕಹಿಸೋರೆಯ ಕಾಯ ತಂದು ವಿಭೂತಿಯ ತುಂಬಿದೊಡೆ
ಸಿಹಿಯಾಗದೆ ಮೂಱು ದಿವಸಕ್ಕೆ?
ಹಲವುಕಾಲ ಕೊಂದ ಸೂನೆಗಾಱನ ಕತ್ತಿಯಾದರೇನು,
ಪರುಷ ಮುಟ್ಟಲಿಕೆ ಹೊನ್ನಾಗದೆ, ಅಯ್ಯಾ?
ಲಲಾಟದಲ್ಲಿ ವಿಭೂತಿ ಬರಲಿಕೆ
ಪಾಪ ಪಲ್ಲಟವಾಗದೆ, ಕೂಡಲ ಸಂಗಮದೇವಾ? || ೨೩ ||

೨

ನೀರಿಂಗೆ ನೆಯ್ದಿಲೆ ಶೃಂಗಾರ; ಸಮುದ್ರಕ್ಕೆ ತೆರೆಯೇ ಶೃಂಗಾರ;
ನಾರಿಗೆ ಗುಣವೇ ಶೃಂಗಾರ; ಗಗನಕ್ಕೆ ಚಂದ್ರಮನೇ ಶೃಂಗಾರ;
ನಮ್ಮ ಕೂಡಲ ಸಂಗನ ಶರಣರಿಗೆ
ನೊಸಲ ವಿಭೂತಿಯೇ ಶೃಂಗಾರ. || ೨೪ ||

## ( ೬ ) ಪಂಚಾಕ್ಷರಿಯ ಸ್ಥಳ

೧

ಕರಿಯಂಜುವುದಂಕುಶಕ್ಕಯ್ಯಾ; ಗಿರಿಯಂಜುವುದು ಕುಲಿಶಕ್ಕಯ್ಯಾ;
ತಮಂಧವಂಜುವುದು ಜ್ಯೋತಿಗಯ್ಯಾ;
ಕಾನನವಂಜುವುದು ಬೇಗೆಗಯ್ಯಾ;
ಪಂಚಮಹಾಪಾತಕವಂಜುವುದು
ಕೂಡಲ ಸಂಗನ ನಾಮಕ್ಕಯ್ಯಾ. ॥ ೭೫ ॥

೨

ಜಪ-ತಪ-ನಿತ್ಯನೇಮವೆನಗುಪದೇಶ:
ನಿಮ್ಮ ನಾಮವೆನಗೆ ಮಂತ್ರ,
ಶಿವನಾಮವೆನಗೆ ತಂತ್ರ,
ಕೂಡಲ ಸಂಗಮದೇವಯ್ಯಾ, ನಿಮ್ಮ ನಾಮ ಕಾಮಧೇನುವೆನಗೆ. ॥ ೭೬ ॥

೩

ಅಕಟಕಟಾ! ಬೆಡಗು ಬಿನ್ನಾಣವೆಂಬುದೇನೊ?
'ಓಂ ನಮಃ ಶಿವಾಯ' ಎಂಬುದೇ ಮಂತ್ರ;
'ಓಂ ನಮಃ ಶಿವಾಯ' ಎಂಬುದೇ ತಂತ್ರ;
ನಮ್ಮ ಕೂಡಲ ಸಂಗಮದೇವರ ನೆನೆವುದೇ ಮಂತ್ರ. ॥ ೭೭ ॥

೪

ವಶ್ಯವ ಬಲ್ಲೆವೆಂದೆಂಬಿರಯ್ಯಾ—
ಬುದ್ಧಿಯನಱಿಯದ ಮನುಜರೂ ಕೇಳಿರಯ್ಯಾ:
ವಶ್ಯವಾವುದೆಂದಱಿಯದೆ
ಮರುಳುಗೊಂಬಿರೆಲೆ ಗಾವಿಲ ಮನುಜರಿರಾ!
'ಓಂ ನಮಃ ಶಿವಾಯ' ಎಂಬ ಮಂತ್ರ ಸರ್ವಜನವಶ್ಯ,
ಕೂಡಲ ಸಂಗಮದೇವಾ. ॥ ೭೮ ॥

೫

ಭವಬಂಧನ-ದುರಿತಂಗಳ ಗೆಲುವೊಡೆ
'ಓಂ ನಮಃ ಶಿವಾಯ—ಶರಣೆಂ'ದೊಡೆ ಸಾಲದೆ?
'ಹರ ಹರ ಶಂಕರ, ಶಿವ ಶಂಕರ,
ಜಯ ಜಯ ಶಂಕರ ಶರಣೆ'ನ್ನುತ್ತಿರ್ದೇನೆ;
ಎನ್ನ ಪಾತಕ ಪರಿಹಾರ!
'ಕೂಡಲ ಸಂಗಮದೇವ ಶರಣೆ'ನ್ನುತಿರ್ದೇನೆ. ॥ ೭೯ ॥

೬

ಎನ್ನ ಮನದಲ್ಲಿ ಮತ್ತೊಂದನಱಿಯೆನಯ್ಯಾ—
'ಓಂ ನಮಃ ಶಿವಾಯ—ಓಂ ನಮಃ ಶಿವಾಯ' ಎನುತಿರ್ದೇನೆ.
ಎನಗಿದೇ ಮಂತ್ರ; ಎನಗಿದೇ ತಂತ್ರ; ಎನಗಿದೇ ಜಪ;
ಕೂಡಲ ಸಂಗಮದೇವಾ, ನೀನೇ ಬಲ್ಲೆ, ಎಲೆ ಲಿಂಗವೇ ॥ ೮೦ ॥

೭

'ಓಂ ನಮಃ ಶಿವಾಯ'
ಎಂಬ ಮಂತ್ರವ ಮೀಱಲಮ್ಮದೆ ನಿಂದುದು ವೇದ!
'ಓಂ ನಮಃ ಶಿವಾಯ'
ಎಂಬ ಮಂತ್ರವ ಮೀಱಲಮ್ಮದೆ ನಿಂದುದು ಶಾಸ್ತ್ರ!
'ಓಂ ನಮಃ ಶಿವಾಯ'
ಎಂಬ ಮಂತ್ರವ ಮೀಱಲಮ್ಮದೆ ನಿಂದುದು ತರ್ಕ!
ಭಯಂಕರ ಭ್ರಮೆಗೊಂಡಿತ್ತು ಮಂತ್ರ-ತಂತ್ರ!
ಶಿವನಂತುವನಱಿಯದೆ ಚಿಂತಿಸುತ್ತಿದ್ದಿತ್ತು ಲೋಕ!
ಕೂಡಲ ಸಂಗಮದೇವ ಶ್ವಪಚನ ಮೆಱೆದೊಡೆ
ಜಾತಿಭೇದವ ಮಾಡಲಮ್ಮವು! ॥ ೮೧ ॥

೮

ಬಿಳಿಯ ಕರಿಕೆ, ಕಣಿಗಿಲೆಲೆಯ, ತೊಱೆಯ ತಡಿಯ ಮಳಲ ತಂದು,
ಗೌರಿಯ ನೋನುವ ಬನ್ನಿರೇ, ಚಿಕ್ಕ ಮಕ್ಕಳೆಲ್ಲರೂ ನೆರೆದು—
'ಅನುಪಮದಾನಿ ಕೂಡಲ ಸಂಗಮದೇವ
ಗಂಡನಾಗಬೇಕೆ'ಂದು. ॥ ೮೨ ॥

೯

ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ;
ರಾಶಿ ಕೂಟ ಋಣಸಂಬಂಧವುಂಟೆಂದು ಹೇಳಿರಯ್ಯಾ;
ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ;
ನಾಳಿನದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ:
ಕೂಡಲ ಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ ! || ೮೩ ||

## ( ೭ )ಲಿಂಗಧಾರಣ ಸ್ಥಳ

೧

ಪಾತಕಶತಕೋಟಿಯನೊರಸಲು ಸಾಲದೆ ಒಂದು ಶಿವನ ನಾಮ?
ಸಾಲದೆ ಒಂದು ಹರನ ನಾಮ,
ಕೂಡಲ ಸಂಗಮದೇವಾ,
ನಿಮ್ಮ ಉಂಡಿಗೆಯ ಪಶುವ ಮಾಡಿದೆಯಾಗಿ? || ೮೪ ||

೨

ಲಿಂಗದ ಉಂಡಿಗೆಯ ಪಶುವಾನಯ್ಯಾ;
ವೇಷಧಾರಿಯಾನು, ಉದರಪೋಷಕನಾನಯ್ಯಾ;
ಕೂಡಲ ಸಂಗನ ಶರಣರ ಧರ್ಮದ ಕವಿಲೆಯಾನು ! || ೮೫ ||

೩

'ನಮಃ ಶಿವಾಯ, ನಮಃ ಶಿವಾಯ, ನಮಃ ಶಿವಾಯ–ಶರಣೆ'ಂದಿತ್ತು;
ಲಲಾಟಲಿಖಿತ ಬರೆದಬಳಿಕ ಪಲ್ಲಟವ ಮಾಡಬಾರದು.
ಎನ್ನ ಉರದ ಉಂಡಿಗೆ, ಸಿರದ ಅಕ್ಷರ—
'ಕೂಡಲ ಸಂಗಯ್ಯ ಶರಣೆ'ಂದಿತ್ತು. || ೮೬ ||

೪

ಅಡ್ಡ ವಿಭೂತಿಯಿಲ್ಲದವರ ಮುಖ ಹೊಲ್ಲ; ನೋಡಲಾಗದು.
ಲಿಂಗದೇವರಿಲ್ಲದ ಠಾವು ನರವಿಂಧ್ಯ: ಹೊಗಲಾಗದು.
ದೇವಭಕ್ತರಿಲ್ಲದೂರು ಸಿನೆ, ಹಾಳು !
ಕೂಡಲ ಸಂಗಮದೇವಾ. || ೮೭ ||

೫

ಅಷ್ಟ ತ್ರಿಪುಂಡ್ರದ ಮಣಿಮುಕುಟದ ವೇಷದ ಶರಣರ ಕಂಡರೆ
ನಂಬುವುದೆನ್ನ ಮನವು, ನಚ್ಚುವುದೆನ್ನ ಮನವು ಸಂದೇಹವಿಲ್ಲದೆ.
ಇವಿಲ್ಲದವರ ಕಂಡರೆ ನಂಬೆ, ಕೂಡಲ ಸಂಗಮದೇವಾ. ॥ ೮೮ ॥

## ( ೮ ) ತಾಮಸನಿರಸನಸ್ಥಳ

೧

ಆರಾಧ್ಯ ಪ್ರಾಣಲಿಂಗವೆಂದಱಿದು,
ಪೂರ್ವಗುಣವಳಿದು, ಪುನರ್ಜಾತನಾದ ಬಳಿಕ
ಸಂಸಾರಬಂಧುಗಳೆನ್ನವರೆಂದೊಡೆ—
' ನಂಟ ಭಕ್ತಿ ನಾಯಕನರಕ',
ಇಂತೆಂದುದು ಕೂಡಲ ಸಂಗನ ವಚನ. ॥ ೮೯ ॥

೨

ತಾಳ ಮರದ ಕೆಳಗೆ ಒಂದು ಹಾಲ ಹರವಿಯಿರ್ದೊಡೆ
ಅದ ಹಾಲಹರವಿಯೆನ್ನರು, ಸುರೆಯ ಹರವಿಯೆಂಬರು.
ಈ ಭಾವನಿಂದೆಯ ಮಾಣಿಸಾ, ಕೂಡಲ ಸಂಗಮದೇವಾ. ॥ ೯೦ ॥

೩

ಸುಪಥಮಂತ್ರದುಪದೇಶವ ಕಲಿತು ಯುಕ್ತಿಗೆಟ್ಟು ನಡೆವಿರಯ್ಯಾ;
'ತತ್ತ್ವಮಸಿ' ಎಂಬುದನಱಿದು ಕತ್ತಲೆದೊಡೆವಿರಯ್ಯಾ.
ವೇದವಿಪ್ರರ ವಿಚಾರಿಸಿ ನೋಡಲು
'ಉಪದೇಶಪರೀಕ್ಷೆ ನಾಯಕನರಕ' ಎಂದುದು
ಕೂಡಲ ಸಂಗನ ವಚನದ ಸೂಚನೆ. ॥ ೯೧ ॥

೪

ಕುಂಬಳಕಾಯಿಗೆ ಕಬ್ಬುನದ ಕಟ್ಟ ಕೊಟ್ಟರೆ
ಕೊಳೆವುದಲ್ಲದೆ ಬಲುಹಾಗಬಲ್ಲುದೇ ?
ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ
ಭಕ್ತಿ ಎಂತಹುದೊ ?—ಮುನ್ನಿನಂತೆ—
ಕೂಡಲ ಸಂಗಯ್ಯಾ, ಮನಹೀನನ ಮೀಸಲ ಕಾಯ್ದಿರಿಸಿದಂತೆ! ॥೯೨॥

೫

ಸಗಣೆಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ
ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣಾ!
ಮಣ್ಣ ಪುತ್ತಳಿಯ ಮಾಣದೆ ಜಲದಲ್ಲಿ ತೊಳೆದರೆ
ನಿಚ್ಚನಿಚ್ಚಕ್ಕೆ ಕೆಸರಹುದಲ್ಲದೆ ಆದರಚ್ಚುಗ ಬಿಡದಣ್ಣಾ!
ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ
ಕೆಟ್ಟವನೇಕೆ ಶಿವಭಕ್ತನಹನು, ಕೂಡಲ ಸಂಗಮದೇವಾ? ॥ ೯೩ ॥

೬

ಕಬ್ಬುನದ ಕೋಡಗನ ಪರುಷ ಮುಟ್ಟಲು
ಹೊನ್ನಾದರೇನು, ಮತ್ತೇನಾದರೇನು,
ತನ್ನ ಮುನ್ನಿನ ರೂಹ ಬಿಡದನ್ನಕ್ಕ—
ಕೂಡಲ ಸಂಗಮದೇವಾ
ನಿಮ್ಮ ನಂಬಿಯೂ ನಂಬದ ಡಂಭಕರಿಗಯ್ಯಾ? ॥ ೯೪ ॥

೭

ತನುವಿನಲ್ಲೊಂದಿಟ್ಟು ಮನದಲ್ಲೆರಡಿಟ್ಟಡೆ
ಬಲ್ಲನೊಲ್ಲನಯ್ಯಾ ಲಿಂಗವು; ಬಲ್ಲನೊಲ್ಲಯ್ಯಾ;
ಪರಚಿಂತೆಯನೊಲ್ಲನೊಲ್ಲ ಕೂಡಲ ಸಂಗಮದೇವ! ॥ ೯೫ ॥

೮

ಒಳಗೆ ಕುಟಿಲ; ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬವರ
ಬಲ್ಲನೊಲ್ಲನಯ್ಯಾ ಲಿಂಗವು!
ಅವರು ಸತ್‌ಪಥಕ್ಕೆ ಸಲ್ಲರು, ಸಲ್ಲರಯ್ಯಾ.
ಒಳಹೊರಗೊಂದಾಗದವರಿಗೆ ಅಳಿಯಾಸೆದೋರಿ
ಬೀಸಾಡುವನವರ ಜಗದೀಶ ಕೂಡಲ ಸಂಗಮದೇವ! ॥ ೯೬ ॥

೯

ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ,
ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ?
ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ,
ಮನೆಯೊಳಗೆ ಮನೆಯೊಡಯನಿಲ್ಲಾ—
ಕೂಡಲ ಸಂಗಮದೇವ! ॥ ೯೭ ॥

೧೦

ಓಡೆತ್ತ ಬಲ್ಲುದು ಅವಲಕ್ಕಿಯ ಸವಿಯು?
ಕೋಡಗ ಬಲ್ಲುದೆ ಸೆಳೆಮಂಚದ ಸುಖವ?
ಕಾಗೆ ನಂದನ ಬನದೊಳಗಿರ್ದರೇನು,
ಕೋಗಿಲೆಯಾಗಬಲ್ಲುದೆ? ಹೇಳಾ.
ಕೊಳನ ತಡಿಯಲ್ಲೊಂದು ಹೊಱಸು ಕುಳ್ಳಿರ್ದರೇನು,
ಗಳಹಂಸಿಯಾಗಬಲ್ಲುದೆ, ಕೂಡಲ ಸಂಗಮದೇವಾ? ॥ ೯೮ ॥

೧೧

ಎನಿಸುಕಾಲ ಕಲ್ಲು ನೀರೊಳಗಿರ್ದರೇನು,
ನೆನೆದು ಮೃದುವಾಗಬಲ್ಲುದೇ?
ಎನಿಸುಕಾಲ ನಿಮ್ಮ ಪೂಜಿಸಿ ಏವೆನಯ್ಯಾ,
ಮನದಲ್ಲಿ ದೃಢವಿಲ್ಲದನ್ನಕ್ಕ?
ನಿಧಾನವ ಕಾಯ್ದಿರ್ದ ಬೆಂತರನಂತೆ!—
ಅದಱ ವಿಧಿಯೆನಗಾಯಿತ್ತು, ಕೂಡಲ ಸಂಗಮದೇವಾ. ॥ ೯೯ ॥

೧೨

ಸಂತವಿದ್ದ ಮನೆಗೆ ಕೊಂತವ ತಂದಂತೆ
ಇದನೆಂತು ಸಂತಯ್ಸುವೆನು?
ಸಂತೆಯ ಗುಡಿಲ ಸೂಳೆಗೆ ಕೊಂತವಳವಡುವುದೆ?
ಕೂಡಲ ಸಂಗಮದೇವರ ಮಹತ್ತ್ವ ಆರಿಗೆಯೂ ಅಳವಡದು. ॥೧೦೦॥

೧೩

ಕೂಸುಳ್ಳ ಸೂಳೆ ಧನದಾಸೆಗೆ ಒತ್ತೆಯ ಕೊಂಡರೆ
ಕೂಸಿಂಗಲ್ಲ, ಬೊಜಗಂಗಲ್ಲ!
ಕೂಸನೊಮ್ಮೆ ಸಂತಯ್ಸುವಳು; ಬೊಜಗನನೊಮ್ಮೆ ನೆರೆವಳು:
ಧನದಾಸೆ ಬಿಡದು, ಕೂಡಲ ಸಂಗಮದೇವಾ. ‖ ೧೦೧ ‖

೧೪

ಎರದೆಲೆಯಂತೆ ಒಳಗೊಂದು ಹೊಱಗೊಂದಾದರೆ ಮೆಚ್ಚುವನೆ?
ಬಾರದ ಭವಂಗಳ ಬರಿಸುವನಲ್ಲದೆ ಮೆಚ್ಚುವನೆ?
ಅಘೋರನರಕವನುಣಿಸುವನಲ್ಲದೆ ಮೆಚ್ಚುವನೆ?
ಉಡುವಿನ ನಾಲಗೆಯಂತೆ ಎರಡಾದರೆ
ಕೂಡಲ ಸಂಗಯ್ಯ ಮೆಚ್ಚುವನೆ? ‖ ೧೦೨ ‖

೧೫

ಭಕ್ತರ ಕಂಡರೆ ಬೋಳರಪ್ಪಿರಯ್ಯಾ;
ಸವಣರ ಕಂಡರೆ ಬತ್ತಲೆಯಪ್ಪಿರಯ್ಯಾ;
ಹಾರುವರ ಕಂಡರೆ ಹರಿನಾಮವೆಂಬಿರಯ್ಯಾ:
ಅವರವರ ಕಂಡರೆ ಅವರವರಂತೆ!
ಸೂಳೆಗೆ ಹುಟ್ಟಿದವರ ತೋಱದಿರಯ್ಯಾ.
ಕೂಡಲ ಸಂಗಮದೇವನ ಪೂಜಿಸಿ ಅನ್ಯದೈವಂಗಳಿಗೆಱಗಿ
ಭಕ್ತರೆನಿಸಿಕೊಂಬ ಅಜ್ಞಾನಿಗಳ ನಾನೇನೆಂಬೆನಯ್ಯಾ? ‖ ೧೦೩ ‖

೧೬

ಗಂಡ ಶಿವಲಿಂಗದೇವರ ಭಕ್ತ:
ಹೆಂಡತಿ ಮಾರಿ-ಮಸಣಿಯ ಭಕ್ತೆ!
ಗಂಡ ಕೊಂಬುದು ಪಾದೋದಕ-ಪ್ರಸಾದ:
ಹೆಂಡತಿ ಕೊಂಬುದು ಸುರೆ-ಮಾಂಸ!
ಭಾಂಡ-ಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊಱಗೆ ತೊಳೆದಂತೆ,
ಕೂಡಲ ಸಂಗಮದೇವಾ! ‖ ೧೦೪ ‖

೧೭

ಹಾವಾಡಿಗನು ಮೂಕೊಱತಿಯು—ತನ್ನ ಕೈಯಲ್ಲಿ ಹಾವು—
ಮಗನ ಮದುವೆಗೆ ಶಕುನವ ನೋಡ ಹೋಹಾಗ,
ಇದಿರಲ್ಲೊಬ್ಬ ಮೂಕೊಱತಿಯು ಹಾವಾಡಿಗನ ಕಂಡು
'ಶಕುನ ಹೊಲ್ಲೆ'ಂಬ ಚದುರನ ನೋಡಾ !
ತನ್ನ ಸತಿ ಮೂಕೊಱತಿ !—ತನ್ನ ಕೈಯಲ್ಲಿ ಹಾವು !
ತಾನೂ ಮೂಕೊಱೆಯ !
ತನ್ನ ಭಿನ್ನವನಱಿಯದೆ ಅನ್ಯರನೆಂಬ
ಕುನ್ನಿಯನೇನೆಂಬೆ, ಕೂಡಲ ಸಂಗಮದೇವಾ? || ೧೦೫ ||

೧೮

ಅಂಗದಿಚ್ಛೆಗೆ ಮದ್ಯಮಾಂಸವ ತಿಂಬರು;
ಕಂಗಳಿಚ್ಛೆಗೆ ಪರವಧುವ ನೆರೆವರು:
ಲಿಂಗಲಾಂಛನಧಾರಿಯಾದಲ್ಲಿ ಫಲವೇನು ?
ಲಿಂಗಪಥವ ತಪ್ಪಿ ನಡೆವರು ಜಂಗಮಮುಖದಿಂದೆ ನಿಂದೆ ಬಂದರೆ
ಕೊಂಡ ಮಾಱಿಂಗೆ ಹೋಹುದು ತಪ್ಪದು,
ಕೂಡಲ ಸಂಗಮದೇವಾ ! || ೧೦೬ ||

೧೯

ಶಿವಜನ್ಮದಲ್ಲಿ ಹುಟ್ಟಿ, ಲಿಂಗೈಕ್ಯರಾಗಿ, ತಮ್ಮಂಗದಮೇಲೆ ಲಿಂಗವಿರಲು-
ಅನ್ಯರನೆ ಹಾಡಿ, ಅನ್ಯರನೆ ಹೊಗಳಿ,
ಅನ್ಯರ ವಚನವ ಕೊಂಡಾಡಲು, ಕರ್ಮ ಬಿಡದು; ಭವಬಂಧನ!
ಶ್ವಾನಯೋನಿಯಲ್ಲಿ ಬಪ್ಪುದು ತಪ್ಪದು !!
ಇದು ಕಾರಣ, ಕೂಡಲ ಸಂಗಮದೇವಾ,
ನಿಮ್ಮ ನಂಬಿಯೂ ನಂಬದ ಡಂಭಕರಿಗೆ
ಮಳಲ ಗೋಡೆಯನಿಕ್ಕಿ ನೀರಲ್ಲಿ ತೊಳೆದಂತಾಯಿತ್ತು ! || ೧೦೭ ||

೨೦

ಅರ್ಥರೇಖೆ ಇದ್ದಲ್ಲಿ ಫಲವೇನು, ಆಯುಷ್ಯರೇಖೆ ಇಲ್ಲದನ್ನಕ್ಕ?
ಹಂದೆಯ ಕೈಯಲ್ಲಿ ಚಂದ್ರಾಯುಧವಿರ್ದು ಫಲವೇನು?
ಅಂಧಕನ ಕೈಯಲ್ಲಿ ದರ್ಪಣವಿರ್ದು ಫಲವೇನು?
ಮರ್ಕಟನ ಕೈಯಲ್ಲಿ ಮಾಣಿಕವಿರ್ದು ಫಲವೇನು?
ನಮ್ಮ ಕೂಡಲ ಸಂಗನ ಶರಣರನಱಿಯದವರ ಕೈಯಲ್ಲಿ
ಲಿಂಗವಿರ್ದು ಫಲವೇನು ಶಿವಪಥವನಱಿಯದನ್ನಕ್ಕ? ॥ ೧೦೮ ॥

೨೧

ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ,
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ
ಇದ್ದರೇನೊ, ಶಿವಶಿವಾ! ಹೋದರೇನೋ?
ಕೂಡಲ ಸಂಗಮದೇವಯ್ಯಾ,
ಊಡದ ಆವಿಂಗೆ ಉಣ್ಣದ ಕಱುವ ಬಿಟ್ಟಂತೆ! ॥ ೧೦೯ ॥

೨೨

ಅವಳ ವಚನ ಬೆಲ್ಲದಂತೆ: ಹೃದಯದಲ್ಲಿಪ್ಪುದು ನಂಜು, ಕಂಡಯ್ಯಾ!
ಕಂಗಳಲ್ಲೊಬ್ಬನ ಕರೆವಳು, ಮನದಲ್ಲೊಬ್ಬನ ನೆರೆವಳು!
ಕೂಡಲ ಸಂಗಮದೇವ, ಕೇಳಯ್ಯಾ:
ಮಾನಿಸಗಳ್ಳೆಯ ನಂಬದಿರಯ್ಯಾ. ॥ ೧೧೦ ॥

೨೩

ಹಾದರಕ್ಕೆ ಹೋದರೆ ಕಳ್ಳದಮ್ಮವಾಯಿತ್ತು;
ಹಾಳುಗೋಡೆಗೆ ಹೋದರೆ ಚೇಳೂಱಿತ್ತು;
ಅಬ್ಬರವ ಕೇಳಿ ತಳವಾರನುಟ್ಟ ಸೀರೆಯ ಸುಲಿದ;
ನಾಚಿ ಹೋದರೆ ಮನೆಯ ಗಂಡ ಬೆನ್ನ ಬಾರನೆತ್ತಿದ;
ಅರಸು ಕೂಡಲ ಸಂಗಮದೇವ ದಂಡವ ಕೊಂಡ! ॥ ೧೧೧ ॥

೨೪

ಗಱಿ ತೋಱಿ ಗಂಡರೆಂಬವರ ಕಾಣೆ:
  ನಿಱಿ ಸೋಂಕಲು ಮುನಿಯಿಲ್ಲ, ನೋಡಯ್ಯಾ—
  ನಂಟತನವೇನವನ ? ಬಂಟತನವೇಸವನ ?
ಹುಲ್ಲ ಕಿಚ್ಚು—ಹೊಲೆಯನ ಮೇಳಾಪ:
ಅಲ್ಲಿ ಹುರುಳಿಲ್ಲ , ಕೂಡಲ ಸಂಗಮದೇವಾ! || ೧೧೨ ||

೨೫

ಅಳೆಯುತ್ತ ಅಳೆಯುತ್ತ ಬಳಲುವರಲ್ಲದೆ ಕೊಳಗ ಬಳಲುವುದೆ?
ನಡೆಯುತ್ತ ನಡೆಯುತ್ತ ಬಳಲುವರಲ್ಲದೆ ಬಟ್ಟೆ ಬಳಲುವುದೆ ?
ಶ್ರವವ ಮಾಡುತ್ತ ಮಾಡುತ್ತ ಬಳಲುವರಲ್ಲದೆ ಕೋಲು ಬಳಲುವುದೆ?
ನಿಜವನಱಿಯದ ಭಕ್ತ ಬಳಲುವನಲ್ಲದೆ ಲಿಂಗ ಬಳಲುವುದೆ?
ಕೂಡಲ ಸಂಗಮದೇವಾ, ಅರಸಱಿಯದ ಬಿಟ್ಟಿಯೋ ! || ೧೧೩ ||

---

# ೧ (ಅ). ಭಕ್ತಸ್ಥಳ

## (೯) ಭಕ್ತಜ್ಞಾನಿಸ್ಥಲ

೧

ಒಲೆಯ ಬೂದಿಯ ಬಿಲಿಯಲು ಬೇಡ,
  ಒಲಿದಂತೆ ಹೂಸಿಕೊಂಡಿಪ್ಪುದು.
ಹೂಸಿ ಏನು ಫಲ ಮನದಲ್ಲಿ ಲೇಸಿಲ್ಲದನ್ನಕ್ಕ?
ಒಂದನಾಡಹೋಗಿ ಒಂಬತ್ತನಾಡುವ
  ಡಂಭಕರ ಮೆಚ್ಚ ಕೂಡಲ ಸಂಗಮದೇವ. ॥ ೧೧೪ ॥

೨

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
  ಹರದ ಕುಳ್ಳಿರ್ದ ನಮ್ಮ ಮಹಾದೇವಸೆಟ್ಟಿ.
ಒಮ್ಮನವಾದರೆ ಒಡನೆ ನುಡಿವನು; ಇಮ್ಮನವಾದರೆ ನುಡಿಯನು.
ಕಾಣಿಯ ಸೋಲ: ಅದ್ದಗಾಣಿಯ ಗೆಲ್ಲ!
ಜಾಣ, ನೋಡವ್ವಾ, ನಮ್ಮ ಕೂಡಲ ಸಂಗಮದೇವ! ॥ ೧೧೫ ॥

೩

ನಂಬರು, ನೆಚ್ಚರು, ಬಱಿದೆ ಕರೆವರು;
  ನಂಬಲಱಿಯರೀ ಲೋಕದ ಮನುಜರು!
ನಂಬಿ ಕರೆದೊಡೆ 'ಓ' ಎನ್ನನೆ ಶಿವನು
'ನಂಬದೆ ನಚ್ಚದೆ ಬಱಿದೆ ಕರೆವರ
  ಕೊಂಬ ಮೆಟ್ಟಿ ಕೂಗೆ'ಂದ ನಮ್ಮ ಕೂಡಲ ಸಂಗಮದೇವ. ॥೧೧೬॥

೪

ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ, ಅಯ್ಯಾ ?
ಅಘೋರತಪವ ಮಾಡಿದೊಡೇನು ?
ಅಂತರಂಗ-ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯಾ
 ಕೂಡಲ ಸಂಗಮದೇವ? ॥ ೧೧೭ ॥

೫

ಕಾಮವೇಕೊ ಲಿಂಗಪ್ರೇಮಿಯೆನಿಸುವಂಗೆ?
ಕ್ರೋಧವೇಕೊ ಶರಣವೇದ್ಯನೆನಿಸುವಂಗೆ?
ಲೋಭವೇಕೊ ಭಕ್ತಿಲಾಭವ ಬಯಿಸುವಂಗೆ ?
ಮೋಹವೇಕೊ ಪ್ರಸಾದವೇದ್ಯನೆನಿಸುವಂಗೆ?
ಮದಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೋ ?
ಹದುಳಿಗರಾದಲ್ಲಿಪ್ಪ ನಮ್ಮ ಕೂಡಲ ಸಂಗಮದೇವ. ॥ ೧೧೮ ॥

೬

ಸಾರ, ಸಜ್ಜನರ ಸಂಗವ ಮಾಡುವುದು :
 ದೂರ , ದುರ್ಜನರ ಸಂಗ ಬೇಡವಯ್ಯಾ !
ಆವ ಹಾವಾದರೇನು ? ವಿಷವೊಂದೆ:
 ಅಂತವರ ಸಂಗ ಬೇಡವಯ್ಯಾ.
ಅಂತರಂಗಶುದ್ಧವಿಲ್ಲದವರ ಸಂಗ
 ಸಿಂಗಿ, ಕಾಳಕೂಟ ವಿಷವೋ, ಕೂಡಲ ಸಂಗಮದೇವಾ! ॥ ೧೧೯ ॥

೭

ಹಸಿದು ಎಕ್ಕೆಯ ಕಾಯ ಮೆಲಬಹುದೆ ?
ನೀರಡಿಸಿ ವಿಷವನೀಂಟಬಹುದೆ ?
ಸುಣ್ಣದ ತುಯ್ಯಲ ಬಣ್ಣವೊಂದೆ ಎಂದರೆ
 ನಂಟತನಕ್ಕೆ ಉಣ್ಣಬಹುದೆ?
ಲಿಂಗಸಾರಾಯಸಜ್ಜನರಲ್ಲದವರ
 ಕೂಡಲ ಸಂಗಮದೇವರೆಂತೊಲಿವನು ? ॥ ೧೨೦ ॥

೮

ಎಲವದ ಮರ ಹೂತು ಫಲವಾದ ತೆಱನಂತೆ–
  ಸಿರಿಯಾದರೇನು ಶಿವಭಕ್ತಿಯಿಲ್ಲದನ್ನಕ್ಕ ?
ಫಲವಾದರೇನು ಹಾವುಮೆಕ್ಕೆಯಕಾಯಿ ?
ಕುಲವಿಲ್ಲದ ರೂಹು ಎಲ್ಲಿದ್ದರೇನು ?
ಬಚ್ಚಲ ನೀರು ತಿಳಿದಲ್ಲಿ ಫಲವೇನು ?
ಅವಗುಣಿಗಳ ಮೆಚ್ಚ ಕೂಡಲ ಸಂಗಮದೇವ. ॥ ೧೨೧ ॥

೯

ಬಚ್ಚಲ ನೀರು ತಿಳಿದರೇನು ? ಸಲ್ಲದ ಹೊನ್ನು ಮತ್ತೆಲ್ಲಿದ್ದರೇನು?
ಆಕಾಶದ ಮಾವಿನ ಫಲವೆಂದರೇನು ? ಕೊಯ್ಯಲಿಲ್ಲ, ಮೆಲ್ಲಲಿಲ್ಲಾ !
ಕೂಡಲ ಸಂಗನ ಶರಣರ ಅನುಭಾವವಿಲ್ಲದವರು
  ಎಲ್ಲಿದ್ದರೇನು ? ಎಂತಾದರೇನು ? ॥ ೧೨೨ ॥

೧೦

ಗಿಳಿಯೋದಿ ಫಲವೇನು ?
  ಬೆಕ್ಕು ಬಹುದ ಹೇಳಲಱಿಯದು !
ಜಗವೆಲ್ಲ ಕಾಂಬ ಕಣ್ಣು:
  ತನ್ನ ಕೊಂಬ ಕೊಯಿಲೆಯ ಕಾಣಲಱಿಯದು !
ಇದಿರ ಗುಣವ ಬಲ್ಲೆವೆಂಬರು :
  ತಮ್ಮ ಗುಣವನಱಿಯರು, ಕೂಡಲ ಸಂಗಮದೇವಾ. ॥ ೧೨೩ ॥

೧೧

ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ ;
  ನಿಮ್ಮ ನಿಮ್ಮ ಮನವ ಸಂತಯಿಸ್ಸಿಕೊಳ್ಳಿ.
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ
  ಕೂಡಲ ಸಂಗಮದೇವ. ॥ ೧೨೪ ॥

೧೨

ಏತ ತಲೆವಾಗಿದರೇನು? ಗುರುಭಕ್ತನಾಗಬಲ್ಲುದೆ?
ಇಕ್ಕುಳ ಕೈಮುಗಿದರೇನು? ಭೃತ್ಯಾಚಾರಿಯಾಗಬಲ್ಲುದೆ?
ಗಿಳಿಯೋದಿದರೇನು? ಲಿಂಗವೇದಿಯಾಗಬಲ್ಲುದೆ?
ಕೂಡಲ ಸಂಗನ ಶರಣರ ಬಂದ ಬರವ ನಿಂದ ನಿಲವ
ಅನಂಗಸಂಗಿಗಳೆತ್ತ ಬಲ್ಲರು? || ೧೨೫ ||

೧೩

ಒಲವಿಲ್ಲದ ಪೂಜೆ! ನೇಹವಿಲ್ಲದ ಮಾಟ!
ಆ ಪೂಜೆಯೂ ಆ ಮಾಟವೂ
ಚಿತ್ರದ ರೂಹು ಕಾಣಿರಣ್ಣಾ! ಚಿತ್ರದ ಕಬ್ಬು ಕಾಣಿರಣ್ಣಾ!
ಅಪ್ಪಿದರೆ ಸುಖವಿಲ್ಲ! ಮೆಲಿದರೆ ರುಚಿಯಿಲ್ಲ!—
ಕೂಡಲ ಸಂಗಮದೇವಾ ನಿಜವಿಲ್ಲದವನ ಭಕ್ತಿ!! || ೧೨೬ ||

೧೪

ಸ್ನೇಹ ತಪ್ಪಿದ ಠಾವಿನಲ್ಲಿ ಗುಣವನಱಸುವರೆ, ಅಯ್ಯಾ?
ಹೂ ಬಾಡಿದಲ್ಲಿ ಪರಿಮಳವನಱಸುವರೆ, ಅಯ್ಯಾ?
ಎನ್ನ ತಂದೆ ಕೂಡಲ ಸಂಗಮದೇವಾ,
ತೊಱೆಯಿಳಿದರೆ ಅಂಬಿಗಂಗೇನುಂಟು? || ೧೨೭ ||

೧೫

ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು
ಪುಣ್ಯಪದವಿಯ ಬಯಸಿದರೆ ಭವಮಾಲೆಯ ಭರವು ತಪ್ಪದು.
ಬೇಡಲು ಹುಟ್ಟಿದ ಪ್ರಾಣಿಗೆ ಬೇಡಲು ವಿಧಿಯೇ!
ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣಸಜ್ಜನವಪ್ಪುದೆ?
ಲಿಂಗ-ಉದಯ, ಶರಣ-ವಿಸ್ತಾರವು ಬಯಸಿದರೊಳವೆ,
ಕೂಡಲ ಸಂಗಮದೇವಾ, ನಿಮ್ಮಲ್ಲಿ? || ೧೨೮ ||

೧೬

ಹಬ್ಬಕ್ಕೆ ತಂದ ಹರಕೆಯ ಕುಱಿ
  ತೋರಣಕ್ಕೆ ತಂದ ತಳಿರ ಮೇಯಿತ್ತು;
  ಕೊಂದಹರೆಂಬುದನಱಿಯದೆ
  ಬೆಂದವೊಡಲ ಹೊರೆಯ ಹೋಯಿತ್ತಲ್ಲದೆ!
ಅಂದೇ ಹುಟ್ಟಿತ್ತು, ಅದಂದೇ ಹೊಂದಿತ್ತು:
  ಕೊಂದವರುಳಿದರೇ, ಕೂಡಲ ಸಂಗಮದೇವಾ? ॥ ೧೨೯ ॥

೧೭

ಹಾವಿನ ಬಾಯ ಕಪ್ಪೆ ಹಸಿದು ಹಾಱುವ ನೊಣಕ್ಕೆ ಆಸೆ ಮಾಡುವಂತೆ-
  ಸೂಲವನೇಱುವ ಕಳ್ಳನು ಹಾಲುತುಪ್ಪವ ಕುಡಿದು
  ಮೇಲೇಸುಕಾಲ ಬದುಕುವನೊ?
ಕೆಡುವೊಡಲ ನಚ್ಚಿ, ಕಡುಹುಸಿಯನೆ ಹುಸಿದು, ಒಡಲ ಹೊರೆವರ-
  ಕೂಡಲ ಸಂಗಮದೇವನವರನೊಲ್ಲ, ಕಾಣಿರಣ್ಣಾ. ॥ ೧೩೦ ॥

೧೮

ಅರತವಡಗದು; ಕ್ರೋಧ ತೊಲಗದು;
  ಕ್ರೂರ ಕುಭಾಷೆ ಕುಹಕ ಬಿಡದನ್ನಕ್ಕ
  ನೀನೆತ್ತಲು ಶಿವನೆತ್ತಲು? ಹೋಗಯ್ಯಾ, ಮರುಳೇ!
ಭವರೋಗವೆಂಬ ತಿಮಿರ ತಿಳಿಯದನ್ನಕ್ಕ
  ಕೂಡಲ ಸಂಗಯ್ಯನೆತ್ತ ನೀನೆತ್ತ? ಮರುಳೇ! ॥ ೧೩೧ ॥

೧೯

ಹಾವು ತಿಂದವರ ನುಡಿಸಬಹುದು;
  ಹೊಡೆದವರ ನುಡಿಸಬಹುದು:
  ಸಿರಿಗರ ಹೊಡೆದವರ ನುಡಿಸಲ ಬಾರದು, ನೋಡಯ್ಯಾ!
ಬಡತನವೆಂಬ ಮಂತ್ರವಾದಿ ಹೊಗಲು
  ಒಡನೆ ನುಡಿವರು, ಕೂಡಲ ಸಂಗಮದೇವಾ. ॥ ೧೩೨ ॥

೨೦

ಅರೆಭಕ್ತರಾದವರ ನೆರೆ ಬೇಡ, ಹೊರೆ ಬೇಡ;
ದಾರಿ ಸಂಗಡ ಬೇಡ, ದೂರ ನುಡಿಯಲು ಬೇಡ!
ಕೂಡಲ ಸಂಗನ ಶರಣರಲ್ಲಿ ಅಚ್ಚ ಲಿಂಗೈಕ್ಯಂಗೆ
ತೊತ್ತಾಗಿಹುದಯ್ಯಾ. ॥ ೧೩೩ ॥

೨೧

ಸಾರ, ಸಜ್ಜನರ ಸಂಗ ಲೇಸು ಕಂಡಯ್ಯಾ :
ದೂರ, ದುರ್ಜನರ ಸಂಗವದು ಭಂಗವಯ್ಯಾ.
ಸಂಗವೆರಡುಂಟು; ಒಂದ ಬಿಡು; ಒಂದ ಹಿಡಿ:
ಮಂಗಳಮೂರ್ತಿ ನಮ್ಮ ಕೂಡಲ ಸಂಗನ ಶರಣರ. ॥ ೧೩೪ ॥

೨೨

ಹೊಲೆಯ ಹೊಲಬಿಗನಾದೊಡೆ
ಅವನ ಹೊರೆಯಲಿಪ್ಪುದು ಲೇಸು, ಕಂಡಯ್ಯಾ.
ಹೊಲಬುಗೆಡದೆ 'ಲಿಂಗ ಶರಣೆ'ನ್ನಿರಯ್ಯಾ;
ಹೊಲಬುಗೆಡಬೇಡ: 'ಶಿವ ಶರಣೆ'ನ್ನಿರಯ್ಯಾ.
ನಮ್ಮ ಕೂಡಲ ಸಂಗನ ಮಹಾಮನೆಯೊಳು
ಮಾದಾರ ಚೆನ್ನಯ್ಯ ಹೊಲಬಿಗನಯ್ಯಾ! ॥ ೧೩೫ ॥

೨೩

ದೂಷಕನವನೊಬ್ಬ ದೇಶವ ಕೊಟ್ಟರೆ,
ಆಸೆಮಾಡಿಯವನ ಹೊರೆಯಲಿರಬೇಡ.
ಮಾದರ ಶಿವಭಕ್ತನಾದರೆ ಆತನ ಹೊರೆಯಲ್ಲಿ
ಭೃತ್ಯನಾಗಿರ್ಪುದು ಕರಲೇಸಯ್ಯಾ,
ತೊತ್ತಾಗಿರ್ಪುದು ಕರಲೇಸಯ್ಯಾ.
ಕಾಡ ಸೊಪ್ಪ ತಂದು, ಓಡಿನಲ್ಲಿ ಹುರಿದಿಟ್ಟು
ಕೂಡಿ ಕೊಂಡಿಪ್ಪುದು ನಮ್ಮ ಕೂಡಲ ಸಂಗನ ಶರಣರ. ॥೧೩೬॥

೨೪

ಪರುಷ ಮುಟ್ಟಿದ ಬಳಿಕ ಕಬ್ಬುನವಾಗದು, ನೋಡಾ;
ಲಿಂಗ ಮುಟ್ಟಿದ ಬಳಿದ ಕುಚಿತ್ತಾಚಾರವಾಗದು,
ಕೂಡಲ ಸಂಗನ ಶರಣರು ಅನ್ಯವನಱಿಯರಾಗಿ. ॥ ೧೩೭ ॥

೨೫

ಪಟ್ಟವ ಕಟ್ಟಿದ ಬಳಿಕ ಲಕ್ಷಣವನಱಿಸುವರೆ?
ಲಿಂಗದೇವನ ಪೂಜಿಸಿ ಕುಲವನಱಿಸುವರೆ, ಅಯ್ಯಾ,
ಕೂಡಲ ಸಂಗಮದೇವ 'ಭಕ್ತಕಾಯ ಮಮಕಾಯ'ವೆಂದನಾಗಿ?
॥ ೧೩೮ ॥

೨೬

ದೇವಲೋಕ ಮರ್ತ್ಯಲೋಕವೆಂಬುದು ಬೇಱಿ ಮತ್ತುಂಟೆ?
ಈ ಲೋಕದೊಳಗೇ ಮತ್ತೆ ಅನಂತಲೋಕ!
ಶಿವಲೋಕ ಶಿವಾಚಾರವಯ್ಯಾ;
ಭಕ್ತನಿರ್ದ ಟಾವೇ ದೇವಲೋಕ;
ಭಕ್ತನಂಗಣವೇ ವಾರಣಾಸಿ;
ಕಾಯವೇ ಕೈಲಾಸ!
ಇದು ಸತ್ಯ ಕೂಡಲ ಸಂಗಮದೇವಾ. ॥ ೧೩೯ ॥

೨೭

ಕಟ್ಟಿದಿರಿನಲ್ಲಿ ಶಿವಭಕ್ತನ ಕಂಡು, ದೃಷ್ಟಿಯಾರೆ ಶರಣೆಂದೊಡೆ
ಹುಟ್ಟೇಳು ಜನ್ಮದ ಪಾಪ ಬಿಟ್ಟು ಹಿಂಗುವುದು, ನೋಡಾ;
ಮುಟ್ಟಿ ಚರಣಕೆಱಗಿದೊಡೆ ತನುವೊಪ್ಪದಂತೇ ಅಹುದು,
ಪರುಷ ಮುಟ್ಟಿದಂತೆ!
ಕರ್ತೃ ಕೂಡಲ ಸಂಗನ ಶರಣರ ಸಂಗವು
ಮತ್ತೆ ಭವಮಾಲೆಗೆ ಹೊದ್ದಲೀಯದು, ನೋಡಾ. ॥ ೧೪೦ ॥

೨೮

ಆರಾರ ಸಂಗವೇನೇನ ಮಾಡದಯ್ಯಾ ;
ಕೀಡಿ ಕುಂಡಲಿಗನಾಗದೆ, ಅಯ್ಯಾ ?
ಚಂದನದ ಸನ್ನಿಧಿಯಲಿ ಪರಿಮಳ ತಾಗಿ
ಬೇವು ಬೊಬ್ಬುಳಿ ತಱಿಯ ಗಂಧಂಗಳಾಗವೆ?
ನಮ್ಮ ಕೂಡಲ ಸಂಗನ ಶರಣರ ಸನ್ನಿಧಿಯಿಂದ
ಕರ್ಮ ನಿರ್ಮಳವಾಗದಿಹುದೆ ? ॥ ೧೪೧ ॥

೨೯

ಎಂತಹನಾದರೇನು: ಲಿಂಗ ಮುಟ್ಟಿದವನೇ ಕೀಳುಜಾತಿ.
ಕುಲವಹುದು ತಪ್ಪದು ಲಿಂಗ ಮುಟ್ಟಲೊಡನೆ:
ಹೊನ್ನಹುದು ತಪ್ಪದು ಪರುಷ ಮುಟ್ಟಲೊಡನೆ.
ಕೂಡಲ ಸಂಗಮದೇವನೊಲ್ಲ ಸರ್ವಸಂದೇಹಿಗಳ! ॥ ೧೪೨ ॥

೩೦

ಓದಿದರೇನು ಕೇಳಿದರೇನು ಶಿವಪಥವನಱಿಯದನ್ನಕ್ಕ ?
ಓದಿತ್ತು ಕಾಣಿರೋ ಶುಕನು—ಶಿವಪಥವನಱಿಯದನ್ನಕ್ಕ !
ಓದಿದ ಫಲವು ಮಾದಾರ ಚೆನ್ನಯ್ಯಂಗಾಯಿತ್ತು,
ಕೂಡಲ ಸಂಗಮದೇವಾ. ॥ ೧೪೩ ॥

೩೧

ಹಾವಿನ ಡೊಂಕು ಹುತ್ತಕ್ಕೆ ಸಸಿನ;
ನದಿಯ ಡೊಂಕು ಸಮುದ್ರಕ್ಕೆ ಸಸಿನ:
ನಮ್ಮ ಕೂಡಲ ಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ! ॥೧೪೪॥

೩೨

ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು,
ಭಕ್ತದೇಹಿಕದೇವ ಅನಿಮಿಷನಾಗಿ.
ಕೂಡಲ ಸಂಗಮದೇವ
ಭಕ್ತನ ನುಡಿಯ ನಡುವೆ ರಾಶಿಯಾಗಿರ್ಪನು. ॥೧೪೫॥

೩೩

ಭಕ್ತಿ ಎಂತಹುದಯ್ಯಾ? ದಾಸಯ್ಯ ಮಾಡಿದಂತಹುದಯ್ಯಾ.
ಭಕ್ತಿ ಎಂತಹುದಯ್ಯಾ? ಸಿರಿಯಾಳ ಮಾಡಿದಂತಹುದಯ್ಯಾ.
ಭಕ್ತಿ ಎಂತಹುದಯ್ಯಾ? ನಮ್ಮ ಸಿಂಧುಬಲ್ಲಾಳ ಮಾಡಿದಂತಹುದಯ್ಯಾ.
ಭಕ್ತಿ ಎಂತಹುದಯ್ಯಾ? ಕೂಡಲ ಸಂಗಮದೇವಾ,
ನೀ ಬಾಣನ ಬಾಗಿಲ ಕಾಯ್ದಂತಹುದಯ್ಯಾ. ॥ ೧೪೬ ॥

೩೪

ಮುನ್ನಿನವರು ಹೋದ ದಾರಿ ಭಯ, ಕಾಣಿರಣ್ಣಾ!
ಬಲ್ಲಾಳನ ವಧುವಿನೊಡನೆ ಸರಸವಾಡಿದಂದಿಂದ ಭಯ, ಕಾಣಿರಣ್ಣಾ!
ಸಿರಿಯಾಳನ ಮಗನ ಬೇಡಿದಂದಿಂದ ಭಯ, ಕಾಣಿರಣ್ಣಾ!
ದಾಸನ ವಸ್ತ್ರವ ಸೀಳಿದಂದಿಂದ ಭಯ, ಕಾಣಿರಣ್ಣಾ!
ಅಘಟಿತಘಟಿತರು ವಿಪರೀತಚರಿತರು
ಕೂಡಲ ಸಂಗನ ಶರಣರು ನಡೆದ ದಾರಿ ಭಯ, ಕಾಣಿರಣ್ಣಾ!!
॥ ೧೪೭ ॥

೩೫

ದೇವನೊಳ್ಳಿದನೆಂದು ಮುಯ್ಯಾನಲು ಬೇಡ!
ಕಱಕಟ ಕಾಡಿದನೊಳ್ಳಿದನೆ?
ಅಳಿಸುವ ನಗಿಸುವನೊಳ್ಳಿದನೆ?
ಬೆಚ್ಚದೆ ಬೆದಱದೆ ತೊತ್ತುತನವ ಮಾಡಲು
ತನ್ನನೀವ ಕೂಡಲ ಸಂಗಮದೇವ. ॥ ೧೪೮ ॥

೩೬

ನೆಱೆ ನಂಬೊ, ನೆಱೆ ನಂಬೋ ಧರಧುರವಿಲ್ಲದೆ ಸಾಮವೇದಿಗಳಂತೆ;
ನೆಱೆ ನಂಬೊ, ನೆಱೆ ನಂಬೋ ದಾಸ-ದುಗ್ಗಳೆಯಂತೆ;
ನೆಱೆ ನಂಬೊ, ನೆಱೆ ನಂಬೋ ಸಿರಿಯಾಳ-ಚಂಗಳೆಯಂತೆ;
ನೆಱೆ ನಂಬೊ, ನೆಱೆ ನಂಬೋ ಸಿಂಧುಬಲ್ಲಾಳನಂತೆ.
ನಂಬಿದೆಯಾದಡೆ ತನ್ನನೀವ ಕೂಡಲ ಸಂಗಮದೇವ. ॥ ೧೪೯ ॥

೩೭

ಬಲ್ಲಿದರೊಡನೆ ಬವರವಾದರೆ ಗೆಲಲುಂಟು ಸೋಲಲುಂಟು:
 ಕಳ್ಳನೊಡನೆ ಭಾಷೆ ಪೂರಾಯ[ವೆ], ಅಯ್ಯಾ?
ನಮ್ಮ ಕೂಡಲ ಸಂಗನ ಶರಣರಿಗೆ ಮಾಡಿ ಮಾಡಿ
 ಧನ ಸವೆದು ಬಡವಾದರೆ
 ಆ ಭಕ್ತನು ಆ ಲಿಂಗಕ್ಕೆ ಪೂಜೆಯಹನು. || ೧೫೦ ||

೩೮

ಗಿರಿಗಳ ಮೇಲೆ ಹಲವು ತರುಮರಾದಿಗಳಿದ್ದು
 ಸಿರಿಗಂಧದ ಸನ್ನಿಧಿಯಲು ಪರಿಮಳವಾಗವೆ?
ಲಿಂಗವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗ ಕೆಡುವುದು.
ಕೂಡಲ ಸಂಗಮದೇವಯ್ಯಾ,
 ಸಿರಿಯಾಳನ ಸಾರ್ದ ನರರೆಲ್ಲಾ ಸುರರಾಗರೆ? || ೧೫೧||

೩೯

ಪರುಷದ ಹೊರೆಯಲ್ಲಿ ಕಬ್ಬುನವಿರ್ದು ಹೊನ್ನಾಯಿತ್ತು, ನೋಡಿರೇ:
 ಅವ್ವಾ ಚಂಗಳೇ, ನೀನಿದ್ದೇಳು ಕೇರಿಯವರು
 ಲಿಂಗದ ನೋಂಪಿಯ ನೋಂತರೆ? ಹೇಳಾ:
 ಕೂಡಲ ಸಂಗಮ ದೇವಂಗೆ
 ಚೀಲಾಳನೆಂಬ ಬಾಯಿನವನಿಕ್ಕಿದರೇ? ಹೇಳಾ. || ೧೫೨ ||

೪೦

ಗೀತವ ಬಲ್ಲಾತ ಜಾಣನಲ್ಲ; ಮಾತ ಬಲ್ಲಾತ ಜಾಣನಲ್ಲ:
 ಜಾಣನು, ಜಾಣನು, ಆತ ಜಾಣನು: ಲಿಂಗವ ನೆಱೆನಂಬಿದಾತ;
 ಜಾಣನು ಜಂಗಮಕ್ಕೆ ಸವೆಸುವಾತ.
ಆತ ಜಾಣನು: ಜವನ ಬಾಯಲು ಬಾಲವ ಕೊಯ್ದು ಹೋದಾತ;
 ಆತ ಜಾಣನು: ನಮ್ಮ ಕೂಡಲ ಸಂಗನ ಶರಣನು! || ೧೫೩ ||

೪೧

ಲೇಸೆನಿಸಿಕೊಂಡು ಐದು ದಿನ ಬದುಕಿದರೇನು?
ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು?
ಲೇಸೆನಿಸಿಕೊಂಡು ಮೂರು ದಿನ ಬದುಕಿದರೇನು?
ಲೇಸೆನಿಸಿಕೊಂಡು ಎರಡು ದಿನ ಬದುಕಿದರೇನು?
(ಶ್ಲೋಕ) ಜೀವಿತಂ ಶಿವಭಕ್ತಾನಾಂ। ವರಂ ಪಂಚದಿನಾನಿ ಚ ||
ನಾಚಕಲ್ಪಸಹಸ್ರಂತು | ಭಕ್ತಿಹೀನಂ ತು ಶಂಕರೀ ||
ಎಂದುದಾಗಿ, ಕೂಡಲ ಸಂಗನ ಶರಣರ ವಚನದಲ್ಲಿ,
ಲೇಸೆನಿಸಿಕೊಂಡು ಒಂದು ದಿನ ಬದುಕಿದರೇನೋ? || ೧೫೪ ||

೪೨

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ:
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ;
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ,
ಕೂಡಲ ಸಂಗಮದೇವಾ. || ೧೫೫ ||

೪೩

ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು—
ಸಗಣಕ್ಕೆ ಸಾಸಿರ ಹುಳು ಹುಟ್ಟವೆ, ದೇವಾ?
ಕಾಡ ಮೃಗವೊಂದಾಗಿರಲಾಗದೆ, ದೇವಾ?
ಊರ ಮೃಗವೊಂದಾಗಿರಲಾಗದೆ, ಹರನೇ?
ನಮ್ಮ ಕೂಡಲ ಸಂಗನ ಶರಣರಿಲ್ಲದ ಊರು, ದೇಶ–
ವನವಾಸ, ನರವಿಂಧ್ಯ, ಕಾಣಿರಣ್ಣಾ! || ೧೫೬ ||

೪೪

ಹೊತ್ತಾರೆ ಎದ್ದು ಶಿವಲಿಂಗದೇವನ
ದೃಷ್ಟಿ[ಯಾ]ರೆ ನೋಡದವನ ಸಂಸಾರವೇನವನ?
ಬಾಳುವೆಣನ ಬೀಳುವೆಣನ ಸಂಸಾರವೇನವನ?
ನಡೆವೆಣನ ನುಡಿವೆಣನ ಸಂಸಾರವೇನವನ?
ಕರ್ತ ಕೂಡಲ ಸಂಗಮದೇವಾ,
ನಿಮ್ಮ ತೊತ್ತುಗೆಲಸವ ಮಾಡದವನ ಸಂಸಾರವೇನವನ? || ೧೫೭ ||

೪೫

ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯಾ.
ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬವರಿಲ್ಲ, ನೋಡಯ್ಯಾ!
ಮೊಲನಿಂದ ಕರಕಷ್ಟ ನರನ ಬಾಳುವೆ!
ಸಲೆನಂಬೋ ನಮ್ಮ ಕೂಡಲ ಸಂಗಮದೇವನ. || ೧೫೮ ||

೪೬

ಉತ್ಪತ್ತಿ ಶುಕ್ಲ-ಶೋಣಿತದಿಂದಾದ ಲಜ್ಜೆ ಸಾಲದೇ?
ಮತ್ತೆ ದುರಿತಂಗಳ ಹೆಱುವ ಹೇಗತನವೇಕಯ್ಯಾ?
ಮೃತ್ಯುವಿನ ಬಾಯಿಗೆ ತುತ್ತಾಗಲೇಕೆ?
ಒತ್ತೊತ್ತೆಯ ಜನನವ ಗೆಲುವೊಡೆ ಕರ್ತನ ಪೂಜಿಸು—
ನಮ್ಮ ಕೂಡಲ ಸಂಗಮದೇವನ. || ೧೫೯ ||

೪೭

ಮನವೇ ಸರ್ಪ, ತನುವೇ ಹೇಳಿಗೆ:
ಹಾವಿನೊಡತಣ ಹುದುವಾಳಿಗೆ!
ಇನ್ನಾವಾಗ ಕೊಂದಹುದೆಂದಱಿಯೆ:
ಇನ್ನಾವಾಗ ತಿಂದಹುದೆಂದಱಿಯೆ!
ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲೊಡೆ
ಅದೇ ಗಾರುಡ, ಕೂಡಲ ಸಂಗಮದೇವಾ! || ೧೬೦ ||

೪೮

ನೆರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ,
ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ,
ಕಾಲ ಮೇಲೆ ಕೈಯನೂಱಿ ಕೋಲ ಹಿಡಿಯದ ಮುನ್ನ,
ಮುಪ್ಪಿಂದೊಪ್ಪವಳಿಯುವ ಮುನ್ನ, ಮೃತ್ಯು ಮುಟ್ಟದ ಮುನ್ನ—
ಪೂಜಿಸು ನಮ್ಮ ಕೂಡಲ ಸಂಗಮದೇವನ. || ೧೬೧ ||

೪೯

ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟ ಕೊಟ್ಟು
 ಸುರಕ್ಷಿತವ ಮಾಡುವ ಭರವ ನೋಡಾ!
ಮಹಾದಾನಿ ಕೂಡಲ ಸಂಗಮದೇವನ ಪೂಜಿಸಿ
 ಬದುಕುವೋ ಕಾಯವ ನಿಶ್ಚಯಿಸದೆ. ‖ ೧೬೨ ‖

೫೦

ಹಂಜರ ಬಲ್ಲಿತ್ತೆಂದು, ಅಂಜದೆ ಓದುವ ಗಿಳಿಯೇ,
ಎಂದೆಂದೂ ಅಳಿಯೆನೆಂದು ಗುಡಿಗಟ್ಟಿದೆಯಲ್ಲಾ—
 ನಿನ್ನ ಮನದಲ್ಲಿ—ಮಾಯಮಂಜರ ಕೊಲುವರೆ
 ನಿನ್ನ ಹಂಜರ ಕಾವುದೆ, ಕೂಡಲ ಸಂಗಮದೇವನಲ್ಲದೆ? ‖ ೧೬೩ ‖

೫೧

ಸಂಸಾರವೆಂಬುದೊಂದು ಗಾಳಿಯ ಸೊಡರು,
 ಸಿರಿಯೆಂಬುದೊಂದು ಸಂತೆಯ ಮಂದಿ, ಕಂಡಯ್ಯಾ!
ಇದ ನೆಚ್ಚಿ ಕೆಡಬೇಡ-ಸಿರಿಯೆಂಬುದ!
ಮಱೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ. ‖ ೧೬೪ ‖

೫೨

ಎಲೆ ಎಲೆ ಮಾನವಾ, ಅಳಿಯಾಸೆ ಬೇಡವೋ,
 ಕಾಳ ಬೆಳದಿಂಗಳು ಸಿರಿ ಸ್ಥಿರವಿಲ್ಲ!
ಕೇಡಿಲ್ಲದ ಪದವೀ[ವ] ಕೂಡಲ ಸಂಗಮದೇವನ
 ಮಱೆಯದೆ ಪೂಜಿಸೋ. ‖ ೧೬೫ ‖

೫೩

ಎಂತಕ್ಕೆ! ಎಂತಕ್ಕೆ! ಹಡೆದ ಕಾಯ ಬೀಯವಾಗದ ಮುನ್ನ ಅಟ್ಟುಣ್ಣುವೋ!
ಬೆಱೆಯುಳ್ಳಲ್ಲಿ ಹೊತ್ತು ಹೋಗದ ಮುನ್ನ ಅಟ್ಟುಣ್ಣುವೋ!
ಮರಳಿ ಭವಕ್ಕೆ ಬಾಹೆ—ಬಾರದಿಹೆ:
 ಕರ್ತೃ ಕೂಡಲ ಸಂಗಂಗೆ ಶರಣೆನ್ನುವೋ! ‖ ೧೬೬ ‖

೫೪

ಶಕುನವೆಂದೆಂಬೆ, ಅವಶಕುನವೆಂದೆಂಬೆ—
ನಿಮ್ಮವರು ಅಳಲಿಕೆ ಅಂದೇಕೆ ಬಂದೆ?
ನಿಮ್ಮವರು ಅಳಲಿಕೆ ಇಂದೇಕೆ ಹೋದೆ?
ನೀ ಹೋಹಾಗಳಕ್ಕೆ! ನೀ ಬಾಹಾಗಳಕ್ಕೆ!
ಅಕ್ಕೆ ಬಾರದ ಮುನ್ನ ಪೂಜಿಸು ಕೂಡಲ ಸಂಗಮದೇವನ. ||೧೬೭||

೫೫

ನಿಮಿಷದ ನಿಮಿಷಂ ಬೋ, ಕ್ಷಣದೊಳಗರ್ಧಂ ಬೋ!
ಕಣ್ಣು ಮುಚ್ಚಿ ಬಿಚ್ಚುವೈಸು ಬೇಗಂ ಬೋ:
ಸಂಸಾರದಾಗುಂ ಬೋ! ಸಂಸಾರದ ಹೋಗುಂ ಬೋ!
ಸಂಸಾರದೊಪ್ಪಂ ಬೋ!
ಕೂಡಲ ಸಂಗಮದೇವಾ,
ನೀ ಮಾಡಿದ ಮಾಯೇಂ ಬೋ, ಅಬ್ರಚ್ಛಾಯೇಂ ಬೋ! ||೧೬೮||

೫೬

ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬರ್ಕು
ಹರಿದು ಹೆದ್ದೊಱೆಯೆ ಕೆಱೆ ತುಂಬಿದಂತಯ್ಯಾ!
ನೆರೆಯದ ವಸ್ತು ನೆರೆವುದು ನೋಡಯ್ಯಾ:
ಅರಸು ಪರಿವಾರ ಕೈವಾರ ನೋಡಯ್ಯಾ!
ಪರಮನಿರಂಜನನೆ ಮಱೆದ ಕಾಲಕ್ಕೆ ತುಂಬಿದ ಹರವಿಯ
ಕಲ್ಲು ಕೊಂಡಂತೆ, ಕೂಡಲ ಸಂಗಮದೇವಾ! ||೧೬೯||

೫೭

ಹೊಯ್ದರೆ ಹೊಯ್ಗಳು ಕೈಯ ಮೇಲೆ:
ಬಯ್ದರೆ ಬಯ್ಗಳು ಕೈಯ ಮೇಲೆ!
ಹಿಂದಣ ಜನನವೇನಾದೊಡಾಗಲಿ—
ಇಂದಿನ ಭೋಗವು ಕೈಯ ಮೇಲೆ!
ಕೂಡಲ ಸಂಗಮದೇವಯ್ಯಾ,
ನಿಮ್ಮ ಪೂಜಿಸಿದ ಫಲ ಕೈಯ ಮೇಲೆ! ||೧೭೦||

೫೮

ಆದ್ಯರ ವಚನ ಪರುಷ, ಕಂಡಣ್ಣಾ:
ಸದಾಶಿವನೆಂಬ ಲಿಂಗವ ನೆಱೆನಂಬುವುದು;
ನಂಬಲೊಡನೆ ನೀ ವಿಜಯಿ, ಕಂಡಣ್ಣಾ.
ಅಧರಕ್ಕೆ ಕಹಿ, ಉದರಕ್ಕೆ ಸಿಹಿ:
ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ. ॥ ೧೭೧ ॥

೫೯

ಹೊತ್ತಾಱೆ ಎದ್ದು ಅಗ್ಘವಣಿ ಪತ್ರೆಯ ತಂದು
ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ.
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು?
ಹೊತ್ತು ಹೋಗದ ಮುನ್ನ, ಮೃತ್ಯುವೊಯ್ಯದ ಮುನ್ನ
ತೊತ್ತುಗೆಲಸವ ಮಾಡು ಕೂಡಲ ಸಂಗಮದೇವನ. ॥ ೧೭೨ ॥

೬೦

ಅಚ್ಚಿಗವೇಕಯ್ಯ ಸಂಸಾರದೊಳಗೆ?
ನಿಚ್ಚ ನಿಚ್ಚ ಶಿವರಾತ್ರಿಯ ಮಾಡುವುದು;
ಬೇಗ ಬೇಗ ಅರ್ಚನೆ-ಪೂಜನೆಯ ಮಾಡುವುದು,
ಕೂಡಲ ಸಂಗನ ಕೂಡುವುದು. ॥ ೧೭೩ ॥

೬೧

ಅಂದು ಇಂದು ಮತ್ತೊಂದೆನಬೇಡ.
ದಿನವಿಂದೇ 'ಶಿವ ಶರಣೆಂ'ಬವಂಗೆ;
ದಿನವಿಂದೇ 'ಹರ ಶರಣೆಂ'ಬವಂಗೆ;
ದಿನವಿಂದೇ ನಮ್ಮ ಕೂಡಲ ಸಂಗನ ಮಾಣದೆ ನೆನೆವಂಗೆ. ॥೧೭೪॥

೬೨

ಅಷ್ಟವಿಧಾರ್ಚನೆ-ಷೋಡಶೋಪಚಾರವ ಮಾಡುವುದು;
ಮಾಡಿದ ಪೂಜೆಯ ನೋಡುವುದಯ್ಯಾ.
ಶಿವತತ್ತ್ವಗೀತವ ಪಾಡುವುದು;
ಶಿವನ ಮುಂದೆ ನಲಿದಾಡುವುದಯ್ಯಾ.
ಭಕ್ತಿಸಂಭಾಷಣೆಯ ಮಾಡುವುದು;
ನಮ್ಮ ಕೂಡಲ ಸಂಗಯ್ಯನ ಕೂಡುವುದು. ॥ ೧೭೫ ॥

೬೩

ಆಳಿಗೊಂಡಹರೆಂದು ಅಂಜಲದೇಕೆ?
ನಾಸ್ತಿಕವಾಡಿಹರೆಂದು ನಾಚಲದೇಕೆ?
ಆರಾದೊಡಾಗಲಿ ಶ್ರೀಮಹಾದೇವಂಗೆ ಶರಣೆನ್ನಿ.
ಏನೂ ಅಱಿಯೆನೆಂದು ಮೌನಗೊಂಡಿರಬೇಡ:
ಕೂಡಲ ಸಂಗಮದೇವರ ಮುಂದೆ 'ದಂದಣ, ದತ್ತಣ' ಎನ್ನಿ. ॥ ೧೭೬ ॥

೬೪

ಸುಪ್ರಭಾತಸಮಯದಲ್ಲಿ ಅರ್ತಿಯಲ್ಲಿ ಲಿಂಗವ ನೆನೆದರೆ
ತಪ್ಪುವುವು ಅಪಮೃತ್ಯು ಕಾಲ ಕರ್ಮಂಗಳಯ್ಯಾ!
ದೇವಪೂಜೆಯ ಮಾಟ ದುರಿತಬಂಧನದೋಟ!
ಶಂಭು ನಿಮ್ಮಯ ನೋಟ ಹೆಱಿಹಂಗದ ಕಣ್‌ಬೇಟ!
ಸದಾಸನ್ನಿಹಿತನಾಗಿ ಶರಣೆಂಬುವುದು, ನಂಬುವುದು.
ಜಂಗಮಾರ್ಚನೆಯ ಮಾಟ ಕೂಡಲ ಸಂಗನ ಕೂಟ! ॥ ೧೭೭ ॥

೬೫

ಅಂಕ ಕಳನೇಱಿ ಕೈಮಱಿದಿರ್ದೊಡೆ,
ಮಾಱಂಕ ಬಂದಿಱಿವುದ ಮಾಣ್ಬನೆ?
ನಿಮ್ಮ ನೆನಹ ಮತಿ ಮಱಿದಿರ್ದೊಡೆ,
ಪಾಪ ತನುವನಂಡಲೆವುದ ಮಾಣ್ಬುದೆ?
ಕೂಡಲ ಸಂಗಯ್ಯನ ನೆನೆದರೆ
ಪಾಪ ಉರಿಗೊಡ್ಡಿದರಗಿನಂತೆ ಕರಗುವುದಯ್ಯಾ. ॥ ೧೭೮ ॥

೬೬

ಆಡಿಹರಯ್ಯಾ ಹಾಡಿಹರಯ್ಯಾ ಮನ ಬಂದ ಪರಿಯಲಿ!
ಶಿವಶರಣರ ಮುಂದೆ ಆ[ಡಿ]ರಯ್ಯಾ ಹಾ[ಡಿ]ರಯ್ಯಾ!
ಕೋಡಂಗಿಯಾಟವನಾಡಿದ ಭಕ್ತಂಗೆ ಬೇಡಿತ್ತನೀವ
ನಮ್ಮ ಕೂಡಲ ಸಂಗಮದೇವ. || ೧೭೯ ||

೬೭

ಹೊಲಬುಗೊಂಡಱಸ ಬೇಡ, ಬಿಲಿತು ತರಬೇಡ;
ಒಲಿದೊಮ್ಮೆ 'ಶಿವ ಶರಣೆ'ನ್ನಿರಯ್ಯಾ:
ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ,
ಕೂಡಲ ಸಂಗಮದೇವ ಭಕ್ತಿಲಂಪಟನಾಗಿ. || ೧೮೦ ||

೬೮

ನಾದಪ್ರಿಯ ಶಿವನೆಂಬರು—ನಾದಪ್ರಿಯ ಶಿವನಲ್ಲವಯ್ಯಾ;
ವೇದಪ್ರಿಯ ಶಿವನೆಂಬರು—ವೇದಪ್ರಿಯ ಶಿವನಲ್ಲವಯ್ಯಾ:
ನಾದವ ಮಾಡಿದ ರಾವಳಂಗೆ ಅರೆಯಾಯುಷ್ಯವಾಯಿತ್ತು,
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು!
ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ:
ಭಕ್ತಿಪ್ರಿಯ ನಮ್ಮ ಕೂಡಲ ಸಂಗಮದೇವ. || ೧೮೧ ||

೬೯

ಹಸಿವಾದೊಡುಂಬುದನು, ಸತಿಯ ಸಂಭೋಗವನು
'ಆನಾಗಿ ನೀ ಮಾಡೆ'ಂಬವರುಂಟೆ?
ಮಾಡುವುದು, ಮಾಡುವುದು ಮನಮುಟ್ಟಿ:
ಮಾಡುವುದು, ಮಾಡುವುದು ತನುಮುಟ್ಟಿ.
ತನುಮುಟ್ಟಿ ಮನಮುಟ್ಟದಿದ್ದೊಡೆ
ಕೂಡಲ ಸಂಗಮದೇವನೆತ್ತಱಲ್ಲಿಯೂ ಮೆಚ್ಚ! || ೧೮೨ ||

೨೦

ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು
 ಬೇಱೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?
ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವನು ತಾ ಮಾಡಬೇಕಲ್ಲದೆ,
 ಬೇಱೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?
ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ,
 ನಿಮ್ಮನೆತ್ತಬಲ್ಲರು ಕೂಡಲ ಸಂಗಮದೇವಾ? ॥ ೧೮೩ ॥

೨೧

ಬಂಡಿ ತುಂಬಿದ ಪತ್ರೆಯ ತಂದು ಕಂಡ ಕಂಡಲ್ಲಿ ಮಜ್ಜನಕ್ಕೆಱೆವಿರಿ:
 ತಾಪತ್ರಯವ ಕಳೆದು ಪೂಜಿಸಿ; ತಾಪತ್ರಯವ ಲಿಂಗನೊಲ್ಲ.
ಕೂಡಲ ಸಂಗಮದೇವ ಬಱಿಯುದಕದಲ್ಲಿ ನೆನೆವನೆ? ॥ ೧೮೪ ॥

೨೨

ಭಕ್ತನಾಗಿ ಲಿಂಗ-ಜಂಗಮವ ಪೂಜಿಸಬೇಕು.
ಭಕ್ತನಾಗಿ ತನ್ನ ತಾ ಪೂಜಿಸಿಕೊಂಬುದು ಎಂತಯ್ಯಾ?
ಸ್ವಾಮಿ-ಭೃತ್ಯಸಂಬಂಧವು ಎಂತಯ್ಯಾ ಪೂರೈಸುವುದು?
ಕೂಡಲ ಸಂಗಮದೇವಾ, ಕಣ್ಣ ಕಟ್ಟಿ ಕನ್ನಡಿಯ ತೋಱುವಂತೆ!
॥ ೧೮೫ ॥

೨೩

ಭೂಮಿಯೊಳಗೆ ನಿಧಾನವಿದ್ದುದ ಅಂಜನವುಳ್ಳವರು ತೋಱುರಯ್ಯಾ.
ಅಂಜಲು ಬೇಡ, ಕಂಡಾ; ಮನದಲ್ಲಿ ಸಂದೇಹವ ಮಾಡದಿರಾ.
ಜಂಗಮದೊಳಗೆ ಲಿಂಗಯ್ಯನಿದ್ದಾನೆಂದು ನಂಬಿಗೆಯುಳ್ಳರೆ
 ತೋಱುವ ಕೂಡಲ ಸಂಗಯ್ಯ. ॥ ೧೮೬ ॥

೨೪

ಕನ್ನಡಿಯ ನೋಡುವ ಅಣ್ಣಗಳಿರಾ ಜಂಗಮವ ನೋಡಿರೇ:
 ಜಂಗಮದೊಳಗೆ ಲಿಂಗಯ್ಯ ಸನ್ನಿಹಿತನಾಗಿರ್ಪ.
'ಸ್ಥಾವರ ಜಂಗಮ ಒಂದೇ' ಎಂದುದು ಕೂಡಲ ಸಂಗನ ವಚನ
॥ ೧೮೭ ॥

೭೫

ಗೀತವ ಹಾಡಿದೊಡೇನು? ಶಾಸ್ತ್ರ–ಪುರಾಣವ ಕೇಳಿದೊಡೇನು?
ವೇದ—ವೇದಾಂತವನೋದಿದೊಡೇನು?
ಮನವೊಲಿದು ಲಿಂಗ–ಜಂಗಮವ ಪೂಜಿಸಲಱಿಯದವರು
ಎಲ್ಲಱಲಿ ಅನುಭಾವಿಯಾದೊಡೇನು?
ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ. ॥ ೧೮೮ ॥

೭೬

ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇ ಬೇಕು
ದಕ್ಕ ನುಂಗಿದಂತೆ ಬೆಱೆತುಕೊಂಡಿರಬೇಡ:
ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದಡೆ
ಬೇಡಿದ ಪದವಿಯನೀವ ಕೂಡಲ ಸಂಗಮದೇವ. ॥ ೧೮೯ ॥

೭೭

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು:
ಮರ್ಮವನಱಿಯದ ಮಾಟ ಸಯಿದಾನದ ಕೇಡು!
ಬಂದ ಸಮಯೋಚಿತವನಱಿಯದಿದ್ದರೆ
ನಿಂದಿರಲೊಲ್ಲ ಕೂಡಲ ಸಂಗಮದೇವ. ॥ ೧೯೦ ॥

೭೮

ದ್ವೈತಾದ್ವೈತವನೋದಿ ಏನ ಮಾಡುವಿರಯ್ಯಾ—
ನಮ್ಮ ಶರಣರಿಗುರಿಗರಗಾಗಿ ಕರಗದನ್ನಕ್ಕ?
ಸ್ಥಾವರ ಜಂಗಮವೊಂದೆ ಎಂದು ನಂಬದನ್ನಕ್ಕ?
ಕೂಡಲ ಸಂಗಮದೇವಾ, ಬಱಿಯ ಮಾತಿನ ಮಾಲೆಯಲೇನಹುದು?
॥ ೧೯೧ ॥

೭೯

ಲಾಂಛನ ಹೊಱಗೆ ಬಂದಿರಲು, ಒಳಗೆ ಲಿಂಗಾರ್ಚನೆ ಎಂತಯ್ಯಾ?
ಮುಖವಲ್ಲಿ ಕಟ್ಟಿದ ಕನ್ನಡಿ, ಮೂಗಿನ ಮೇಲಣ ಕತ್ತಿ!
ಸಮಯಾಚಾರವೆಂತುಟಯ್ಯಾ?
ಕೂಡಲ ಸಂಗಮದೇವಯ್ಯ ಮೂಗ ಕೊಯ್ಯದೆ ಮಾಣ್ಬನೆ? ಹೇಳಯ್ಯಾ.
॥ ೧೯೨ ॥

೮೦

ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ:
ಅದು ಬೇಡದು, ಬೆಸಗೊಳ್ಳದು—
ತಂದೊಮ್ಮೆ ನೀಡಬಹುದು.
ಕಾಡುವ ಬೇಡುವ ಜಂಗಮ ಬಂದರೆ,
ನೀಡಲು ಬಾರದು, ಕೂಡಲ ಸಂಗಮದೇವಾ ! ॥ ೧೯೩ ॥

೮೧

ಕಲ್ಲ ನಾಗರ ಕಂಡರೆ ಹಾಲನೆಱೆಯೆಂಬರು:
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ !
ಉಂಬ ಜಂಗಮ ಬಂದರೆ ನಡೆಯೆಂಬರು:
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ !
ನಮ್ಮ ಕೂಡಲ ಸಂಗನ ಶರಣರ ಕಂಡುದಾಸೀನವ ಮಾಡಿದರೆ
ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ! ॥ ೧೯೪ ॥

೮೨

ನಾಗಂಗೆ ಹೊಸತನಿಕ್ಕಹವೆಂಬರು:
ನಾಗ ಬಂದರೆ ಕೋಲ ಕಳೆದುಕೊಂಬರು !
ಆಗದಯ್ಯಾ, 'ಜಂಗಮ ಲಿಂಗ'ವೆಂಬ ಶಬ್ದವಾಗದಯ್ಯಾ,
ಕೂಡಲ ಸಂಗಮದೇವರಲ್ಲಿ ಸಿಂಧುಬಲ್ಲಾಳಂಗಲ್ಲದಾಗದಯ್ಯಾ!
॥ ೧೯೫ ॥

೮೩

ಎಱೆದರೆ ನೆನೆಯದು, ಮಱೆದರೆ ಬಾಡದು:
ಹುರುಳಿಲ್ಲ, ಹುರುಳಿಲ್ಲ ಲಿಂಗಾರ್ಚನೆ !
ಕೂಡಲ ಸಂಗಮದೇವಯ್ಯಾ,
ಜಂಗಮಕ್ಕೆಱೆದರೆ ಸ್ಥಾವರ ನೆನೆಯಿತ್ತು ! ॥ ೧೯೬ ॥

೮೪

ಅಗ್ನಿಯಾಧಾರದಲ್ಲಿ ಕಬ್ಬುನ ನೀರುಂಬುದಯ್ಯಾ:
ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯಾ;
ಜಂಗಮವಾಪ್ಯಾಯನವಾದರೆ ಲಿಂಗ ಸಂತುಷ್ಟಿಯಹುದಯ್ಯಾ:
॥ ಶ್ಲೋಕ ॥ ವೃಕ್ಷಸ್ಯ ವಪನಂ ಭೂಮಿಃ । ಸ್ಥಾವರಸ್ಯ ತು ಜಂಗಮಂ
ಅಹಂ ತುಷ್ಟೋಽಸ್ಮ್ಯಹಂ ಮಹಾದೇವಿ । ಉಭಯೋರ್ಲಿಂಗ
ಜಂಗಮಂ (?)
ಇದು ಕಾರಣ ಕೂಡಲ ಸಂಗಮದೇವರಲ್ಲಿ
ಜಂಗಮವಾಪ್ಯಾನವಾದರೆ ಲಿಂಗಸಂತುಷ್ಟಿ. ॥ ೧೯೭ ॥

೮೫

ಭಾಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ
ವಿರಹಿತ ಹೋಗಬಾರದು.
ಕಳ್ಳ ನಾಣ್ಯ ಸಲುಗೆಗೆ ಸಲ್ಲದು: ಕಳ್ಳ ನಾಣ್ಯವ ಸಲ್ಲಲೀಯರಯ್ಯಾ!
ಭಕ್ತಿಯೆಂಬ ಭಾಂಡಕ್ಕೆ ಜಂಗಮವೇ ಸುಂಕಿಗ,
ಕೂಡಲ ಸಂಗಮದೇವಾ. ॥ ೧೯೮ ॥

೮೬

ಮಾಡಿ ನೀಡಿ ಲಿಂಗವ ಪೂಜಿಸಿಹೆನೆಂಬವರೂ ನೀವೆಲ್ಲಾ ಕೇಳಿರಣ್ಣಾ:
ಹಾಗದ ಕೆರಹ ಹೊಱಗೆ ಕಳೆದು
ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ—
ತನ್ನ ಕೆಱಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲಾ!
ಧನವನಿರಿಸದಿರಾ, ಇರಿಸಿದರೆ ಭವ ಬಪ್ಪುದು, ತಪ್ಪದು!
ಕೂಡಲ ಸಂಗನ ಶರಣರಿಗೆ ಸವಿಸಲೇ ಬೇಕು. ॥ ೧೯೯ ॥

೮೭

ಉಂಡುದು ಬಂದಿತ್ತೆಂಬ ಸಂದೇಹಿ ಮಾನವಾ, ನೀ ಕೇಳಾ,
ಉಂಡುದೇನಾಯಿತ್ತೆಂಬುದ ನಿನ್ನ ನೀ ತಿಳಿದು ನೋಡಾ;
ಉಂಡುದು ಆಗಳೆ ಅಪ್ಯಯವಾಗಿತ್ತು.
ಅವುಂಡುದನುಣಬಂದ ಹಂದಿಯ ಬಾಳುವೆಯುವರ ಕಂಡು
ಆನು ಮಱುಗುವೆನಯ್ಯಾ, ಕೂಡಲ ಸಂಗಮದೇವಾ. ॥ ೨೦೦ ॥

೮೮

ಆಯುಷ್ಯವುಂಟು, ಪ್ರಳಯುವಿಲ್ಲೆಂದು ಅರ್ಥವ ಮಡುಗುವಿರಿ:
ಆಯುಷ್ಯವು ತೀರಿ ಪ್ರಳಯವು ಬಂದರೆ ಅರ್ಥವನುಂಬವರಿಲ್ಲಾ!
ನೆಲನನಗಿದು ಮಡಗದಿರಾ! ನೆಲ ನುಂಗಿದೊಡುಗುಳುವುದೆ?
ಕಣ್ಣಿನಲ್ಲಿ ನೋಡಿ, ಮಣ್ಣಿನಲ್ಲಿ ನೆರಹಿ, ಉಣ್ಣದೆ ಹೋಗದಿರಾ!
ನಿನ್ನ ಮಡದಿಗಿರಲೆಂದರೆ ನಿನ್ನಾ ಮಡದಿಯ ಕೃತಕ ಬೇಱೆ:
ನಿನ್ನೊಡಲು ಕೆಡೆಯಲು ಮತ್ತೊಬ್ಬನಲ್ಲಿಗಡಕದೆ ಮಾಣ್ಬಳೆ?
ಹೆಱರಿಗಿಕ್ಕಿ ಹೆಗ್ಗುಱಿಯಾಗ ಬೇಡಾ;
ಕೂಡಲ ಸಂಗನ ಶರಣರಿಗೊಡನೆ ಸವಿಸುವುದು. ॥ ೨೦೧ ॥

೮೯

ತನು-ಮನ-ಧನವ ಹಿಂದಿಕ್ಕಿಕೊಂಡು ಮಾತಿನ ಬಣಬೆಯ,
ಒಳಲೊಟ್ಟೆಯ ನುಡಿವರೂ ನೀವೆಲ್ಲಾ ಕೇಳಿರೇ:
ತಲಹಿಲ್ಲದ ಕೋಲು ಹೊಳ್ಳುಹಾಱುವುದಲ್ಲದೆ ಗುಱಿಯ ತಾಗಬಲ್ಲುದೆ?
ಮಾಯಾಪಾಶ ಹಿಂಗಿ ಮನದ ಗಂಟು ಬಿಡದನ್ನಕ್ಕ
ಕೂಡಲ ಸಂಗಮದೇವನೆಂತೊಲಿವನಯ್ಯಾ? ॥ ೨೦೨ ॥

೯೦

ತನು-ಮನ-ಧನವೆಂಬ ಮೂಱು ಕತ್ತಿಯಿವೆ ಸಲೆ ಮೂಗಿನ ಮೇಲಯ್ಯಾ,
ಲಿಂಗಜಂಗಮಕ್ಕೆ ಮಾಡಿಹೆನೆಂಬವಂಗೆ!
ಇದುಕಾರಣ ಕೂಡಲ ಸಂಗನ ಶರಣರಿಗೆ ಅಂಜಲೇಬೇಕು. ॥ ೨೦೩ ॥

೯೧

ಸರ್ವಭೂತಾತ್ಮನೆಂಬ ಮಾತಿನ ಮಾತಿನಲ್ಲಿ ಹೋಗದು:
ತನು-ಮನ-ಧನವ ಗುರುಲಿಂಗ ಜಂಗಮಕ್ಕೆ ಸವೆಸಲೆಬೇಕು.
ಇದುಕಾರಣ ಕೂಡಲ ಸಂಗನ ಶರಣರಿಗೆ ಅಂಜಲೇಬೇಕು. ॥೨೦೪॥

೯೨

ಹಲವು ಮಣಿಯ ಕಟ್ಟಿ ಕುಣಿಕುಣಿದಾಡಿ,
ಹಲವು ಪರಿಯಲಿ ವಿಭೂತಿಯ ಹೂಸಿ,
ಗಣಾಡಂಬರದ ನಡುವೆ ನಲಿನಲಿದಾಡಿ,
ಉಂಡು ತಾಂಬೂಲಗೊಂಡು ಹೋಹುದಲ್ಲಾ!
ತನು-ಮನ-ಧನವ ಸಮರ್ಪಿಸದವರ
ಕೂಡಲ ಸಂಗಮದೇವರೆಂತೊಲಿವನಯ್ಯಾ? ॥ ೨೦೫ ॥

೯೩

ತನುವ ಕೊಟ್ಟು ಗುರುವನೊಲಿಸಬೇಕು;
ಮನವ ಕೊಟ್ಟು ಲಿಂಗವನೊಲಿಸಬೇಕು;
ಧನವ ಕೊಟ್ಟು ಜಂಗಮವನೊಲಿಸಬೇಕು.
ಈ ತ್ರಿವಿಧವ ಹೊಱಗುಮಾಡಿ,
ಹಱೆಯ ಹೊಯಿಸಿ, ಕುಱುಹ ಪೂಜಿಸುವರ
ಮೆಚ್ಚ ಕೂಡಲ ಸಂಗಮದೇವ. ॥ ೨೦೬ ॥

೯೪

ಆಡಿದರೇನೊ, ಹಾಡಿದರೇನೊ, ಓದಿದರೇನೊ—
ತ್ರಿವಿಧದಾಸೋಹವಿಲ್ಲದನ್ನಕ್ಕ?
ಆಡದೆ ನವಿಲು? ಹಾಡದೆ ತಂತಿ? ಓದದೆ ಗಿಳಿ?
ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ. ॥ ೨೦೭ ॥

೯೫

ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ!
ವೇದ ಘನವೆಂಬೆನೆ? ಪ್ರಾಣವಧೆಯ ಹೇಳುತ್ತಿದೆ!
ಸ್ಮೃತಿ ಘನವೆಂಬೆನೆ? ಮುಂದಿಟ್ಟಱಸುತ್ತಿದೆ!
ಅಲ್ಲೆಲ್ಲಿಯೂ ನೀವಿಲ್ಲದ ಕಾರಣ, ತ್ರಿವಿಧದಾಸೋಹದಲ್ಲಲ್ಲದೆ
ಕಾಣಬಾರದು ಕೂಡಲ ಸಂಗಮದೇವನ! ॥ ೨೦೮ ॥

೯೭

ವೇದದಂತುಟಲ್ಲ, ಶಾಸ್ತ್ರದಂತುಟಲ್ಲ,
ಗೀತವಾತಿನಂತುಂಟಲ್ಲ, ಕೇಳಯ್ಯಾ—
ಮಾತಿನ ಮಾಲೆಯ ಕವುಳಗೋಲ ಶ್ರವದಲ್ಲಿ ಸತ್ತವರೊಳರೆ, ಅಯ್ಯಾ?
ದಿಟದಲಗಿನ ಕಾಳೆಗವಿತ್ತಲಿದ್ದುದೇ
ಕೂಡಲ ಸಂಗನ ಶರಣರು ಬಂದಲ್ಲಿ! || ೨೦೯ ||

೯೭

ಮಾತಿನ ಮಾತಿನಲ್ಲಪ್ಪುದೆ ಭಕ್ತಿ?
ಮಾಡಿ ತನು ಸವೆಯದನ್ನಕ್ಕ, ಮನ ಸವೆಯದನ್ನಕ್ಕ,
ಧನ ಸವೆಯದನ್ನಕ್ಕ ಅಪ್ಪುದೇ ಭಕ್ತಿ?
ಕೂಡಲ ಸಂಗಮದೇವ ಎಲುದೋಱಿ ಸರಸವಾಡುವನು,
ಸೈರಿಸದನ್ನಕ್ಕ ಅಪ್ಪುದೇ ಭಕ್ತಿ? || ೨೧೦ ||

೯೮

ಹಾವಸೆಗಲ್ಲ ಮೆಟ್ಟಿ ಹರಿದು ಗೊತ್ತ ಮುಟ್ಟಬಾರದಯ್ಯಾ:
ನುಡಿದಂತೆ ನಡೆಯಲು ಬಾರದಯ್ಯಾ.
ಕೂಡಲ ಸಂಗನ ಶರಣರ ಭಕ್ತಿ ಬಾಳ ಬಾಯ ಧಾರೆ! || ೨೧೧ ||

೯೯

ಭಕ್ತಿಯೆಂಬುದ ಮಾಡಬಾರದು:
ಕರಗಸದಂತೆ ಹೋಗುತ್ತ ಕೊಯ್ವುದು ಬರುತ್ತ ಕೊಯ್ವುದು!
ಘಟಸರ್ಪನಲ್ಲಿ ಕೈದುಡುಕಿದರೆ ಹಿಡಿವುದ ಮಾಣ್ಬುದೆ,
ಕೂಡಲ ಸಂಗಮದೇವಾ? || ೨೧೨ ||

೧೦೦

ಹಲವು ಕಾಲ ಧಾವತಿಗೊಂಡು ಒಟ್ಟಿದ ಹಿದಿರೆಯು
ಒಂದು ಮಿಡುಕುಱಲ್ಲಿ ಬೇವಂತೆ,
ಸಲೆ ನೆಲೆ ಸನ್ನಿಹಿತನಾಗಿರ್ಪ ಶರಣನ ಭಕ್ತಿ
ಒಂದನಾಯತದಿಂದೆ ಕೆಡುವುದು,

ಸ್ವಧರ್ಮದಲ್ಲಿ ಗಳಿಸಿದ ಪಿತನ ಧನವ
ಅಧರ್ಮದಲ್ಲಿ ಕೆಡಿಸುವ ಸುತನಂತೆ—
ಶಿವನ ಸೊಮ್ಮ ಶಿವಂಗೆ ಮಾಡದೆ, ಅನ್ಯಕ್ಕೆ ಮಾಡಿದೊಡೆ,
ತನ್ನ ಭಕ್ತಿ ತನ್ನನೇ ಕೆಡಿಸುವದು,
ಕೂಡಲ ಸಂಗಮದೇವಾ. || ೨೧೩ ||

೧೦೧

ನಚ್ಚಿದೆನೆಂದರೆ, ಮಚ್ಚಿದೆನೆಂದರೆ, ಸಲೆ ಮಾಱುವೋದೆನೆಂದರೆ
ತನುವನಲ್ಲಾಡಿಸಿ ನೋಡುವೆ ನೀನು,
ಮನವನಲ್ಲಾಡಿಸಿ ನೋಡುವೆ ನೀನು
ಧನವನಲ್ಲಾಡಿಸಿ ನೋಡುವೆ ನೀನು.
ಇವಕ್ಕೆಲ್ಲಿ ಅಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲ ಸಂಗಮದೇವ!
|| ೨೧೪ ||

೧೦೨

ಕೌಳುಗೋಲ ಹಿಡಿದು ಶ್ರವವ ಮಾಡಬಹುದಲ್ಲದೆ
ಕಳನೇಱಿ ಕಾದುವುದರಿದು ನೋಡಾ.
ಬಣ್ಣವಿಟ್ಟು ನುಡಿವಲ್ಲಿ ಫಲವೇನು?
ಚಿನ್ನಗೆಯ್ಕನಾಡುವನಂತೆ!
ಬಂದ ಸಮಯವನಱಿತು ಇದ್ದುದ ವಂಚಿಸದಿದ್ದಡೆ,
ಕೂಡಲ ಸಂಗಮದೇವನೊಲಿದು ಸಲಹುವ. || ೨೧೫ ||

೧೦೩*

ಧನಕ್ಕೆ ಮನವನೊಡ್ಡಿದರೇನು? ಮನಕ್ಕೆ ಧನವನೊಡ್ಡಿದರೇನು?
ತನು-ಮನ-ಧನವ ಮೀಱಿ ಮಾತಾಡಬಲ್ಲರೆ,
ಆತ ನಿಸ್ಸೀಮನು; ಆತ ನಿಜೈಕ್ಯನು.
ತನು-ಮನ-ಧನವನುವಾದರೆ ಕೂಡಲ ಸಂಗಮದೇವನೊಲಿವ. ||೨೧೬||

---

* ಈ ವಚನ ತಾ ೨, ರಲ್ಲಿ ಮಾತ್ರವಿದೆ.

೧೦೪

ಅರ್ಥಪ್ರಾಣಾಭಿಮಾನದಲ್ಲಿ ವಂಚನೆಯಿಲ್ಲದ ಭಕ್ತಿ ಸಮ್ಯಾಚಾರ
ಜಂಗಮವೇ ಲಿಂಗವೆಂಬುದಕ್ಕೆ ಏನು ಗುಣ,
  ಮನದ ಲಂಪಟತನ ಹಿಂಗದಾಗಿ?
ಒಡೆಯರ ಬರವಿಂಗೆ ಕುನ್ನಿ ಬಾಲಬಡಿದರೆ
  ವೆಚ್ಚವೇನು ಹತ್ತುವುದು, ಕೂಡಲ ಸಂಗಮದೇವಾ? ॥ ೨೧೭ ॥

೧೦೫

ಹಸಿದು ಬಂದ ಗಂಡನಿಗೆ ಉಣಲಿಕ್ಕದೆ
  ಬಡವಾದನೆಂದು ಮಱುಗುವ ಸತಿಯ ಸ್ನೇಹದಂತೆ—
  ಬಂದುದನಱಿಯಳು, ಇದ್ದುದ ಸವಿಸಳು!
ದುಃಖವಿಲ್ಲದ ಅಕ್ಕೆ ಹಗರಣಿಗನ ತೆಱನಂತೆ
  ಕೂಡಲ ಸಂಗಮದೇವಾ! ॥ ೨೧೮ ॥

೧೦೬

ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತ್ತು:
  ಮಧ್ಯಾಹ್ನದ ಬಿಸಿಲು ಅಂಗಕ್ಕೆ ಕರಕಠಿಣವಾಯಿತ್ತು!
ಮೊದಲಲ್ಲಿ ಲಿಂಗಭಕ್ತಿ ಹಿತವಾಯಿತ್ತು:
  ಕಡೆಯಲ್ಲಿ ಜಂಗಮಭಕ್ತಿ ಕಠಿಣವಾಯಿತ್ತು!
ಇದು ಕಾರಣ ಕೂಡಲ ಸಂಗಮದೇವನವರ ಬಲ್ಲನಾಗಿ ಒಲ್ಲನಯ್ಯಾ.
॥ ॥೨೧೯ ॥

೧೦೭

ಬರಬರ ಭಕ್ತಿಯುರೆಯಾಯಿತ್ತು, ಕಾಣಿರಣ್ಣಾ :
  ಮೊದಲ ದಿನ ಹಣೆಮುಟ್ಟಿ, ಮಱುದಿನ ಕೈಯ ಮುಟ್ಟಿ
  ಮೂಱೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ!
ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ;
  ಅಲ್ಲದಿದ್ದರೆ, ನಡುನೀರಲ್ಲದ್ದುವ ನಮ್ಮ ಕೂಡಲ ಸಂಗಮದೇವ.
॥ ೨೨೦ ॥

೧೦೮

ಬಿದಿರಲಂದಣವಕ್ಕು, ಬಿದಿರೆ ಸತ್ತಿಗೆಯಕ್ಕು,
ಬಿದಿರಲ್ಲಿ ಗುಡಿಯು ಗೂಡಾರವಕ್ಕು;
ಬಿದಿರಲ್ಲಿ ಸಕಲಸಂಪದವೆಲ್ಲವು!
ಬಿದಿರದವರ ಮೆಚ್ಚ ನಮ್ಮ ಕೂಡಲ ಸಂಗಮದೇವ. ॥ ೨೨೧ ॥

೧೦೯

ಉಂಬಾಗಳಿಲ್ಲೆನ್ನ, ಉಡುವಾಗಳಿಲ್ಲೆನ್ನ,
ಬಂಧುಗಳು ಬಂದಾಗಳಿಲ್ಲೆನ್ನ:
ಲಿಂಗಕ್ಕೆ ಇಲ್ಲೆಂಬ, ಜಂಗಮಕ್ಕೆ ಇಲ್ಲೆಂಬ,
ಬಂದ ಪುರಾತರಿಗೆ ಇಲ್ಲೆಂಬ:
ಸಾವಾಗ ದೇಹವ ದೇಗುಲಕ್ಕೊಯ್ಯೆಂಬ!
ದೇವರಿಗೆ ಹೆಣ ಬಿಟ್ಟ ಹೇಳಿತ್ತೆ, ಕೂಡಲ ಸಂಗಮದೇವಾ! ॥ ೨೨೨ ॥

೧೧೦

ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್‌ಪಾತ್ರಕ್ಕೆ ಸಲ್ಲದಯ್ಯಾ
ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ!
ನಮ್ಮ ಕೂಡಲ ಸಂಗನ ಶರಣರಿಗಲ್ಲದೆ
ಮಾಡುವ ಅರ್ಥ ವ್ಯರ್ಥ, ಕಂಡಯ್ಯಾ! ॥ ೨೨೩ ॥

೧೧೧

ಬಲಿಯ ಭೂಮಿ, ಕರ್ಣನ ಕವಚ, ಖಚರನ ಅಸ್ಥಿ,
ಶಿಬಿಯ ಮಾಂಸ ವೃಥಾ ಹೋಯಿತ್ತಲ್ಲಾ!
॥ಶ್ಲೋಕ॥ ಶಿವಭಕ್ತಿಮತಿಕ್ರಮ್ಯ । ಯದ್ ದಾನಂಚ ವಿಧಿಯತೇ
ನಿಷ್ಫಲಂತು ಭವೇದ್ ದಾನಂ। ರೌರವಂ ನರಕಂ ವ್ರಜೇತ್
ಇಂತೆಂದುದಾಗಿ, ಕೂಡಲ ಸಂಗನ ಶರಣರನಱಿಯದೆ
ಕೀರ್ತಿವಾರ್ತೆಗೆ ಮಾಡಿದವನ ಧನವು ವೃಥಾ ಹೋಯಿತ್ತಲ್ಲಾ!
॥ ೨೨೪ ॥

೧೧೨

ಹತ್ತು ಮತ್ತರದ ಭೂಮಿ, ಬತ್ತುವ ಹಯನು, ಸಂಪಾದೀವಿಗೆಯ
ನಡೆಸಿಹೆವೆಂಬವರ ಮುಖವ ನೋಡಲಾಗದು;
ಅವರ ನುಡಿಯ ಕೇಳಲಾಗದು.
ಅಂಡಜ, ಸ್ವೇದಜ, ಉದ್ಭಿಜ, ಜರಾಯುಜರೆಂಬ ಪ್ರಾಣಿಗಳಿಗೆ
ಭವಿತವ್ಯವ ಕೊಟ್ಟವರಾರೊ ?
ಒಡೆಯರಿಗೆ ಉಂಡಲಿಗೆಯ ಮುಱಿದಿಕ್ಕಿದಂತೆ
"ಎನ್ನಿಂದಲೆ ಆಯಿತ್ತು, ಎನ್ನಿಂದಲೆ ಹೋಯಿತ್ತು"
ಎಂಬವನ ಬಾಯಲ್ಲಿ ಮೆಟ್ಟ ಹುಡಿಯ ಹೊಯ್ಯದೆ ಮಾಣ್ಬನೆ
ಕೂಡಲ ಸಂಗಮದೇವ? || ೨೨೫ ||

೧೧೩

ಅನವರತ ಮಾಡಿಹೆನೆಂದು ಉಪ್ಪರ-ಗುಡಿಯ ಕಟ್ಟಿ ಮಾಡುವ
ಭಕ್ತನ ಮನೆಯದು ಅಂದಣಗಿತ್ತಿಯ ಮನೆ!
ಸರ್ವಜೀವದಯಾಪಾರಿಯೆಂದು ಭೂತದಯಕ್ಕಿಕ್ಕುವವನ ಮನೆ
ಸಯಿಧಾನದ ಕೇಡು!
ಸೂಳೆಯ ಮಗ ಮಾಳವ ಮಾಡಿದರೆ ತಾಯ ಹೆಸರಾಯಿತ್ತಲ್ಲದೆ
ತಂದೆಯ ಹೆಸರಿಲ್ಲಾ, ಕೂಡಲ ಸಂಗಮದೇವಾ! || ೨೨೬ ||

೧೧೪

ಕಾಳಾಗ್ನಿರುದ್ರನ ಮೇಳಾಪವನಱಿಯದವರು
'ಕಾಳು ಬೇಳೆ'ಯೆನುತಿಪ್ಪರಯ್ಯಾ.
ಕಾನನದಡವಿಯಲ್ಲಿ ಕಿಚ್ಚು ಬಾಳುವೆಯಾಗಿ ಮಿಕ್ಕೊಡೆ ಒಱಲುವ
ಬಳ್ಳುವಿನಂತಿಪ್ಪರಯ್ಯಾ ಮನುಜರು ನರವಿಂಧ್ಯದೊಳಗೆ. !
ತತ್ಕಾಲಪ್ರೇಮವನಱಿಯದೆ ವಿಭವಕ್ಕೆ ಮಾಡಿದವನ ಭಕ್ತಿ
ಇರುಳು ಸತ್ತಿಗೆಯ ಹಿಡಿಸಿಕೊಂಡಂತೆ,
ಕೂಡಲ ಸಂಗಮದೇವಾ! || ೨೨೭ ||

೧೧೫

ಹರಸಿ ಮಾಡುವುದು ಹರಕೆಯ ದಂಡ:
  ನೆರಹಿ ಮಾಡುವುದು ಡಂಭಿನ ಭಕ್ತಿ.
ಹರಸಬೇಡ, ನೆರಹಬೇಡ,
  ಬಂದ ಭೆರವನಱಿದರೆ ಕೂಡಿಕೊಂಡಿಪ್ಪ
  ನಮ್ಮ ಕೂಡಲ ಸಂಗಮದೇವ. || ೨೨೮ ||

೧೧೬

ಹಡೆದೊಡವೆ-ವಸ್ತುವನು ಮೃಡಭಕ್ತರಿಗಲ್ಲದೆ
  ಕಡಬಡ್ಡಿಯ ಕೊಡಲಾಗದು.
ಬಂದರೊಂದು ಲೇಸು, ಬಾರದಿದ್ದರೆರೆಡು ಲೇಸು !
ಅಲ್ಲಿದ್ದರೆಯೂ ಲಿಂಗಕ್ಕೆ ಜೋನ; ಇಲ್ಲಿದ್ದರೆಯೂ ಲಿಂಗಕ್ಕೆ ಜೋನ.
ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ
  ಬಂದಿತ್ತೆಂಬ ಪರಿಣಾಮವಿಲ್ಲ, ಬಾರದೆಂಬ ದುಃಖವಿಲ್ಲ.
ಇದುಕಾರಣ, ಕೂಡಲ ಸಂಗಮದೇವಾ,
  ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು. || ೨೨೯ ||

೧೧೭

ಓಡಲಾಱದ ಮೃಗವು ಸೊಣಗಂಗೆ ಮಾಂಸವ ಕೊಡುವಂತೆ –
  ಮಾಡಲಾಗದು ಭಕ್ತನು, ಕೊಳಲಾಗದು ಜಂಗಮು.
ಹಿರಿಯರು ನರಮಾಂಸವ ಭುಂಜಿಸುವರೆ ?
ತನುವುಕ್ಕಿ ಮನವುಕ್ಕಿ ಮಾಡಬೇಕು ಭಕ್ತಿಯ,
  ಮಾಡಿಸಿ ಕೊಳ್ಳಬೇಕು ಜಂಗಮು, ಕೂಡಲ ಸಂಗಮದೇವಾ. ||೨೩೦||

೧೧೮

ಬಂದುದ ಕೈಕೊಳ್ಳಬಲ್ಲರೆ ನೇಮ,
  ಇದ್ದುದ ವಂಚನೆ ಮಾಡದಿದ್ದರೆ ಅದು ನೇಮ;
  ನಡೆದು ತಪ್ಪದಿದ್ದರೆ ನೇಮ, ನುಡಿದು ಹುಸಿಯದಿದ್ದರೆ ನೇಮ.
ನಮ್ಮ ಕೂಡಲ ಸಂಗನ ಶರಣರು ಬಂದರೆ
  ಒಡೆಯರಿಗೊಡವೆಯನೊಪ್ಪಿಸುವುದೇ ನೇಮ. || ೨೩೧ ||

೧೧೯

ಹಾಲ ನೇಮ, ಹಾಲ ಕೆನೆಯ ನೇಮ:
ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ;
ಬೆಣ್ಣೆಯ ನೇಮ, ಬೆಲ್ಲದ ನೇಮ!
ಅಂಬಲಿಯ ನೇಮದವರನಾರನೂ ಕಾಣೆ:
ಕೂಡಲ ಸಂಗನ ಶರಣರಲ್ಲಿ
ಅಂಬಲಿಯ ನೇಮದಾತ ಮಾದಾರ ಚೆನ್ನಯ್ಯ. || ೨೩೨ ||

೧೨೦

ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ;
ನೀಡಿ ನೀಡಿ ಕೆಟ್ಟರು ಮನವಿಲ್ಲದೆ;
ಮಾಡುವ ನೀಡುವ ನಿಜಗುಣವುಳ್ಳರೆ
ಕೂಡಿ ಕೊಂಬ ನಮ್ಮ ಕೂಡಲ ಸಂಗಮದೇವ. || ೨೩೩ |

೧೨೧

ಮಾಡಿದೆನೆಂಬುದು ಮನದಲ್ಲಿ ಹೊಳೆದರೆ,
ಏಡಿಸಿ ಕಾಡಿತ್ತು ಶಿವನ ಡಂಗುರ!
ಮಾಡಿದೆನೆನ್ನದಿರಾ ಲಿಂಗಕ್ಕೆ, ಮಾಡಿದೆನೆನ್ನದಿರಾ ಜಂಗಮಕ್ಕೆ.
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ,
ಬೇಡಿತ್ತನೀವ ಕೂಡಲ ಸಂಗಮದೇವ. || ೨೩೪ ||

೧೨೨

ಕಳಬೇಡ, ಕೊಲಬೇಡ; ಹುಸಿಯ ನುಡಿಯಲು ಬೇಡ;
ಮುನಿಯ ಬೇಡ, ಅನ್ಯರಿಗೆ ಅಸಹ್ಯಬಡಬೇಡ;
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ.
ಇದೆ ಅಂತರಂಗ ಶುದ್ಧಿ,ಇದೇಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ! (||೨೩೫||)

೧೨೩

ಕೆಡೆನಡೆಯದೆ, ಕೆಡೆನುಡಿಯದೆ, ಅನ್ಯರ ಪ್ರತಿಪಾದಿಸದಿದ್ದರೆ
ಏನ ಮಾಡನಯ್ಯಾ ಲಿಂಗವು, ಏನ ಕೊಡನಯ್ಯಾ ತಾನು?
ಏನ ಬೇಡಿದುದನೀವನಾಗಿ ನಂಬಿಗೆಯುಳ್ಳ ಶಿವಭಕ್ತಂಗೆ,
ಇದೇ ದಿಬ್ಯ, ಕೂಡಲ ಸಂಗಮದೇವಾ. || ೨೩೬ ||

೧೨೪

ಸ್ವಾಮಿಭೃತ್ಯಸಂಬಂಧಕ್ಕೆ ಆವುದು ಪದವೆಂದರೆ:
ದಿಟವ ನುಡಿವುದು, ನುಡಿದಂತೆ ನಡೆವುದು.
ನುಡಿದು ಹುಸಿವ, ನಡೆದು ತಪ್ಪುವ
ಪ್ರಪಂಚಿಯನೊಲ್ಲ ಕೂಡಲ ಸಂಗಮದೇವ. || ೨೩೭ ||

೧೨೫

ಸತ್ಯವುಳ್ಳ ಭಂಡವ ತುಂಬುವುದಯ್ಯಾ!
ಸಯಿಧಾನ, ಸಯಿಧಾನವಯ್ಯಾ:
—ಮನ ಧಾರೆವಟ್ಟಲು!
ಕೂಡಲ ಸಂಗನ ಶರಣರು ಹಿಡಿಯದ ಭಂಡವನು
ಆರಾದೊಡಾಗಲಿ ಹೋಗಲೀಯರಯ್ಯಾ. || ೨೩೮ ||

೧೨೬

ದೇವಲೋಕ ಮರ್ತ್ಯಲೋಕವೆಂಬುದು ಬೇಱಿಲ್ಲ, ಕಾಣಿ ಭೋ!
ಸತ್ಯವ ನುಡಿವುದೆ ದೇವಲೋಕ; ಮಿಥ್ಯವ ನುಡಿವುದೆ ಮರ್ತ್ಯಲೋಕ!
ಆಚಾರವೇ ಸ್ವರ್ಗ, ಅನಾಚಾರವೇ ನರಕ—
ಕೂಡಲ ಸಂಗಮದೇವಾ, ನೀವೇ ಪ್ರಮಾಣು! || ೨೩೯ ||

೧೨೭

ಪುಣ್ಯ ಪಾಪವೆಂಬುವು ತಮ್ಮಿಷ್ಟ ಕಂಡಿರೇ:
'ಅಯ್ಯಾ' ಎಂದಡೆ ಸ್ವರ್ಗ: 'ಎಲೆವೋ' ಎಂದಡೆ ನರಕ!
'ದೇವಾ, ಭಕ್ತ ಜಯಾ, ಜೀಯಾ' ಎಂಬ ನುಡಿಯೊಳಗೆ
ಕೈಲಾಸವಿದ್ದುದೇ, ಕೂಡಲ ಸಂಗಮದೇವಾ. || ೨೪೦ ||

೧೨೮

'ಏನಿ ಬಂದಿರಿ, ಹದುಳವಿದ್ದಿರೆ?' ಎಂದರೆ
ನಿಮ್ಮ ವೈಸಿರಿ ಹಾರಿಹೋಹುದೆ?
'ಕುಳ್ಳಿರೆಂ'ದರೆ ನೆಲ ಕುಳಿಹೋಹುದೆ?
ಒಡನೆ ನುಡಿದರೆ ಶಿರ-ಹೊಟ್ಟೆಯೊಡೆವುದೆ?
ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿರ್ದಡೆ,
ಕೆಡಹಿ ಮೂಗ ಕೊಯ್ಯದೆ ಮಾಬ್ಬನೆ ಕೂಡಲ ಸಂಗಮದೇವನು?

|| ೨೪೧ ||

೧೨೯

ಸಂಸಾರದಲ್ಲಿ ಹುಟ್ಟಿ ಮತ್ತೊಂದ ಬಯಸಲೇಕಯ್ಯಾ?
ನಗುವುದು, ನುಡಿವುದು ಶಿವಭಕ್ತರೊಡನೆ.
ಸುಮ್ಮಾನ ಹಮ್ಮು ಬಿಮ್ಮಾಗಿರಲೇಕಯ್ಯಾ?

|| ಶ್ಲೋಕ || ಅಭ್ಯಾಸಸ್ಯ ವಿಹೀನಸ್ಯ । ತಸ್ಯ ಜನ್ಮ ನಿರರ್ಥಕಂ ।
ಗುರೋರಪಿ ಸಮಂ ಹಾಸ್ಯಂ । ಕರ್ತವ್ಯಂ ಕುಟಿಲಂ ವಿನಾ ||

ನಮ್ಮ ಕೂಡಲ ಸಂಗನ ಶರಣರೊಡನೆ
ಮನದೆರೆದು ಮಾತನಾಡುವುದಯ್ಯಾ. || ೨೪೨ ||

೧೩೦

ಭಕ್ತಿಯೆಂಬ ನಿಧಾನವ ಸಾಧಿಸುವರೆ,
ಶಿವಪ್ರೇಮವೆಂಬಂಜನವ ನೆಚ್ಚಿಕೊಂಬುದು.
ಭಕ್ತನಾದವಂಗೆ ಇದೆ ಪಥವಾಗಿರಬೇಕು.
ನಿಮ್ಮ ಕೂಡಲ ಸಂಗನ ಶರಣರನುಭಾವ ಗಜವೈದ್ಯವಯ್ಯಾ. || ೨೪೩ ||

೧೩೧

ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ:
ಮೃದುವಚನವೇ ಸಕಲಜಪಂಗಳಯ್ಯಾ,
ಮೃದುವಚನವೇ ಸಕಲತಪಂಗಳಯ್ಯಾ,
ಸದುವಿನಯವೇ ಸದಾಶಿವನೊಲಿಮೆಯಯ್ಯಾ,—
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ. || ೨೪೪ ||

೧೩೨

‘ಇತ್ತ ಬಾರಯ್ಯಾ ಇತ್ತ ಬಾರಯ್ಯಾ’ ಎಂದು
ಭಕ್ತರೆಲ್ಲರೂ ಕೂರ್ತು ಹತ್ತೆ ಕರೆಯುತಿರೆ,
ಮತ್ತೆ ಕೆಲಕ್ಕೆ ಹೋಗಿ, ಶರಣೆಂದು ಹಸ್ತ-ಬಾಯನೆ ಮುಚ್ಚಿ,
ಕಿಱಿದಾಗಿ ಭೃತ್ಯಾಚಾರವ ನುಡಿದು,
ವಿನಯವದ್ಧ್ಯಾನವುಳ್ಳರೆ
ಎತ್ತಿಕೊಂಬನಯ್ಯಾ ಕೂಡಲ ಸಂಗಮದೇವ ಪ್ರಮಥರ ಮುಂದೆ.
|| ೨೪೫ ||

೧೩೩

ಭಕ್ತ ಭಕ್ತನ ಮನೆಗೆ ಬಂದರೆ ಭೃತ್ಯಾಚಾರವ ಮಾಡಬೇಕು:
ಕರ್ತನಾಗಿ ಕಾಲ ತೊಳೆಯಿಸಿಕೊಂಡರೆ,
ಹಿಂದೆ ಮಾಡಿದ ಭಕ್ತಿಗೆ ಹಾನಿ!
ಲಕ್ಷಗಾವುದ ದಾರಿಯ ಹೋಗಿ
ಭಕ್ತನು ಭಕ್ತನ ಕಾಂಬುದು ಸದಾಚಾರ;
ಅಲ್ಲಿ ಕೂಡಿ ದಾಸೋಹವ ಮಾಡಿದರೆ
ಕೂಡಿ ಕೊಂಬನು ನಮ್ಮ ಕೂಡಲ ಸಂಗಮದೇವನು. || ೨೪೬ ||

೧೩೪

ದಯವಿಲ್ಲದ ಧರ್ಮವದೇವುದಯ್ಯಾ?
ದಯವೇ ಬೇಕು ಸಕಲಪ್ರಾಣಿಗಳೆಲ್ಲಱಲ್ಲಿಯೂ;
ದಯವೇ ಧರ್ಮದ ಮೂಲವಯ್ಯಾ:
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ. || ೨೪೭ ||

೧೩೫

ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯಾ?
ತನಗಾದ ಆಗೇನು? ಅವರಿಗಾದ ಚೇಗೇನು?
ತನುವಿನ ಕೋಪ ತನ್ನ ಹಿರಿಯತನದ ಕೇಡು;
ಮನದ ಕೋಪ ತನ್ನಱಿಹಿನ ಕೇಡು.
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡುವುದೆ, ಕೂಡಲ ಸಂಗಮದೇವಾ? || ೨೪೮ ||

೧೩೬

ಅರ್ಥಕ್ಕೆ ತಪ್ಪಿದರೇನು? ಪ್ರಾಣಕ್ಕೆ ತಪ್ಪಿದರೇನು?
ಅಭಿಮಾನಕ್ಕೆ ತಪ್ಪಿದರೇನು?
ಶರಣರು ಶರಣರಲ್ಲಿ ಗುಣವನಱಸುವರೆ?
ಕೂಡಲ ಸಂಗನ ಶರಣರು ನೊಂದು ಸೈರಿಸಬೇಕು. ॥ ೨೪೯ ॥

## (೧೦) ಭಕ್ತಸ್ಥಲ

೧

ಕಾಣದ ಠಾವಿನಲಿ ಜಱದರೆಂದರೆ, ಕೇಳಿ ಪರಿಣಾಮಿಸಬೇಕು.
ಅದೇನು ಕಾರಣ? ಕೊಳ್ಳದೆ ಕೊಡದೆ ಅವರಿಗೆ ಸಂತೋಷವಹುದಾಗಿ!
ಎನ್ನ ಮನದ ತದ್ದ್ವೇಷವಳಿದು ನಿಮ್ಮ ಶರಣರಿಗೆ
ಶರಣೆಂಬುದ ಕರುಣಿಸು, ಕೂಡಲ ಸಂಗಮದೇವಾ. ॥ ೨೫೦ ॥

೨

ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ;
ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ;
ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ,
ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲುಹು,
ಕೂಡಲ ಸಂಗಮದೇವಾ! ॥ ೨೫೧ ॥

೩

॥ ಶ್ಲೋಕ ॥ ವೇದಾದಿ ನಾಮ ನಿರ್ನಾಮಂ। ಮಹತ್ವಂ ಮಹದೀಶ್ವರಂ
ಗುರೂಕ್ತಮಂತ್ರಮಾರ್ಗೇಣ। ಇಷ್ಟಲಿಂಗಂ ತು ಶಂಕರೀ
ಎಂದುದಾಗಿ, ವಚನಪಾತಕವೆನ್ನ, ವಚನದೋಷಂಗಳೆನ್ನ,
ಕಾಡಿ ಕಾಡಿ ಕೆಡಿಸಿಹುವೆನ್ನ, ಕೂಡಲ ಸಂಗಮದೇವಾ,
ಅಹಮ್ಮೆಂಬ ಅಹಂಕಾರವೆನ್ನ! ॥ ೨೫೨ ॥

೪

ಅವರಿವರೆನ್ನದೆ ಚರಣಕ್ಕೆಱಗಲು ಅಯ್ಯತನವೇಱಿ
ಬೆಬ್ಬನೆ ಬೆಱೆವೆ ನಾನು: ಕೆಚ್ಚು ಬೆಳೆಯಿತ್ತಯ್ಯಾ !
ಆ ಕೆಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳ್ಳುಕನ ಮಾಡಿ
ಬೆಳುಗಾರದಂತೆ ಮಾಡು, ಕೂಡಲ ಸಂಗಮದೇವಾ. || ೨೫೩ ||

೫

ನಡೆಯ ಕಂಡಾ, ನಂಬಿ: ನುಡಿಯಲ್ಲಾ ಉಪಚಾರ !
ಮಿಗಿಲೊಂದು ಮಾತು ಬಂದರೆ ಸೈರಿಸಲಾಱೆನು;
ತುಯ್ಯಲಾದರೆ ಉಂಬೆ; ಹುಯ್ಯಲಾದರೆ ಓಡುವೆ !
ಆಳು ಬೇಡಿದಡೆ ಆಳ್ದನೇನನೀ[ಯ]ನಯ್ಯಾ ?
ಆಳಾಗಿ ಹೊಕ್ಕು ಅರಸನಾಗಿ ನಡೆದರೆ,
ಆಳಿಗೊಂಡಿತ್ತೆನ್ನ ಕೂಡಲ ಸಂಗನ ಭಕ್ತಿ ! || ೨೫೪ ||

೬

ಇಱಿಸಿಕೊಂಡು ಭಕ್ತರಾದರೆಮ್ಮವರು;
ತಱಿಸಿಕೊಂಡು ಭಕ್ತರಾದರೆಮ್ಮವರು;
ಕೊಱೆಯಿಸಿಕೊಂಡು ಭಕ್ತರಾದರೆಮ್ಮವರು;
ಜಱೆಯಿಸಿಕೊಂಡು ಭಕ್ತರಾದರೆಮ್ಮವರು;
ಕೂಡಲ ಸಂಗನ ಶರಣರಿಗೆ ಮುಳಿಸ ತಾಳಿ
ಎನ್ನ ಭಕ್ತಿ ಅರೆಯಾಯಿತ್ತು ! || ೨೫೫ ||

೭

ಮನಕ್ಕೆ ನಾಚದ ವಚನ, ವಚನಕ್ಕೆ ನಾಚದ ಮನ !
ಕುಂದ ಹೆಚ್ಚ ನುಡಿವೆ,
ಒಂದು ಮಾತಿನ ಗೆಲ್ಲ-ಸೋಲಕ್ಕೆ ಹಿಡದು ಹೋರುವೆ:
ಕೂಡಲ ಸಂಗನ ಶರಣರೆನ್ನಾಳ್ದರೆಂಬೆ ! || ೨೫೬ ||

೮

ಇಲ್ಲವೆಯ ಮೇಲೆ ಕಂಚೊಡೆದಂತೆ, ಬಡಮನವೆನ್ನ ಕಾಡಿತ್ತಯ್ಯಾ;
ಮತಿಯಿಲ್ಲದ ಮರುಳ ನಾನಯ್ಯಾ; ಭಕ್ತಿಯಿಲ್ಲದ ಬಡವ ನಾನು;
ನಿಮ್ಮ ನೆನಹವಿಲ್ಲದೆ ನಿರ್ಭಾಗ್ಯನಾದೆ,
ಎನಗೆ ನೀ ಕರುಣಿಸಾ, ಕೂಡಲ ಸಂಗಮದೇವಾ! || ೨೫೭ ||

೯

ಲಿಂಗವ ನಚ್ಚದೀ ಮನವು, ಜಂಗಮವ ನಂಬದೀ ಮನವು;
ಕೂಪರ ಕಂಡರೆ ಒಲ್ಲದೀ ಮನವು.
ಈ ಮನದ ಭ್ರಮೆಯನೆಲ್ಲವ ಮಱಿಸಿ,
ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು,
ಕೂಡಲ ಸಂಗಮದೇವಾ. || ೨೫೮ ||

೧೦

ಅಶನ ಕುಂದದು, ವ್ಯಸನ ಮಾಣದು;
ಆರತವಡಗದು, ಬೆವಹಾರವುಡುಗದು:
ಮಜ್ಜನಕ್ಕೆಱಿವೆನಯ್ಯಾ, ಕಾಯವಿಕಾರಿಯಾನು;
ಮಜ್ಜನಕ್ಕೆಱಿವೆನಯ್ಯಾ, ಜೀವವಿಕಾರಯಾನು;
ಮಜ್ಜನಕ್ಕೆಱಿವೆನಯ್ಯಾ: ಶರಣನಲ್ಲ, ಲಿಂಗೈಕ್ಯನಲ್ಲಾ!
ಕೂಡಲ ಸಂಗಮದೇವರಲ್ಲಿ ಅಂತರಬೆಂತಱಿ ನಾನಯ್ಯಾ! ||೨೫೯||

೧೧

ಕುದುರನೇಸು ತೊಳೆದರೆಯೂ ಕೆಸಱು ಮಾಣ್ಬುದೆ?
ಎನ್ನ ಕಾಯದೊಳುಳ್ಳವಗುಣಂಗಳ ಕಳೆದು ಕೃಪೆಯ ಮಾಡಯ್ಯಾ.
ಕಂಬಳಿಯಲ್ಲಿ ಕಣಕವ ನಾದಿದಂತೆ, ಕಾಣರೇ, ಎನ್ನ ಮನ!
ಕೂಡಲ ಸಂಗಮದೇವಾ, ನಿಮಗೆ ಶರಣೆಂದು ಶುದ್ಧ ಕಾಣಯ್ಯಾ.
|| ೨೬೦ ||

೧೨

ಕಾಮಧೇನು ನಿಮ್ಮ ನಾರಿರಲು ಪರರ ಬೇಡಲಾಚಿಸಯ್ಯಾ
ನಿಮ್ಮವರ ಸ್ನೇಹದಿ ಭವಬಂಧನ ಬಹುದೇಕಯ್ಯಾ ?
ಹಿಂದಣ ಜನ್ಮದ ಚಿಹ್ನ ಬಿಡದನ್ನಕ್ಕ
ನಿಮ್ಮವರ ಸ್ನೇಹದಿ ಏನೆನಯ್ಯಾ ?
ಎನ್ನ ಮನದ ಅವಗುಣವ ಕಳೆದು
ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು
ಕೂಡಲ ಸಂಗಮದೇವಾ. ॥ ೨೬೧ ॥

೧೩

ದುರ್ವ್ಯಸನಿ ದುರಾಚಾರಿಯೆಂದೆನಿಸದಿರಯ್ಯಾ, ಎನ್ನ—
ಲಿಂಗವ್ಯಸನಿ ಜಂಗಮಪ್ರೇಮಿಯೆಂದೆನಿಸಯ್ಯಾ;
'ಅನ್ಯಮನುಷ್ಯೋತ್ಪನ್ನಸಂಬಂಧಿ'ಯೆನಿಸದಿರಯ್ಯಾ,
ಕೂಡಲ ಸಂಗಮದೇವಾ, ನಿಮ್ಮ ಬೇಡುವೆನು! ॥ ೨೬೨ ॥

೧೪

ಧೃತಿಗೆಟ್ಟು ಅನ್ಯರ ಬೇಡದಂತೆ,
ಮತಿಗೆಟ್ಟು ಪರರ ಹೊಗಳದಂತೆ,
ಪರಸತಿಯರ ರತಿಗೆ ಮನವಾರದಂತೆ,
ಶಿವಪಥವೊಲ್ಲದವರೊಡನಾಡದಂತೆ,
ಅನ್ಯಜಾತಿಯ ಸಂಗವ ಮಾಡದಂತೆ,
ಎನ್ನ ಪ್ರತಿಪಾದಿಸು, ಕೂಡಲ ಸಂಗಮದೇವಾ. ॥ ೨೬೩ ॥

೧೫

ಮತ್ತೊಂದ ಕಾಣದಂತೆ, ಮತ್ತೊಂದ ಕೇಳದಂತೆ,
ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ,
ಇರಿಸಯ್ಯಾ, ಕೂಡಲ ಸಂಗಮದೇವಾ. ॥ ೨೬೪ ॥

೧೬

ಮತಿಮಂದನಾಗಿ ಗತಿಯ ಕಾಣದೆ ಇರ್ದೆನಯ್ಯಾ:
ಹುಟ್ಟುಗುರುಡನ ಕೈಯ ಕೋಲ ಕೊಟ್ಟು ನಡೆಸುವಂತೆ
ನಡೆಸಯ್ಯಾ, ಎನ್ನ:
ನಿಮ್ಮಚ್ಚ ಶರಣರ ಒಕ್ಕುದ ಮಿಕ್ಕುದ
ನಚ್ಚಿಸು, ಮಚ್ಚಿಸು, ಕೂಡಲ ಸಂಗಮದೇವಾ. ॥ ೨೬೫ ॥

೧೭

ಕಾಣದುದನೆಲ್ಲವ ಕಾಣಲಾಱಿನಯ್ಯಾ
ಕೇಳದುದನೆಲ್ಲವ ಕೇಳಲಾಱಿನಯ್ಯಾ
ದ್ರೋಹವಿಲ್ಲವೆಮ್ಮ ಶಿವನಲ್ಲಿ, ಸೀಮೆಯಯ್ಯಾ!
ಒಲೆಯ ಮುಂದಿದ್ದು ಮಾಡದ ಕನಸ ಕಾಣ್ಬವರನೊಲ್ಲನಯ್ಯಾ
ಕೂಡಲ ಸಂಗಮದೇವ. ॥ ೨೬೬ ॥

೧೮

ಕಾಣಬಹುದೆ ಪರುಷದ ಗಿರಿಯಂಧಕಂಗೆ?
ಅಱಿಯಬಹುದೆ ರಸದ ಬಾವಿ ನಿರ್ಭಾಗ್ಯಂಗೆ?
ತೆಗೆಯಬಹುದೆ ಕಡವರವು ದರಿದ್ರಂಗೆ?
ಕಱಿಯಬಹುದೆ ಕಾಮಧೇನುವಶುದ್ಧಂಗೆ?
ಪೊನ್ನ ಪುಳುವ ಕಂಡು ನರಿ ತನ್ನ ಬಾಲವ
ಹುಣ್ಣ ಮಾಡಿಕೊಂಡರೆ ಹೋಲಬಹುದೆ?
ಎನ್ನೊಡೆಯ ಕೂಡಲ ಸಂಗನ ಶರಣರನು
ಪುಣ್ಯವಿಲ್ಲದೆ ಕಾಣಬಹುದೇ? ॥ ೨೬೭ ॥

೧೯

ಎಂತಕ್ಕೆ ನಾನಿಮ್ಮ ದೇವರೆಂದಱಿದೆನು?
ಇಂತಾಗಿ ನೀವೆನ್ನನಾರೆಂದಱಿಯಿರಿ!
ನಂಬಲಱಿಯೆ, ನಂಬಿಸಲಱಿಯೆ,
ಒಲಿಯಲಱಿಯೆ, ಒಲಿಸಲಱಿಯೆ!

॥ ಶ್ಲೋಕ ॥ ಯಥಾ ಭಾವಸ್ತಥಾ ಲಿಂಗಂ ॥ ಸತ್ಯಂ ಸತ್ಯಂ ನ ಸಂಶಯಃ
ಯಥಾ ಭಕ್ತಿಸ್ತಥಾ ಸಿದ್ಧಿಃ । ಸತ್ಯಂ ಸತ್ಯಂ ನ ಸಂಶಯಃ
ಎಂಬುದಾಗಿ ಕೂಡಲ ಸಂಗಮದೇವಾ, ಕೇಳಯ್ಯಾ,
ಕೋಟಿ ಕೋಟಿ ವರ್ಷ ಕೋಟಲೆಗೊಂಡನಯ್ಯಾ! ॥ ೨೬೮ ॥

೨೦

ಅರಿಸಿನವನೆ ಮಿಂದು, ಹೊಂದೊಡಿಗೆಯನೆ ತೊಟ್ಟು,
ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯಾ!
ವಿಭೂತಿಯನೆ ಹೂಸಿ, ರುದ್ರಾಕ್ಷಿಯನೆ ಕಟ್ಟಿ,
ಶಿವ ನಿಮ್ಮೊಲವಿಲ್ಲದಂತೆ ಆಗಿರ್ದೆನಯ್ಯಾ!
ಕೆಟ್ಟು ಬಾಳುವರಿಲ್ಲಾ ಎಮ್ಮವರ ಕುಲದಲ್ಲಿ:
ನೀನೊಲಿದಂತೆ ಸಲಹಯ್ಯಾ, ಕೂಡಲ ಸಂಗಮದೇವಾ. ॥ ೨೬೯ ॥

೨೧

ಉದಯಾಸ್ತಮಾನವೆನ್ನ ಬೆಂದ ಬಸುರಿಂಗೆ ಕುದಿಯಲಲ್ಲದೆ
ನಿಮ್ಮ ನೆನೆಯಲು ತೆರಪಿಲ್ಲಯ್ಯಾ!
ಎಂತೊ! ಲಿಂಗ ತಂದೆ, ಎಂತಯ್ಯಾ? ಎನ್ನ ಪೂರ್ವಲಿಖಿತ!
ಬೆರಣಿಯನಾಯಲಲ್ಲದೆ ಅಟ್ಟುಣ್ಣ ತೆರಪಿಲ್ಲವೆನಗೆ!
ನೀ ಕರುಣಿಸಾ, ಕೂಡಲ ಸಂಗಮದೇವಾ. ॥ ೨೭೦ ॥

೨೨

ತಾಮಸ[ದೆ] ಮುಸುಕಿ ಕಂಗಳ ಕೆಡಿಸಿತ್ತೆನ್ನ ಭಕ್ತಿ;
ಕಾಮವೆಂಬಗ್ನಿಗೆ ಮುಗ್ಗಿದಿಕ್ಕಿತ್ತೆನ್ನ ಭಕ್ತಿ;
ಉದರಕ್ಕೆ ಕುದಿಕುದಿದು ಮುಂದುಗೆಡಿಸಿತ್ತೆನ್ನ ಭಕ್ತಿ;
ಇದಿರನಾಶ್ರಯಿಸಲು ಹೋಯಿತ್ತೆನ್ನ ಭಕ್ತಿ!
ಹೆಣಮೂಳನು ನಾನು! ಕೂಡಲ ಸಂಗಮದೇವಾ,
ಕ್ಷಣ ಹದುಳವಿರದೆ ಬಾಯ ಟೊಣೆದೇ ಹೋಯಿತ್ತೆನ್ನ ಭಕ್ತಿ!
॥ ೨೭೧ ॥

೨೩

ಏನಿದ್ದರೇನಿದ್ದರೊಲ್ಲದು ನಿಮ್ಮಸುಭಾವಕ್ಕೆನ್ನ ಮನವು:
ಡಂಬಕನೆಂಬವನಾನು ಕಂಡಯ್ಯಾ,
ಕೂಡಲ ಸಂಗನ ಪೂಜಿಸಿ ಮಾನವರಾಸೆ ಬಿಡದಾಗಿ. ॥ ೨೭೨ ॥

೨೪

ಬೆಲ್ಲವ ತಿಂದ ಕೋಡಗನಂತೆ ಸಿಹಿಯ ನೆನೆಯದಿರಾ, ಮನವೇ;
ಕಬ್ಬ ತಿಂದ ನರಿಯಂತೆ ಹಿಂದಕ್ಕೆಳಸದಿರಾ, ಮನವೇ;
ಗಗನವನಡರಿದ ಕಾಗೆಯಂತೆ ದೆಸೆದೆಸೆಗೆ ಹಂಬಲಿಸದಿರಾ, ಮನವೇ.
ಕೂಡಲ ಸಂಗನ ಶರಣರ ಕಂಡು ಲಿಂಗವೆಂದೇ ನಂಬು ಮನವೇ ॥೨೭೩॥

೨೫

ಒಡೆಯನ ಕಂಡರೆ ಕಳ್ಳನಾಗದಿರಾ, ಮನವೇ.
ಭವದ ಭಾರಿಯ ತಪ್ಪಿಸಿಕೊಂಬರೆ
ನೀನು ನಿಯತನಾಗಿ, ಭಯಭರಿತನಾಗಿ,
ಅಹಂಕಾರಿಯಾಗದೆ ಶರಣೆನ್ನು, ಮನವೇ.
ಕೂಡಲ ಸಂಗನ ಶರಣರಲ್ಲಿ ಭಕ್ತಿಯನೊಲುವರೆ
ಕಿಂಕಿಲನಾಗಿ ಬದುಕು, ಮನವೇ. ॥ ೨೭೪ ॥

೨೬

ಕೋ[ಟ್ಯ]ನುಕೋಟಿ ಜಪವನು ಮಾಡಿ
ಕೋಟಲೆಗೊಳ್ಳಲದೇಕೆ ಮನವೇ?
ಕಿಂಚಿತು ಗೀತವೊಂದನಂತಕೋಟಿ ಜಪ!
ಜಪವೆಂಬುದೇಕೆ ಮನವೇ?
ಕೂಡಲ ಸಂಗನ ಶರಣರ ಕಂಡು,
ಆಡಿ ಹಾಡಿ ಬದುಕು, ಮನವೇ! ॥ ೨೭೫ ॥

**೨೭**

ಮನವೇ ನಿನ್ನ ಜನ್ಮದ ಪರಿಭವವ ಮಾಣಿಸುವೆನಲ್ಲಾ, ಮನವೇ!
ಲಿಂಗವ ನಂಬು ಕಂಡಾ, ಮನವೇ;
ಜಂಗಮವ ನಂಬು ಕಂಡಾ, ಮನವೇ;
ಕೂಡಲ ಸಂಗಮದೇವರ ಬಿಡದೆ ನೆಂಬತ್ತು, ಕಂಡಾ, ಮನವೇ.
|| ೨೭೬ ||

**೨೮**

ಸುರರ ಬೇಡಿದಡಿಲ್ಲ, ನರರ ಬೇಡಿದಡಿಲ್ಲ,
ಬರಿದೆ ಧೃತಿಗೆಡಬೇಡ, ಮನವೇ;
ಅರಸಾದಡೆಯೂ ಬೇಡಿ ಬೇಡಿ, ಬರಿದೆ ಧೃತಿಗೆಡಬೇಡ, ಮನವೇ.
ಕೂಡಲ ಸಂಗಮದೇವನಲ್ಲದೆ, ಪರರ ಬೇಡಿದಡಿಲ್ಲ, ಮನವೇ || ೨೭೭ ||

**೨೯**

ಆಡಿ ಅಳುಪದಿರಾ, ಲೇಸ ಮಾಡಿ ಮಱುಗದಿರಾ, ಎಲೆ ಮನವೇ;
ಕೂಡ ತಪ್ಪದಿರಾ; ಬೇಡಿದವರಿಗಿಲ್ಲೆನ್ನದಿರು, ಕಂಡಾ, ಮನವೇ;
ನಾಡ ಮಾತು ಬೇಡ, ಸೆಱಗೊಡ್ಡಿ ಬೇಡು ಕೂಡಲ ಸಂಗನ ಶರಣರ.
|| ೨೭೮ ||

**೩೦**

ಹೃದಯದ ಕತ್ತರಿ; ತುದಿನಾಲಿಗೆಯ ಬೆಲ್ಲೆಂ ಬೋ!
ಆಡಿದೆ[ನೆಂ] ಬೋ, ಹಾಡಿದೆ[ನೆಂ] ಬೋ,
ನಿಚ್ಚ ನಿಚ್ಚ ಶಿವರಾತ್ರಿಯ ಮಾಡಿದೆ[ನೆಂ] ಬೋ!
ಆನು ಎನ್ನಂತೆ, ಮನ ಮನದಂತೆ,
ಕೂಡಲ ಸಂಗಮದೇವ ತಾನು ತನ್ನಂತೆ! || ೨೭೯ ||

**೩೧**

ಒಳ್ಳಿಯ ಪ್ಯಾಲಾರನವೊಳಗೆಲ್ಲ ಸಣಬು;
ಹೊರಗಣ ಬಣ್ಣ ಕರಲೇಸಾಯಿತ್ತಯ್ಯಾ!
ಧ್ಯಾನದ ನಿದ್ರೆ; ಅಜ್ಞಾನಿಯ ತಪದಂತೆ
ಆಯಿತ್ತಯ್ಯಾ ಎನ್ನ ಮತಿ, ಕೂಡಲ ಸಂಗಮದೇವಾ || ೨೮೦ ||

೩೨

ಲೋಕೋಪಚಾರಕ್ಕೆ ಮಜ್ಜನಕ್ಕೆರೆವೆನಯ್ಯಾ:
ಮನದ ತಾಮಸ ಬಿಡದು, ಮನದ ಕಪಟ ಬಿಡದಯ್ಯಾ;
'ಶಿವಶರಣೆ'ಂಬುದು ಒಪ್ಪಚಿಯುಕನವಡದಯ್ಯಾ!
ಎನ್ನ ಮನದಲ್ಲಿ ಎರಡುಳ್ಳನ್ನಕ್ಕ
ಕೂಡಲ ಸಂಗಮದೇವನೆಂತೊಲಿವ? || ೨೮೧ ||

೩೩

ಮಜ್ಜನಕ್ಕೆರೆವೆನಲ್ಲದಾನು - ಸಜ್ಜನನಲ್ಲೇನಯ್ಯಾ!
ಎನ್ನಲ್ಲೇನನರಸುವೆ? ನಂಬಿಯೂ ನಂಬದ ಡಂಬಕ ನಾನಯ್ಯಾ,
ಹಾವ ತೋರಿ ಹಡೆಯ ಬೀರುವಂತೆ,
ಕೂಡಲ ಸಂಗಮದೇವಾ! || ೨೮೨ ||

೩೪

ಜಲಕ್ಕೆ ಶುದ್ಧನಾದೆನಲ್ಲದೆ, ಎನ್ನ ಮನಕ್ಕೆ ಶುದ್ಧನಾಗೆನಲ್ಲಯ್ಯಾ?
ಕೈಯ ಮುಟ್ಟಿ ಪೂಜಿಸುವರೆ, ಎನ್ನ ಕೈ ಶುದ್ಧವಲ್ಲವಯ್ಯಾ:
ಮನಮುಟ್ಟಿ ಪೂಜಿಸುವರೆ. ಎನ್ನ ಮನ ಶುದ್ಧವಲ್ಲವಯ್ಯಾ.
ಭಾವ ಶುದ್ಧವಾದೊಡೆ ಕೂಡಲ ಸಂಗಯ್ಯನು
'ಇತ್ತ ಬಾ' ಎಂದೆತ್ತಿಕೊಳ್ಳನೇಕಯ್ಯಾ? || ೨೮೩ ||

೩೫

ಕುಲಮದಕ್ಕೆ ಹೋರಿ ಜಂಗಮ ಭೇದವ ಮಾಡುವೆ: ಫಲವೇನು?
ನಿತ್ಯಲಿಂಗಾರ್ಚನೆ ಪ್ರಾಯಶ್ಚಿತ್ತ!
ಛಲಮದಕ್ಕೆ ಹೋರಿ ಲಿಂಗಭೇದವ ಮಾಡುವೆ:
ಜಂಗುಳಿಯು ಕಾವ ಗೋವ ಹಲವು ಹಸುವ ನಿವಾಡಿಸುವಂತೆ!
ತನು ಭಕ್ತನಾಯಿತ್ತು: ಎನ್ನ ಮನ ಭವಿ, ಕೂಡಲ ಸಂಗಮದೇವಾ
|| ೨೮೪ ||

೩೬

ಲಿಂಗದಲ್ಲಿ ಕಠಿಣವುಂಟೆ? ಜಂಗಮದಲ್ಲಿ ಕುಲವುಂಟೆ?
ಪ್ರಸಾದದಲ್ಲಿ ಅನುರುಚಿಯುಂಟೆ?
ಈ ತ್ರಿವಿಧದಲ್ಲಿ ಭಾವಭೇದವನರಿಸುವೆನು—
ಕೂಡಲ ಸಂಗಮದೇವಾ, ಧಾರೆವಟ್ಟಲೆನ್ನ ಭಕ್ತಿ! ॥ ೨೮೫ ॥

೩೭

ಲೌಕಿಕರ ಕಂಡು ಆಡುವೆ, ಹಾಡುವೆ;
ತಾರ್ಕಿಕರ ಕಂಡು ಆಡುವೆ ಹಾಡುವೆ:
ಸಹಜಗುಣವೆನ್ನಲ್ಲಿಲ್ಲಯ್ಯಾ;
ನಿಜಭಕ್ತಿಯೆನಗಿಲ್ಲ, ತಂದೇ.
ಏಕೋಭಾವ ಎನಗುಳ್ಳರೆ, ಏಕೆ ನೀ ಕರುಣಿಸೆ,
ಕೂಡಲ ಸಂಗಮದೇವಾ? ॥ ೨೮೬ ॥

೩೮

ಓತಿ ಬೇಲಿವರಿದಂತೆ ಎನ್ನ ಮನವಯ್ಯಾ,
ಹೊತ್ತಿಗೊಂದು ಪರಿಯಪ್ಪ ಗೋಸುಂಬೆಯಂತೆನ್ನ ಮನವು;
ಬಾವುಲ ಬಾಳುವೆಯಂತೆನ್ನ ಮನವು!
ನಡುವಿರುಳೊಳಿದ್ದ ಕುರುಡಂಗೆ ಅಗಸೆಯಲ್ಲಿ ಬೆಳಗಾದಂತೆ—
ನಾನಿಲ್ಲದ ಭಕ್ತಿಯ ಬಯಸಿಪರುಂಟೆ,
ಕೂಡಲ ಸಂಗಮದೇವಾ? ॥ ೨೮೭ ॥

೩೯

ಸತ್ಯಸಂಬಂಧ ಸಯವಾದ ಭೃತ್ಯಾಚಾರವೆನಗಿಲ್ಲವಯ್ಯಾ;
ಅನುದಿನ ನಿಮ್ಮ ನೆನೆಯಲು ಭಕ್ತಿಯಿಲ್ಲವಯ್ಯಾ—
ಎನಗೆ ಕೂಡಲ ಸಂಗಮದೇವಾ, ಕರುಣೇ, ಕೃಪೆಯ ಮಾಡಯ್ಯಾ.
॥ ೨೮೮ ॥

೪೦

ಶಬ್ದಸಂಭಾಷಣೆಯ ಸುಡಿಯ ವರ್ತಿಸಿ ನುಡಿವೆ:
ತೊಡಹದ ಬಣ್ಣದ ಕೆಲಸದಂತೆ
ಕಡಿಹಕ್ಕೆ ಒರೆಗೆ ಬಾರದು, ನೋಡಾ!
ಎನ್ನ ಮನದಲೊಂದು, ಹೃದಯದಲೊಂದು,
ವಚನದಲೊಂದು ನೋಡಾ:
ಕೂಡಲ ಸಂಗಮದೇವಾ,
ಆನು ಭಕ್ತನೆಂಬ ಹುಸಿಯ ಮುಸಕವನೇನ ಬಣ್ಣಿಸುವೆನಯ್ಯಾ?
|| ೨೮೯ ||

೪೧

ಹಾಲ ತೊಱೆಗೆ ಬೆಲ್ಲದ ಕೆಸಱು, ಸಕ್ಕರೆಯ ಮಳಲು,
ತವರಾಜದ ನೊರೆ ತೆರೆಯಂತೆ,
(ಆದ್ಯರ ವಚನವಿರಲು,
ಬೇಱೆ ಬಾವಿಯ ತೋಡಿ ಉಪ್ಪನೀರನುಂಬವನ ವಿಧಿಯಂತೆ
ಆಯಿತ್ತೆನ್ನ ಮತಿ, ಕೂಡಲ ಸಂಗಮದೇವಾ. || ೨೯೦ ||

೪೨

ಜನ್ಮ ಹುಲ್ಲೆಂಬೆನೆ: ಜನ್ಮವ ಬಿಡಲಹೆನು;
ಭಕ್ತರೊಲವ ಪಡೆವೆನೆ: ಭಕ್ತಿಯ ಪಥವನಱಿವೆನು;
ಲಿಂಗವೆಂದು ಬಲ್ಲೆನೆ: ಜಂಗಮವೆಂದು ಕಾಣ್ಬೆನು:
ನಿಚ್ಚ ನಿಚ್ಚ ಶಿವರಾತ್ರಿಯ ಮಾಡಬಲ್ಲೆನೆ:
ಕೈಲಾಸವ ಕಾಣ ಬಲ್ಲೆನು!
ಎನ್ನಲ್ಲಿ ನಡೆಯಿಲ್ಲವಾಗಿ, ನಾನು ಭಕ್ತನೆಂತಪ್ಪೆನಯ್ಯಾ,
ಕೂಡಲ ಸಂಗಮದೇವಾ? || ೨೯೧ ||

೪೩

ಉಡುವಿನ ಭಾವದಲ್ಲಿ ಹಡೆದರೆಷ್ಟುವರು:
ಊಸರವಳ್ಳಿಯಂತೆ ಎನ್ನಿರವು---
ಬಾವುಲ ಬಾಳುವೆಯ ತೆಱನಂತೆ!
ಹೊತ್ತಾಱಿ ಎದ್ದ ಕುರುಡಂಗೆ
ಅಗಸೆಯಲ್ಲಿ ಅಸ್ತಮಾನವಾದಂತೆ;
ಆನು ಭಕ್ತಿಯ ಬಯಸಿದರಹುದೆ
ಕೂಡಲ ಸಂಗಮದೇವಾ? ॥ ೨೯೨ ॥

೪೪

ಬ[illegible]ಱ ಬಾಳುವೆಗೆ ನಿಮ್ಮಲ್ಲಿ—
ಹುಸಿಯ ಹೂಸಿ ನೇಱಿಲ ಹಂಣ ಮಾಱುವಂತೆ--
ಕಾಲ ಸಾಲ ದಾರಿದ್ರ್ಯಕ್ಕಂಜಿ ನಿಮ್ಮ ಮಱೆಹೊಕ್ಕೆನಯ್ಯಾ.
ಆವುದು ಹುಸಿಯೆಂಬೆ? ಆವುದು ಕಿಱಿದೆಂಬೆ?
ಇದ ನೀನೇ ಬಲ್ಲೆಯಯ್ಯಾ.
ಕೂಡಲ ಸಂಗಮದೇವಾ, ಆನು ಉದರಪೋಷಕನಯ್ಯಾ ! ॥ ೨೯೩ ॥

೪೫

ಮೂಗ ಕಂಡ ಕನಸಿನಂತಾಯಿತ್ತೆನ್ನ ಭಕ್ತಿ :
ಗುಣವ ಹೇಳಬಾರದಾರಿಗೆಯೂ; ಕೇಳಲೆಂತೂ ಬಾರದು !
ಎನ್ನ ಹೇಗತನವ ಮಾಣಿಸು, ಕೂಡಲ ಸಂಗಮದೇವಾ. ॥ ೨೯೪ ॥

೪೬

ಕಾಣಿಯ ಲೋಭ ಕೋಟಿಯ ಲಾಭವ ಕೆಡಿಸಿದುದ ನಾನಱಿಯೆನಯ್ಯಾ.
ಭಕ್ತಿಯ ಕುಳವ ನಾನಱಿಯದೆ
ಮತಿಗೆಟ್ಟ ಪರಿಯ ನೋಡಯ್ಯಾ.
ಕೂಡಲ ಸಂಗನ ಶರಣರ ಸಂಗದಿಂದಲಱಿದರೆ
ನಾನು ಬದುಕುವೆನಯ್ಯಾ. ॥ ೨೯೫ ॥

೪೭

ಏನನೋದಿ, ಏನಕೇಳಿ, ಏನ ಮಾಡಿಯೂ ಫಲವೇನು
ನಿಮ್ಮನರೊಲಿಯದನ್ನಕ್ಕ?
ಶಿವ, ಶಿವ, ಮಹಾದೇವಾ,
ಬಾಳಿಲ್ಲದವಳ ಓಲೆಯಂತಾಯಿತ್ತೆನಗೆ,
ಕೂಡಲ ಸಂಗಮದೇವಾ. || ೨೯೬ ||

೪೮

ಮುನ್ನೂಱಱುವತ್ತು ದಿನ ಪ್ರಸವ ಮಾಡಿ,
ಕಳನೇಱು ಕೈಮುಱಿದಂತಾಯಿತ್ತೆನ್ನ ಭಕ್ತಿ!
ಎನಿಸು ಕಾಲ ಲಿಂಗಾರ್ಚನೆಯ ಮಾಡಿ ಏವೆನಯ್ಯಾ
ಮನದಲ್ಲಿ ದೃಢವಿಲ್ಲದನ್ನಕ್ಕ?
ಕೊಡನ ತುಂಬಿದ ಹಾಲ ಕೆಡಹಿ,
ಉಡುಗಲೆನ್ನಳವೆ ಕೂಡಲ ಸಂಗಮದೇವಾ? || ೨೯೭ ||

೪೯

ಶಬ್ದಸುಖಕ್ಕೆ ಮೆಚ್ಚಿ, ಮಾತಿಂಗೆ ಮಾತನೆ ಕೊಟ್ಟು ಕೆಟ್ಟೆನಯ್ಯಾ;
ಅನುಭಾವ ಅಕ್ಕವೆಯಾಗದೆ, ಬೆಬ್ಬನೆ ಬೆಱತೆನಯ್ಯಾ!
ಅಮೃತದ ಕೊಡನ ತುಂಬಿ ಒಡೆದು ಹೊಯ್ದು ಅಱಸಲುಂಟೆ?
ಸ್ವಾಮಿ-ಭೃತ್ಯಸಂಬಂಧವೆ ಎನ್ನ ಭಕ್ತಿ:
ಪ್ರತ್ಯುತ್ತರ ನಾಯಕನರಕ, ಕೂಡಲ ಸಂಗಮದೇವಾ. || ೨೯೮ ||

ಅಂಕ ಓಡಿದರೆ ತೆತ್ತಿಗಂಗೆ ಭಂಗವಯ್ಯಾ:
ಕಾದಿ ಗೆಲಿಸಯ್ಯಾ ಎನ್ನನು—
ಕಾದಿ ಗೆಲಿಸಯ್ಯಾ, ಕೂಡಲ ಸಂಗಮದೇವಯ್ಯಾ.
ಎನ್ನ ತನು-ಮನ-ಧನದಲ್ಲಿ ವಂಚನೆಯಿಲ್ಲದೆ. || ೨೯೯ ||

೫೧

ಹೇಡಿ ಬಿರುದ ಕಟ್ಟಿದಂತಾಯಿತೆನ್ನ ವೇಷ:
ಕಾದಬೇಕು, ಕಾದುವರೆ ಮನವಿಲ್ಲ—
ಆಗಳೆ ಹೋಯಿತ್ತು ಬಿರುದು:
ಹಗರಣ ನಗೆಗೆಡೆಯಾಯಿತ್ತು!
ಮೂಱಂಕ ಜಂಗಮ ಮನೆಗೆ ಬಂದರೆ,
ಕಾಣದಂತಡ್ಡಮುಸುಡಿಟ್ಟಡೆ,
ಕೂಡಲ ಸಂಗಮದೇವ, ಜಾಣ, ಮೂಗ ಹಲುದೋಱಿ ಕೊಯ್ವ!
॥ ೩೦೦ ॥

೫೨

ಅಚ್ಚ ಶರಣರು ನಿಮ್ಮ ನಿಚ್ಚ ನಿಚ್ಚ ನೆನೆವರು:
ಬಚ್ಚಬಱಿಯ ಮಾತನಾಡುವೆನು!
ಒಪ್ಪಚ್ಚಿ ಅರೆಭಕ್ತಿ ನೆನೆಯಲೀಯದು ನಿಮ್ಮ;
ಮೆಚ್ಚರು ನಿಮ್ಮ ಶರಣರು ಎನ್ನ, ಕೂಡಲ ಸಂಗಮದೇವಾ. ॥ ೩೦೧ ॥

೫೩

ಆಡುವುದಳವಟ್ಟಿತ್ತು, ಹಾಡುವುದಳವಟ್ಟಿತ್ತು;
ಅರ್ಚನೆಯುಳವಟ್ಟಿತ್ತು, ಪೂಜನೆಯುಳವಟ್ಟಿತ್ತು;
ನಿತ್ಯಲಿಂಗಾರ್ಚನೆ ಮುನ್ನವೆಯುಳವಟ್ಟಿತ್ತು:
ಕೂಡಲ ಸಂಗನ ಶರಣರು ಬಂದರೆ
'ಏಗುವುದು, ಏ ಬೆಸನೆ?'ಂಬುದು ಒಪ್ಪಚಿಯುಳವಡದು! ॥ ೩೦೨ ॥

೫೪

ಒಡೆಯರಿಗೆ ಒಡವೆಯನೊಪ್ಪಿಸಲಾಱದೆ
ಮೋಱೆಯಿಡುವ ಮನವನಾನೇನೆಂಬೆ?
ನೆತ್ತಿಯಲ್ಲಿ ಆಲಗ ತಿರುಹುವಂತಪ್ಪ
ವೇದನೆಯಹುದೆನಗೆ!

ಕೊಯಿದ ಮೂಗಿಂಗೆ ಕನ್ನಡಿಯ ತೋಱುವಂತಪ್ಪ
  ವೇದನೆಯಹುದೆನಗೆ!
ಬೆಂದ ಹುಣ್ಣ ಕಂಬಿಯಲ್ಲಿ ಕೀಸುವಂತಪ್ಪ
  ವೇದನೆಯಹುದೆನಗೆ!
ಕೂಡಲ ಸಂಗಮದೇವ ಮಾಡಿ ನೋಡುವ ಹಗರಣವ
  ನಾ ಮಾಡಿಹೆನೆಂದರೆ ಮನಕ್ಕೆ ಮನ ನಾಚದೆ, ಅಯ್ಯಾ?
|| ೩೦೩ ||

೫೫

ಹೊಱಸಿಕೊಂಡ ಹೋದ ನಾಯಿ: ಮೊಲನೇನ ಹಿಡಿಯುವುದಯ್ಯಾ?
ಇಱಿಯದ ವೀರ: ಇಲ್ಲದ ಸೊಬಗುವ ಹೇಳುವುದೇ ನಾಚಿಕೆ!
ಆನು ಭಕ್ತನೆಂತಪ್ಪೆನಯ್ಯಾ, ಕೂಡಲ ಸಂಗಮದೇವಾ? || ೩೦೪ ||

೫೬

ಎನ್ನ ಭಕ್ತನೆಂದೆಂಬರು:
  ಎನ್ನ ಹೊಱಪಂಚೆ ಒಳಬೊಳ್ಳೆತನವನಱಿಯರಾಗಿ!
ಎನ್ನ ಮಾನಾಪಮಾನ ಶರಣರಲ್ಲಿ; ಜಾತಿ-ವಿಜಾತಿಯು ಶರಣರಲ್ಲಿ;
  ತನು-ಮನ-ಧನವೂ ಶರಣರಲ್ಲಿ.
ವಂಚನೆಯುಳ್ಳ ಡಂಭಕ ನಾನು:
  ತಲೆಯೊಡೆಯಂಗೆ ಕಣ್ಣ ಬೈಚಿಡುವೆ,
  ಕೂಡಲ ಸಂಗಮದೇವಾ. || ೩೦೫ ||

೫೭

ನೋಡುವರುಳ್ಳರೆ ಮಾಡುವೆ ದೇಹಾರವ:
  ಎನಗೊಂದು ನಿಜವಿಲ್ಲ: ಎನಗೊಂದು ನಿಷ್ಪತ್ತಿಯಿಲ್ಲ!
ಲಿಂಗವ ತೋಱಿ ಉದರವ ಹೊರೆವ
  ಭಂಗಗಾಱ ನಾನು, ಕೂಡಲ ಸಂಗಮದೇವಾ! || ೩೦೬ ||

೫೮

ಭಕ್ತಿಯೊಳ್ಳನಿತಿಲ್ಲ: ಯುಕ್ತಿ ಶೂನ್ಯನಯ್ಯಾ ನಾನು:
ತನುವಂಚಕ, ಮನವಂಚಕ, ಧನವಂಚಕ, ನಾನಯ್ಯಾ.
**ಕೂಡಲ ಸಂಗಮದೇವಾ, ಒಳಲೊಟ್ಟಿಯೆನ್ನ ಮಾತು!** || ೨೦೭ ||

೫೯

ತನು ನಿಮ್ಮದೆಂಬೆ, ಮನ ನಿಮ್ಮದೆಂಬೆ, ಧನ ನಿಮ್ಮದೆಂಬೆ:
ಮತ್ತೆಯೂ ವಂಚನೆ ಮಾಣದಯ್ಯಾ.
ಲಿಂಗ ಜಂಗಮವೆಂಬೆ, ಜಂಗಮ ಲಿಂಗವೆಂಬೆ:
ಮತ್ತೆಯೂ ವಂಚನೆ ಮಾಣದಯ್ಯಾ.
ಒಡಲೊಡವೆ ಹಡೆದರ್ಥ ನಿಮ್ಮದೆಂದಱಿಯದೆ
ಕೆಮ್ಮನೆ ಕೆಟ್ಟೆ, ಕೂಡಲ ಸಂಗಮದೇವಾ! || ೨೦೮ ||

೬೦

ಊರ ಸೀಱೆಗೆ ಅಸಗ ತಡಬಡಿಹಡೆದಂತೆ
ಹೊನ್ನೆನ್ನದು, ಹೆಣ್ಣೆನ್ನದು, ಮಣ್ಣೆನ್ನದೆಂದು ಮರುಳಾದೆ:
ನಿಮ್ಮನಱಿಯದ ಕಾರಣ ಕೆಮ್ಮನೆ ಕೆಟ್ಟೆ,
ಕೂಡಲ ಸಂಗಮದೇವಾ! || ೨೦೯ ||

೬೧

ಅರ್ಥ ಪ್ರಾಣಾಭಿಮಾನ ನಿಮ್ಮದೆಂಬೆ:
ಮತ್ತೆಯೂ ಆಸೆ ಬಿಡದನ್ನಕ್ಕ ಭಕ್ತನೆಂತಪ್ಪೆನಯ್ಯಾ?
ಶರಣನೆಂತೆನಿಸುವೆನಯ್ಯಾ, ಆನು ಲಿಂಗೈಕ್ಯನೆಂತೆನಿಸುವೆನಯ್ಯಾ?
ಕೂಡಲ ಸಂಗನ ಶರಣರ ಸಕಲರತಿಗೆ ಸಲ್ಲದನ್ನಕ್ಕ? || ೨೧೦ ||

೬೨

ಆನು ನಿಮ್ಮ ಭಕ್ತಿಯಲ್ಲಿ ದರಮರನೆಂಬೆ:
ದಿಟಕ್ಕೆ ಬಂದರೆ ಕಾಣದಂತಡ್ಡಮೊಗವಿಕ್ಕುವೆ—
ಗರುಡಂಗೆ ಘಟಸರ್ಪನ ತೋಱುವಂತೆ!
ಶಿವಶರಣರೆಂದರೆ ಕಿವಿಗೇಳದಂತಿಹೆನು;
ಮನಕ್ಕೆ ಮನವೇ ಸಾಕ್ಷಿಯಯ್ಯಾ, ಕೂಡಲ ಸಂಗಮದೇವಾ.
|| ೨೧೧ ||

೬೩

ಆದ್ಯರ ವಚನ ಪರುಷವೆಂದೆಂಬೆನು:
ಆ ಪರುಷ ಎನಗೆಂತು ದೊರೆಕೊಂಬುದಯ್ಯಾ?
ತನು-ಮನ-ಧನವ ವಿವರಿಸಿ ನುಡಿವೆ:
ಸೋಂಕಿಂಗೆ ಸೈರಿಸಲಾಱೆ!
ಹೊಲೆಯರ ಮದ್ದಳೆಯಂತೆ ನುಡಿವ ಡಂಭಕನಾನಯ್ಯಾ,
ಕೂಡಲ ಸಂಗಮದೇವಾ! || ೩೧೨ ||

೬೪

ಕಾಂಚನವೆಂಬ ನಾಯ ನಚ್ಚಿ, ನಿಮ್ಮನಾನು ಮಱೆದೆನಯ್ಯಾ,
ಕಾಂಚನಕ್ಕೆ ವೇಳೆಯಲ್ಲದೆ, ಲಿಂಗಕ್ಕೆ ವೇಳೆಯಿಲ್ಲಾ!
ಹಡಿಕೆಗೆ ಮೆಚ್ಚಿದ ಸೊಣಗ
ಅಮೃತದ ಸವಿಯ ಬಲ್ಲುದೆ, ಕೂಡಲ ಸಂಗಮದೇವಾ? || ೩೧೩ ||

೬೫

ಒಲುವ ಗಂಡನೊಮ್ಮೆ ಒಲ್ಲದಿಪ್ಪ, ಕಂಡಯ್ಯಾ!
ತಪ್ಪೆನ್ನದು, ತಪ್ಪೆನ್ನದು:
ತನು-ಮನ-ಧನದಲ್ಲಿ ಮಾಟ-ಕೂಟವೆಂದಱಿಯದ
ತಪ್ಪೆನ್ನದು, ತಪ್ಪೆನ್ನದು!
ಕಡೆಯಿಲ್ಲದ ಮುನಿಯೆನ್ನದು! ಕೂಡಲ ಸಂಗಮದೇವಾ. || ೩೧೪ ||

೬೬

ಕಾಣುತ್ತ ಕಡೆಗಣಿಸಿ, ಕೆಡಿಸಿಯಱಸುವ
ಮತಿಭ್ರಷ್ಟ ನಾನು, ಲಿಂಗಯ್ಯಾ!
ತನುಲೋಭ, ಮನಲೋಭ, ಧನಲೋಭ
ಮುಂದುಗೆಡಿಸಿ ಕಾಡಿಹುವೆನ್ನಾ.
ತನು-ಮನ-ಧನವ ನಿವೇದಿಸಿದವರ ಮನೆಯ ಮಗನಾನಯ್ಯಾ,
ಕೂಡಲ ಸಂಗಮದೇವಾ. || ೩೧೫ ||

೬೭

ಹಗಹದಲ್ಲಿ ಬಿದ್ದವರ ಮೇಲೆ ಒರಳ ನೂಂಕುವರೆ?
ಕೋಳದ ಮೇಲೆ ಸಂಕಲೆಯನಿಕ್ಕುವರೆ?
ಬೆಂದ ಹುಣ್ಣ ಕಂಬಿಯಲ್ಲಿ ಕೀಸುವರೆ?
ಕೂಡಲ ಸಂಗಯ್ಯನ ಕಾಡವ ಕಾಟ
  ಸಿರಿಯಾಳಂಗಲ್ಲದೆ ಸೈರಿಸಬಹುದೇ? || ೩೧೬ ||

೬೮

ಸೊಲಬಲ್ಲರವರು: ಗೆಲಲಱಿಯರಯ್ಯಾ;
  ತನು-ಮನ-ಧನದಲ್ಲಿ ವಂಚನೆಯನಱಿಯರಯ್ಯಾ,
  ದಾಸ-ಸಿರಿಯಾಳನವರು.
ಕೂಡಲ ಸಂಗನ ಶರಣರು ಉಪಚಾರವನಱಿಯರಯ್ಯಾ! || ೩೧೭ ||

೬೯

ಮಾತಿನಲ್ಲಿ ಶ್ರೋತ್ರಸುಖವ ನುಡಿಯಬಹುದಲ್ಲದೆ,
  ಮಾಡುವ ಸತ್‌ಕ್ರಿಯೆಯಿಂದ ಭಕ್ತನೆನಿಸಬಾರದು;
  ಅರ್ಥಪ್ರಾಣಾಭಿಮಾನವಾರಿಗೆಯೂ ಸಮನಿಸದು
  ಲಿಂಗಮುಖದಲ್ಲುದಯವಾದ ಶರಣಂಗಲ್ಲದೆ, ಅಯ್ಯಾ.
ಕೂಡಲ ಸಂಗನ ಶರಣರ ಭಕ್ತಿಭಾಂಡಾರವು
  ಎನಗೆಂತು ಸಾಧ್ಯವಪ್ಪುದು? ಹೇಳೆನ್ನ ತಂದೇ. || ೩೧೮ ||

೭೦

ಬಾಣ-ಮಯೂರನಂತೆ ಬಣ್ಣಿಸ ಬಲ್ಲೆನೆ?
ಸಿರಿಯಾಳನಂತೆ ಊಣಲಿಕ್ಕಬಲ್ಲೆನೆ?
ದಾಸಿಮಯ್ಯನಂತೆ ಉಡಕೊಡಬಲ್ಲೆನೆ?
ಉಂಡುಟ್ಟು ಕೊಟ್ಟರೆ ಮಯ್ಯಿಗೆ ಮಯ್ಯನಿಸಿತ್ತು:
  ಎನಗೆ ಕೊಟ್ಟರೆ ಧರ್ಮ! ಕೂಡಲ ಸಂಗಮದೇವಾ. || ೩೧೯ ||

೭೧

ದಾಸಿದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ.
ಸಿರಿಯಾಳ ತನ್ನ ಮಗನನಿತ್ತು ಪ್ರಾಣ-ಪ್ರಸಾದವ ಪಡೆದ.
ಬಲ್ಲಾಳದೇವ ತನ್ನ ವಧುವನಿತ್ತು ಸಮತಾಪ್ರಸಾದವ ಪಡೆದ.
ಇವರೆಲ್ಲರು ತಮತಮಗೆ ಮಾಡಿ ಹಡೆದರು ಸಮ್ಯಕ್‌ಪದವಿಯನು.
ನಾನೇನನೂ ಅರಿಯದ ಭಕ್ತಿಯ ಬಡವಂಗೆ ಕರುಣಿಸು,
ಕೂಡಲ ಸಂಗಮದೇವಾ. || ೩೨೦ ||

೭೨

ತ್ರಿವಿಧ ತ್ರಿವಿಧದಲ್ಲಿ ತಪ್ಪಿದ ತಪ್ಪುಕ ನಾನಯ್ಯಾ;
ಒಮ್ಮಂಗೆ ಕರುಣಿಸಯ್ಯಾ, ಒಮ್ಮಂಗೆ ಕರುಣಿಸಯ್ಯಾ!
ಇವನರಿದು ಇನ್ನು ತಪ್ಪಿದೆನಾದರೆ
ನೀ ಮಾಡಿತ್ತೆ ಸಲುವುದು, ಕೂಡಲ ಸಂಗಮದೇವಾ. || ೩೨೧ ||

೭೩

ಎನ್ನ ತಪ್ಪು ಅನಂತಕೋಟಿ: ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ!
ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ!
ಕೂಡಲ ಸಂಗಮದೇವಯ್ಯಾ,
ನಿಮ್ಮ ಪ್ರಮಥರ ಮುಂದೆ ಕಿನ್ನರ ಬೊಮ್ಮಣ್ಣನೆ ಸಾಕ್ಷಿ! || ೩೨೨ ||

೭೪

ಅಡಿಗಡಿಗೆ ಎನ್ನ ಮನವ ಜಡಿದು ನೋಡದಿರಯ್ಯಾ;
ಬಡವನೆಂದೆನ್ನ ಕಾಡದಿರಯ್ಯಾ:
ಎನಗೆ ಒಡೆಯರುಂಟು ಕೂಡಲ ಸಂಗನ ಶರಣರು. || ೩೨೩ ||

೭೫

ಭಕ್ತಿವಿಶೇಷವ ಮಾಡುವರೆ ಹತ್ತು ಬೆರಳುಗಳುಂಟು;
ಹಾಸಿ ಮಡಿವರೆ ತನಗುಂಟು, ತನ್ನ ಪ್ರಮಥರಿಗುಂಟು.
ಮಾರಿತಂದೆಗಳಂತೆ ಎನಗೇಕಮವಯ್ಯಾ?
ರತ್ನದ ಸಂಕಲೆಯನಿಕ್ಕಿ ಕಾಡಿಹೆ,
ಕೂಡಲ ಸಂಗಮದೇವಾ, ಶಿವಧೋ! ಶಿವಧೋ!! || ೩೨೪ ||

೮೦

ಆ ಕರಿಯಾಕೃತಿಯ ಸೂಕರನ ಹೋಲಿಸಿದರೆ
ಆ ಕರಿಯಾಗಲರಿವುದೆ ?
ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ
ವ್ಯಾಳೇಶನಾಗಲರಿವುದೆ ?
ನಾನು ಭಕ್ತನಾದರೇನಯ್ಯಾ ? ನಮ್ಮ ಕೂಡಲ ಸಂಗಮದೇವನ
ಸದ್‌ಭಕ್ತರ ಹೋಲಲರಿವೆನೆ ? ॥ ೩೨೯ ॥

೮೧

ಪೋಟನ ಪರೌಳಿ, ಮೂಕೊರತಿಯ ಶೃಂಗಾರ,
ಜೇಟಿ ಕುರುಡಂಗ ನಗೆಗೆಡೆಯಾಯಿತ್ತು !
ನಮ್ಮ ಕೂಡಲ ಸಂಗನ ಶರಣರ ಮುಂದೆ
ಆನು ಭಕ್ತನೆಂಬ ನಾಚಿಕೆ ಸಾಲದೆ ? ॥ ೩೩೦ ॥

೮೨

ಮೂಗಿಲ್ಲದ ಮುಖಕ್ಕೆ ಶೃಂಗಾರವೇ ?
ವಿಕೃತವೇಷಧಾರಿಯಾನು : ಭಂಡನು ! ಲಜ್ಜಭಂಡನು !
ಕೂಡಲ ಸಂಗನ ಶರಣರಲ್ಲಿ
ಹಾವ ತೋರಿ ಹುಸಿಯ ಬೇಡುವಂತೆ ! ॥ ೩೩೧ ॥

೮೩

ಮಾವಿನ ಕಾಯಿಯೊಳಗೊಂದು ಎಕ್ಕೆಯ ಕಾಯಿ ನಾನಯ್ಯಾ:
ಆನು ಭಕ್ತನೆಂತೆಂಬೆ, ನಿಮ್ಮ ಶರಣರ ಮುಂದೆ ನಾಚಿಕೆಯಿಲ್ಲದೆ?
ಕೂಡಲ ಸಂಗನ ಶರಣರ ಮುಂದೆ ನಾನೆಂತು ಭಕ್ತನಪ್ಪೆನಯ್ಯಾ ?
॥ ೩೩೨ ॥

೮೪

ಮರದ ನೆಳಲಲಿದ್ದು ತನ್ನ ನೆಳಲನರಸಬಹುದೆ ?
ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯಾ ?
ನಿಮ್ಮ ಶರಣರ ಮುಂದೆ ನಾನೇತರ ಯುಕ್ತನಯ್ಯಾ ?
ಆನು ಭಕ್ತನೆಂಬ ನುಡಿ ನುಡಿವೆ, ಕೂಡಲ ಸಂಗಮದೇವಾ ? ॥ ೩೩೩ ॥

೮೫

ಎನ್ನಿಂದ ಕಿರಿಯರಿಲ್ಲ; ಶಿವಭಕ್ತರಿಂದ ಹಿರಿಯರಿಲ್ಲ—
ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ!
ಕೂಡಲ ಸಂಗಮದೇವಾ, ಎನಗಿದೇ ದಿಬ್ಯ! || ೩೩೪ ||

೮೬

ಆನು ಭಕ್ತನಲ್ಲಯ್ಯಾ, ಆನು ವೇಷಧಾರಿಯಯ್ಯಾ;
ಕಾಟುಗ, ಕೆತ್ತುಗ, ಪ್ರೋಲುಗನೆಂಬುದು ಎನ್ನ ಹೆಸರು!
ಕೂಡಲ ಸಂಗಮದೇವಾ,
ನಿಮ್ಮ ಶರಣರ ಮನೆಯ ಮಗ ನಾನಯ್ಯಾ. || ೩೩೫ ||

೮೭

ಡಂಬು ದಳುಹು ಎನ್ನದಯ್ಯಾ; ಡಂಬಕನೆಂಬವ ನಾನಯ್ಯಾ,
ನಿಮ್ಮ ನಂಬಿದ ಶರಣರ ಡಿಂಗರಿಗ ನಾನು,
ಕೂಡಲ ಸಂಗಮದೇವಾ. || ೩೩೬ ||

೮೮

ಚೆನ್ನ-ಚೇರಮರ ಬಂಟನಾನಯ್ಯಾ;
ಎನ್ನ ಚಾಗುಜೊಲ್ಲಿನೆ ಕಾವ ಗೋವನೆಂಬರು.
ಕೂಡಲ ಸಂಗನ ಶರಣರೊಡೆಯರಾಗಿ
ತಮ್ಮ ತೊತ್ತಿನ ಮಗನೆಂದು ಒಲಿದಂತ ನುಡಿವರು. || ೩೩೭ ||

೮೯

ಕಾಲಲೊದೆದು ಬಡಿದು ಜಡಿವರಯ್ಯಾ ಭಕ್ತಿಯುಪ್ಪುದೆಂದೆನ್ನ.
ಜರೆವರಯ್ಯಾ, ನುಡಿವರಯ್ಯಾ,
ಕೂಡಲ ಸಂಗನ ಶರಣರೊಡೆಯರಾಗಿ. || ೩೩೮ ||

೯೦

ನಡೆವರಯ್ಯಾ ಒಡೆಯರು ತನು-ಮನ-ಧನದ ಮೇಲೆ;
ನುಡಿವರಯ್ಯಾ ಒಂದು ನಿಮಿಷ ಬಾರದಿರ್ದೊಡೆ;
ಜರೆವರಯ್ಯಾ ಒಡೆಯರು ಮನಬಂದ ಪರಿಯಲಿ;
ಶಿವ, ಶಿವಾ! ಅಣೆವರಯ್ಯಾ ಮಂಡೆಯನೂರಿ.
ಪ್ರಾಣದೊಡೆಯರಯ್ಯಾ, ಕೂಡಲ ಸಂಗಮದೇವಾ, ನಿಮ್ಮ ಶರಣರು.
|| ೩೩೯ ||

೯೧

ಅರ್ಥಪ್ರಾಣಾಭಿಮಾನಕ್ಕೆ ಒಡೆಯರು ಸದ್ಭಕ್ತರಲ್ಲದೆ
ಎನಗಾರೂ ಇಲ್ಲವಯ್ಯಾ.
'ಭೃತ್ಯಾಪರಾಧಃ ಸ್ವಾಮಿನೋ ದಂಡಃ'
ಕೂಡಲ ಸಂಗಮದೇವಾ ನೀವೇ ಪ್ರಮಾಣು. ॥ ೩೪೦ ॥

೯೨

ಅರ್ಚಿಸಲಱಿಯೆ, ಪೂಜಿಸಲಱಿಯೆ,
ನಿಚ್ಚ ನಿಚ್ಚ ಶಿವರಾತ್ರಿಯ ನಾ ಮಾಡಲಱಿಯೆ!
ಕಪ್ಪಡಿವೇಷದಿಂದಾನು ಬಂದಾಡವೆ, ಕಪ್ಪಡಿವೇಷದಿಂದ!
ಈಶ, ನಿಮ್ಮ ದಾಸರ ದಾಸಿಯ ದಾಸ ನಾನಯ್ಯಾ,
ನಿಮ್ಮ ವೇಷಧಾರಿಯ ಮನೆಯ ಪಂಗುಳ ನಾನಯ್ಯಾ,
ಕೂಡಲ ಸಂಗಮದೇವಾ,
ನಿಮ್ಮ ಲಾಂಛನವ ಧರಿಸಿಪ್ಪ ಉದರಪೋಷಕ ನಾನಯ್ಯಾ! ॥ ೩೪೧ ॥

೯೩

ಅಪ್ಪನು ಡೋಹಾರ ಕಕ್ಕಯ್ಯನಾಗಿ, ಮುತ್ತಯ್ಯ ಚೆನ್ನಯ್ಯನಾದರೆ
ಆನು ಬದುಕೆನೆ?
ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ
ಭಕ್ತಿಯ ಸದ್ಗುಣವ ನಾನಱಿವೆನಯ್ಯಾ.
ಕಷ್ಟಜಾತಿಯ ಜನ್ಮದಲ್ಲಿ ಜನಿಸಿದೆ:
ಎನಗಿದು ವಿಧಿಯೆ! ಕೂಡಲ ಸಂಗಮದೇವಾ? ॥ ೩೪೨ ॥

೯೪

ಉತ್ತಮಕುಲದಲ್ಲಿ ಹುಟ್ಟಿದೆನೆಂಬ
ಕಷ್ಟತನದ ಹೊಱೆಯ ಹೊಱಿಸದಿರಯ್ಯಾ---
ಕಕ್ಕಯ್ಯನೊಕ್ಕುದನಿಕ್ಕ, ನೋಡಯ್ಯಾ;
ದಾಸಯ್ಯ ಶಿವದಾನವನೆಱೆಯ, ನೋಡಯ್ಯಾ;
ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ;
ಉನ್ನತ ಮಹಿಮಾ,
ಕೂಡಲ ಸಂಗಮದೇವಾ, ಶಿವಧೋ! ಶಿವಧೋ!! ॥ ೩೪೩ ॥

೯೫

ಸೆಟ್ಟಿಯೆಂದೆಂಬೆನೆ ಸಿರಿಯಾಳನ? ಮಡಿವಾಳನೆಂದೆಂಬೆನೆ ಮಾಚಯ್ಯನ?
ಡೋಹಾರನೆಂದೆಂಬೆನೆ ಕಕ್ಕಯ್ಯನ?
ಮಾದಾರನೆಂದೆಂಬೆನೆ ಚೆನ್ನಯ್ಯನ?
ಆನು ಹಾರುವನೆಂದಡೆ ಕೂಡಲ ಸಂಗಯ್ಯ ನಗುವನಯ್ಯಾ! ||೩೮೪||

೯೬

ಚೆನ್ನಯ್ಯನ ಮನೆಯ ದಾಸಿಯ ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು—
ಇವರಿಬ್ಬರು ಹೊಲದಲಿ ಬೆರಣಿಗೆ ಹೋಗಿ ಸಂಗವ ಮಾಡಿದರು:
ಇವರಿಬ್ಬರಿಗೆ ಹುಟ್ಟಿದ ಮಗ ನಾನು.
ಕೂಡಲ ಸಂಗಮದೇವ ಸಾಕ್ಷಿಯಾಗಿ. ||೩೮೫||

೯೭

ಸೂಳೆಗೆ ಹುಟ್ಟಿದ ಕೂಸಿನಂತೆ
ಆರನಾದಡೆಯೂ 'ಅಯ್ಯಾ, ಅಯ್ಯಾ' ಎನಲಾಗದು.
ಚೆನ್ನಯ್ಯನೆಮ್ಮಯ್ಯನು: ಚೆನ್ನಯ್ಯನ ಮಗ ನಾನು.
ಕೂಡಲ ಸಂಗನ ಮಹಾಮನೆಯೊಳು
ಧರ್ಮಸಂತಾನ ಭಂಡಾರಿ ಬಸವಣ್ಣನು! ||೩೮೬||

೯೮

ಹರನು ಹೂಲಿಗನಾಗಿ, ಪುರಾತರೊಳಗಾಗಿ,
ಬಳಿ ಬಳಿಯಲು ಬಂದ ಮಾದಾರನ ಮಗ ನಾನಯ್ಯಾ,
ಕಳೆದ ಹೊಲೆಯನೆಮ್ಮಯ್ಯ: ಜಾತಿ ಸೂತಕ!
ಮಾದಾರನ ಮಗ ನಾನಯ್ಯಾ.
ಪನ್ನಗಭೂಷಣ ಕೂಡಲ ಸಂಗಯ್ಯಾ,
ಚೆನ್ನಯ್ಯನೆನ್ನ ಮುತ್ತಯ್ಯನಜ್ಜನಪ್ಪನಯ್ಯಾ!! ||೩೮೭||

೯೯

ಅಪ್ಪನು ನಮ್ಮ ಮಾದರ ಚೆನ್ನಯ್ಯಾ:
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ;
ಚಿಕ್ಕಯ್ಯನೆಮ್ಮಯ್ಯ, ಕಾಣಯ್ಯಾ;
ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ:
ಎನ್ನನೇತಕ್ಕರಿಯರಿ, ಕೂಡಲ ಸಂಗಯ್ಯಾ? ‖ ೩೪೮ ‖

೧೦೦

ಭಕ್ತಿಯಿಲ್ಲದ ಬಡವ ನಾನಯ್ಯಾ: ಕಕ್ಕಯ್ಯನ ಮನೆಯಲು ಬೇಡಿದೆ;
ಚೆನ್ನಯ್ಯನ ಮನೆಯಲು ಬೇಡಿದೆ,
ದಾಸಯ್ಯನ ಮನೆಯಲೂ ಬೇಡಿದೆ.
ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ
ಎನ್ನ ಪಾತ್ರೆ ತುಂಬಿತ್ತು, ಕೂಡಲ ಸಂಗಮದೇವಾ. ‖ ೩೪೯ ‖

೧೦೧

ಹಿರಿಯಯ್ಯ ಸ್ವಪಚಯ್ಯ, ಕಿರಿಯಯ್ಯ ಡೋಹಾರ ಕಕ್ಕಯ್ಯ.
ಅಯ್ಯಗಳಯ್ಯನು ನಮ್ಮ ಮಾದಾರ ಚೆನ್ನಯ್ಯನು;
ಕೂಡಲ ಸಂಗಮದೇವಾ,
ನಿಮ್ಮ ಶರಣರೊಲಿದೆನ್ನ ಸಲಹುವರಾಗಿ. ‖ ೩೫೦ ‖

೧೦೨

ಎಮ್ಮ ತಾಯಿ ನಿಂಬವ್ವೆ: ಕೆರೆನೀರ ತುಂಬುವಳು;
ಎಮ್ಮಯ್ಯ ಚೆನ್ನಯ್ಯ: ರಾಯಕಂದಣದ ಹೊಣೆಯ—
ಎಮಗಾರೂ ಇಲ್ಲೆಂದೆಂಬಿರಿ.
ಎಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು;
ಎಮ್ಮಜ್ಜರು ಪಡೆದ ಭಕ್ತಿಯ ನಿಮ್ಮ ಕೈಯಲು ಕೊಂಬೆ, ಕಾಣಾ,
ಕೂಡಲ ಸಂಗಮದೇವಾ ‖ ೩೫೧ ‖

೧೦೩

ಎನಗಾರೂ ಇಲ್ಲ, ಎನಗಾರೂ ಇಲ್ಲವೆಂಬರು:
ಬಾಣನವ ನಾನು, .ಮಯೂರನವ ನಾನು,
ಕಾಳಿದಾಸನವ ನಾನು !
ಕಕ್ಕಯ್ಯ ಹಿರಿಯಯ್ಯ ಚಿಕ್ಕಯ್ಯ ಚೆನ್ನಯ್ಯ
ಎತ್ತಿ ಮುದ್ದಾಡಿ ಸಲಹಿದರೆನ್ನ,
ಕೂಡಲ ಸಂಗಯ್ಯಾ. || ೩೫೨ ||

೧೦೪

ಅಯ್ಯಾ ನಿಮ್ಮ ವಂಶಾವಳಿಯಲು
ಒಬ್ಬ ತೊತ್ತಿನ ಮಗ ಹುಟ್ಟಿದಾತನ ತೊತ್ತಿನ ಮಗ ನಾನಯ್ಯಾ;
ಬಳಿದೊತ್ತು, ಬಳಗದೊತ್ತು, ವಂಶದೊತ್ತು ನಾನಯ್ಯಾ !
ಕೂಡಲ ಸಂಗಮದೇವಾ,
ನಿಮ್ಮ ಒಡೆತನಕ್ಕೆ ಕೇಡಿಲ್ಲವಾಗಿ
ಎನ್ನ ತೊತ್ತುತನಕ್ಕೆ ಕೇಡಿಲ್ಲಾ ! || ೩೫೩ ||

೧೦೫

ಕೈಯೆ ಬೋನಹರಿಗೆ, ಮಂಡೆಯ ಮೇಲೆ ಹಿಂಡು:
ಸಿಂಬಕನ ಮನೆಯ ಮಗ ನಾನಯ್ಯಾ;
ಕೂಡಲ ಸಂಗಮದೇವಯ್ಯಾ,
ಮಂಚಿಪ ಕೋಡೇಜಿ ಬಂದ ತೊತ್ತಿನ ಮಗ ನಾನಯ್ಯಾ. ||೩೫೪||

೧೦೬

ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ:
ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸಯ್ಯಾ:
'ತಾರೋ ಅಗ್ಘವಣಿಯ, ನೀಡೋ ಪತ್ರೆಯ,
ಲಿಂಗಕ್ಕೆ ಬೋನವ ಹಿಡಿಯೋ' ಎಂಬರು;
'ಕೂಡಲ ಸಂಗನ ಮಹಾ ಮನೆಯಲ್ಲಿ
ಒಕ್ಕುದನುಣ್ಣೋ, ತೊತ್ತೇ' ಎಂಬರು. || ೩೫೫ ||

೧೦೭

ಅನು, ನಿಮ್ಮ ಶರಣರಿಗೆ, ಮಂಡೆಯ ಬೋಳಿಸಿಕೊಂಡು
ಗಂಡುದೊತ್ತಾದೆನಯ್ಯಾ, ಕೂಡಲ ಸಂಗಮದೇವಾ,
ನಿಮ್ಮ ಶರಣರಿಗೆ. || ೩೫೬ ||

೧೦೮

ಅನುದಿನ ಮನಮುಟ್ಟಿ ಧನ್ಯನಯ್ಯಾ, ದಮ್ಮಯ್ಯಾ! ದಮ್ಮಯ್ಯಾ!
ನಿಮ್ಮ ಧರ್ಮದ ಕವಿಲೆಯಾನಯ್ಯಾ!
ಕೂಡಲ ಸಂಗಮದೇವಯ್ಯಾ,
ನಿಮ್ಮ ಶರಣರ ಮನೆಯ ಮಗ ನಾನಯ್ಯಾ! || ೩೫೭ ||

೧೦೯

ಕಾಮನ ತೋಱಿದಾತ, ಹೇಮವ ಜಱಿದಾತ,
ಭಾನುವಿನ ಉದಯಕ್ಕೆ ಒಳಗಾಗದ ಶರಣನು!
ಆಗಳೂ ನಿಮ್ಮ ಮಾಣದೆ ನೆನೆವರ ಮನೆಯಲು
ಶ್ವಾನನಾಗಿರಿಸು, ಮಹಾದಾನಿ, ಕೂಡಲ ಸಂಗಮದೇವಾ. || ೩೫೮ ||

೧೧೦

ಮೇಲಾಗಲೊಲ್ಲೆನು ಕೀಳಾಗಲಲ್ಲದೆ:
ಕೀಳಿಂಗಲ್ಲದೆ ಹಯನ ಕಱೆವುದೆ?
ಮೇಲಾಗಿ ನರಕದೊಳೋಲಾಡಲಾಱೆನು:
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು,
ಮಹಾದಾನಿ ಕೂಡಲ ಸಂಗಮದೇವಾ. || ೩೫೯ ||

೧೧೧

ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯನೊಲ್ಲೆ;
ಮತ್ತಾವ ಪದವಿಯನೊಲ್ಲೆನಯ್ಯಾ!
ಕೂಡಲ ಸಂಗಮದೇವಾ, ನಿಮ್ಮ ಸದ್ಭಕ್ತರ
ಪಾದವನಱಿದಿಪ್ಪ ಮಹಾಪದವಿಯನೆ ಕರುಣಿಸಯ್ಯಾ. || ೩೬೦ ||

೧೧೨

ಕಾಗೆ ವಿಷ್ಟಿಸುವ ಹೊನ್ನ ಕಳಸವಹುದಲ್ಲಂದ
ಒಡೆಯರು ಯೋಗ್ಯಿಸುವ ಚಮ್ಮಾವುಗೆಯ ಮಾಡಯ್ಯಾ;
ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯಾ!
॥ ಶ್ಲೋಕ ॥ ಕರ್ಪೂರವಲಂಬನಂ ಕೇಚಿತ್ । ಕೇಚಿತ್ ಜ್ಞಾನಾವಲಂಬನಂ
ವಯಂ ತು ಶಿವಭಕ್ತಾನಾಂ । ಪಾದುಕಸ್ಯಾವಲಂಬನಂ
ಕೂಡಲ ಸಂಗಮದೇವಾ,
ನಿಮ್ಮ ನಿಶಗೊಡ್ಡಿ ಬೇಡು[ವ]ದೊಂದೇ ವರವ ಕರುಣಿಸಯ್ಯಾ.
॥ ೩೬೧ ॥

೧೧೩

ಅಪಾನ ಭಾವದಲ್ಲಿ ನೋಡಿ ಕೂಡಿಹೆನೆಂಬರ
ಬಾಗಿಲ ತೋರಿಜಯ್ಯಾ.
ತನುವನೊಪ್ಪಿಸಿದವರ, ಮನವನೊಪ್ಪಿಸಿದವರ, ಧನವನೊಪ್ಪಿಸಿದವರ
ಬಾಗಿಲ ತೋರಿಜಯ್ಯಾ.
ಇವನೆಲ್ಲವನೊಪ್ಪಿಸಿ ಜಂಗಮವೆನ್ನವರೆನ್ನವರೆನ್ನವರೆಂಬವರ
ಕೆರಹ ಹೊತ್ತಿರಿಸೆನ್ನನು, ಕೂಡಲ ಸಂಗಮದೇವಾ. ॥ ೩೬೨ ॥

೧೧೪

ಅಯತ, ಸ್ವಾಯತದನುಭಾವವ ನಾನೆತ್ತ ಬಲ್ಲೆನು?
ಲಿಂಗ-ಜಂಗಮಕ್ಕೆ ಮಾಡಿ ನೀಡುವ
ಅಚ್ಚ ಶರಣರ ಮನೆಯಲು ಭೃತ್ಯನಾಗಿಪ್ಪೆನಯ್ಯಾ;
ಇದು ಕಾರಣ: ಕೂಡಲ ಸಂಗನ ಶರಣರಲ್ಲದೆ ಅನ್ಯವನರಿಯೆನಾಗಿ.
॥ ೩೬೩ ॥

೧೧೫

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ
ಅಂಬುಜಕೆ ಭಾನುವಿನುದಯದ ಚಿಂತೆ
ಭ್ರಮರಂಗೆ ಪರಿಮಳ[ದ] ಬಂಡುಂಬ ಚಿಂತೆ
ಎನಗೆ ನಮ್ಮ ಕೂಡಲ ಸಂಗಮದೇವರ ನೆನವುದೆ ಚಿಂತೆ. ॥ ೩೬೪ ॥

೧೧೬

ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ:
ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ,
  ಬಯಸುತ್ತಿರ್ದೆನಯ್ಯಾ ನಿಮ್ಮ ಶರಣರ ಬರವನು,
  ಬಯಸುತ್ತಿರ್ದೆನಯ್ಯಾ ನಿಮ್ಮ ಭಕ್ತರ ಬರವನು.
ದಿನಕರನುದಯಕ್ಕೆ ಕಮಳ ವಿಕಸಿತವಾದಂತೆ
  ಎನಗೆ ನಿಮ್ಮ ಶರಣರ ಬರವು, ಕೂಡಲ ಸಂಗಮದೇವಾ. || ೨೬೫ ||

೧೧೭

ಸೂರ್ಯನುದಯ ತಾವರೆಗೆ ಜೀವಾಳ,
  ಚಂದ್ರಮನುದಯ ನೆಯ್ದಿಲೆಗೆ ಜೀವಾಳ,
  ಕೂರ್ಪರ ತಾವಿನಲ್ಲಿ ಕೂಟ ಜೀವಾಳ,
  ಒಲಿದ ತಾವಿನಲ್ಲಿ ನೋಟ ಜೀವಾಳವಯ್ಯಾ:
  ಕೂಡಲ ಸಂಗನ ಶರಣರ ಬರವೆನಗೆ ಪ್ರಾಣ ಜೀವಾಳವಯ್ಯಾ !
|| ೨೬೬ ||

೧೧೮

ಜಲವ ತಪ್ಪಿದ ಮತ್ಸ್ಯ ಬದುಕುವುದೇ ಸೋಜಿಗ:
  ಗಣತಿಂತಿಣಿಯೊಳಗಿರಿಸೆನ್ನನು, ಲಿಂಗವೇ,
  ಶಿವ, ಶಿವಾ, ಕೂಡಲ ಸಂಗಮದೇವಾ,
  ಸೆರಗೊಡ್ಡಿ ಬೇಡುವೆನು. || ೨೬೭ ||

೧೧೯

ಅಯ್ಯಾ, ನಿಮ್ಮ ಮಹಾವ್ರತಿಗಳನಗಲಿ ಬರ್ದುಂಕಲಾರೆನು:
  ಶಿವಘೋ, ಶಿವಘೋ, ಕಂಗಳಶ್ರುಗಳಲ್ಲಿ ಮುಂದುಗಾಣೆನು;
  ಲಿಂಗಸಂಗಿಗಳನಗಲಿ ನಾನೆಂತು ಬರ್ದುಂಕುವೆ
  ಕೂಡಲ ಸಂಗಮದೇವಾ ? || ೨೬೮ ||

೧೨೦

ಜಜ್ಝನೆ ಜರಿದೆನು, ಜಜ್ಝನೆ ಜರಿದೆ, ನೋಡಯ್ಯಾ !
ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆ, ನೋಡಯ್ಯಾ !
ನಾನೊಬ್ಬನೆ ಉಳಿದೆನು, ನಾನೊಬ್ಬನೆ ಉಳಿದೆ,
ಕೂಡಲ ಸಂಗಮದೇವಾ, ನಿಮ್ಮ ಶರಣರನಗಲಿದ ಕಾರಣ! ‖ ೩೬೯ ‖

೧೨೧

ಕಂಡರೆ ಮನೋಹರವಯ್ಯಾ: ಕಾಣದಿದ್ದರೆ ಅವಸ್ಥೆ ! ನೋಡಯ್ಯಾ !
ಹಗಲಿರುಳಹುದು: ಇರುಳು ಹಗಲಹುದು !
ಎಂತಯ್ಯಾ ? ಆಳವಾಡಿ ಕಳೆವೆನು !
ಒಂದು ಜುಗ ಮೇಲೆ ಕೆಡೆದಂತೆ !
ಕೂಡಲ ಸಂಗನ ಶರಣರನಗಲುವ ದಾವತಿಯಿಂದ
ಮರಣವೇ ಲೇಸು ಕಂಡಯ್ಯಾ. ‖ ೩೭೦ ‖

೧೨೨

ಅಂಗೈ ತಿಂದುದೆನ್ನ, ಕಂಗಳು ಕೆತ್ತಿಹುವಯ್ಯಾ :
ಬಂದಹರಯ್ಯಾ ಪುರಾತರೆನ್ನ ಮನೆಗೆ,
ಬಂದಹರಯ್ಯಾ ಶರಣರೆನ್ನ ಮನೆಗೆ !
ಕಂಡ ಕನಸು ದಿಟವಾಗಿ ಜಂಗಮ ಮನೆಗೆ ಬಂದರೆ,
ಶಿವಾರ್ಚನೆಯ ಮಾಡಿಸುವೆ,
ಕೂಡಲ ಸಂಗಮದೇವಾ, ನಿಮ್ಮ ಮುಂದೆ. ‖ ೩೭೧ ‖

೧೨೩

ಲಿಂಗವ ಪೂಜಿಸುತ್ತ ಜಂಗಮದ ಮುಖವ ನೋಡುತ್ತಿಪ್ಪ
ಸುಖವ ಕೊಡು, ಕಂಡಾ, ಲಿಂಗವೇ—
ಪರಮಸುಖವ ಕೊಡು, ಕಂಡಾ, ಲಿಂಗವೇ--
ಕೂಡಲ ಸಂಗಮದೇವಾ, ಇದೇ ವರವ ನಿಮ್ಮಲ್ಲಿ ಬೇಡುವೆ. ‖ ೩೭೨ ‖

೧೨೪

ಮನೆದೈವ, ಕುಲದೈವ ಎನಗೆ ನಿಮ್ಮವರಯ್ಯಾ!
ತನು ಮೀಸಲು, ಮನ ಮೀಸಲು, ನಯನ ಮೀಸಲು ಎನ್ನ,
ಕೂಡಲ ಸಂಗಮದೇವಾ, ನಿಮ್ಮ ಶರಣರಿಗೆ. || ೩೭೩ ||

೧೨೫

ಗಿಳಿಯ ಪಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ
ಬರವ ಹಾರುತ್ತಿದ್ದೆನೆಲಗವ್ವಾ.
ತಱಗೆಲೆ ಗಿಱಕೆಂದೊಡೆ ಹೊಱಗನಾಲಿಸುವೆ :
ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲಗವ್ವಾ!
ಕೂಡಲ ಸಂಗನ ಶರಣರು ಬಂದು, ಬಾಗಿಲ ಮುಂದೆ ನಿಂದು
'ಶಿವಾ' ಎಂದಡೆ, ಸಂತೋಷಬಟ್ಟೆನೆಲಗವ್ವಾ! || ೩೭೪ ||

೧೨೬

ಅಡವಿಯಲೊಬ್ಬ ಕಡುನೀರಡಸಿ,
ಎಡೆಯಲ್ಲಿ ನೀರಕಂಡಂತಾಯಿತ್ತಯ್ಯಾ!
ಕುರುಡ ಕಣ್ಣ ಪಡೆದಂತೆ,
ಬಡವ ನಿಧಾನವ ಕಂಡಂತಾಯಿತ್ತಯ್ಯಾ!
ನಮ್ಮ ಕೂಡಲ ಸಂಗನ ಶರಣರ ಬರವೆನ್ನ ಪ್ರಾಣ, ಕಂಡಯ್ಯಾ!
|| ೩೭೫ ||

೧೨೭

ಇಂದೆನ್ನ ಮನೆಗೆ ಪ್ರಮಥರು ಬಂದಹರೆಂದು
ಗುಡಿತೋರಣವ ಕಟ್ಟಿ, ಷಡುಸಮ್ಮಾರ್ಜನೆಯ ಮಾಡಿ,
ರಂಗವಾಲಿಯನಿಕ್ಕಿ 'ಉಘೆ, ಚಾಂಗು, ಭಲಾ ಎಂಬೆ;
ತಮ್ಮ ಒಕ್ಕುದನಿಕ್ಕಿ ಸಲಹುವರಾಗಿ,
ಕೂಡಲ ಸಂಗನ ಶರಣರು. || ೩೭೬ ||

೧೨೮

ಸಾಸವೆಯ ಮೇಲೆ ಸಾಗರವಱದಂತಾಯಿತ್ತಯ್ಯಾ;
ಆನಂದದಿಂದ ನಲಿನಲಿದಾಡುವೆ,
ಆನಂದದಿಂದ ಕುಣಿಕುಣಿದಾಡುವೆ:
ಕೂಡಲ ಸಂಗನ ಶರಣರು ಬಂದರೆ,
ಉಬ್ಬಿ, ಕೊಬ್ಬಿ, ಹರುಷದಲೋಲಾಡುವೆ!

೧೨೯

ಮನ ಮನ ಬೆರಸಿದಲ್ಲಿ ತನು ಕರಗದಿದ್ದರೆ,
ಸೋಂಕಿನಲ್ಲಿ ಪುಳಕಂಗಳು ಹೊಱಹೊಮ್ಮದಿದ್ದರೆ;
ಕಂಡಾಗಳಶ್ರುಜಲಂಗಳು ಸುರಿಯದಿದ್ದರೆ,
ನುಡಿವಲ್ಲಿ ಗದ್ಗದಂಗಳು ಹೊಱಹೊಮ್ಮದಿದ್ದರೆ—
ಕೂಡಲ ಸಂಗಮದೇವರ ಭಕ್ತಿಗಿದು ಚಿಹ್ನ,—
ಎನ್ನಲ್ಲಿಯಿಲ್ಲವಾಗಿ, ಆನು ಡಂಭಕ ಕಾಣಿರೇ! || ೩೭೮ ||

೧೩೦

ಅಷ್ಟವಿಧಾರ್ಚನೆ ಷೋಡಶೋಪಚಾರವನು—
ಅರಸಱಿಯದ ಬಿಟ್ಟಿಯ—ಮಾಡುವೆನು!
ಎನ್ನ ತಾಗಿದ ಸುಖವ ಜಂಗಮಕ್ಕರ್ಪಿಸಲಱಿಯದ ಉಪಚಾರಿಯಾನು,
ಸ್ಥಾವರಜಂಗಮವಱಿಯದ ಪೂಜಕ ನಾನು:
ಮತ್ತೆ ನಾಚದೆ, ಕೂಡಲ ಸಂಗಮದೇವಯ್ಯಾ,
ಜಂಗಮವೆನ್ನ ಪ್ರಾಣಲಿಂಗವೆಂಬೆನು! || ೩೭೯ ||

೧೩೧

ಆವಿಗೆಯಲೊದಗಿದ ಕರ್ಪನಂತೆ,
ಅಮೃತದೊಳಗಿರ್ದ ಸರ್ಪನ ತನುವಿನಂತೆ,
ಇರ್ದೆನಯ್ಯಾ ನಾನು, ಹೊಱಗೆ ನುಣ್ಣಾಗಿ!
ಸಿಂಗಕ್ಕೊಲಿದ ಮದಕರಿಯಂತೆ
ಆನು ಜಂಗಮಕ್ಕೊಲಿದೆನಯ್ಯಾ, ಕೂಡಲ ಸಂಗಮದೇವಾ! ||೩೮೦||

೧೩೨

'ಸ್ಥಾವರ ಜಂಗಮ ಒಂದೇ'ಯೆಂಬ ಇದಿರ ನುಡಿವೆ!
ನಾನೆಡಹುತಿಪ್ಪೆ : ಸಹಜನಲ್ಲಯ್ಯಾ!
ಆನು ಸಮ್ಯಕ್ಕನಲ್ಲಯ್ಯಾ!
'ಆನುಭಯಲಿಂಗಸಂಗಿ'ಯೆಂಬೆನು :
ಈ ನುಡಿ ನುಡಿದಿಹುದೆ, ಕೂಡಲ ಸಂಗಮದೇವಾ? ॥ ೩೬೧ ॥

೧೩೩

ಮಹಿಮನೇಸು ಕಾಲ ಬೆಳಗಿದರೆ, ಬೆಳದಾಗ ಬಲ್ಲುದೆ?
ಕರ್ಮಸ್ಥಿತಿ ಬೆನ್ನ ಬಿಡದು.
ಅನಂತಕೋಟಿ ಸನ್ಯಾಸವ ಮಾಡಿದರೇನು?
ನಿಮಿಷಮನಾಸೀನ ಕೆಡಿಸಿತ್ತು!
ನಿಮ್ಮ ನಂಬಿಯೂ ನಂಬದ ಡಂಬಕ ನಾನಯ್ಯಾ!
ಕೂಡಲ ಸಂಗಮದೇವಾ. ॥ ೩೬೨ ॥

೧೩೪

ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ!
ಉಪ್ಪು ಅಪ್ಪುವಿನಲ್ಲಿ ಅದ್ದಿ ಹುಲಿದಂತಾಯಿತ್ತೆನ್ನ ಭಕ್ತಿ!
ಕೂಡಲ ಸಂಗಮದೇವಾ, ಆನು ಮಾಡಿದೆನೆಂಬೀ ಕಿಚ್ಚು ಸಾಲದೆ?
॥ ೩೬೩ ॥

೧೩೫

ಅಷ್ಟವಿಧಾರ್ಚನೆ ಷೋಡಶೋಪಚಾರವ
ಮಾಡುವ ಹಮ್ಮಿನಲ್ಲಿ ಬೆಂದೆನಯ್ಯಾ
ಲಿಂಗವೆಂದಡೆಯು, ಜಂಗಮವೆಂದಡೆಯು, ಪ್ರಸಾದವೆಂದಡೆಯು!
ಆನು ಬೆಂದೆನಯ್ಯಾ, ಕೂಡಲ ಸಂಗಮದೇವಾ :
ಆನು ಮಾಡುವುದೆಲ್ಲಾ ಉಪಚಾರವಯ್ಯಾ! ॥ ೩೬೪ ॥

೧೩೬

ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ:
ಎನ್ನ ಭಕ್ತನೆಂಬರು, ಎನ್ನ ಸಮಯಾಚಾರಿಯೆಂಬರು !
ನಾನೇನು ಪಾಪವ ಮಾಡಿದೆನೊ :
ಬೆಳೆಯುವ ಮುನ್ನವೆ ಕೊಯ್ವರೆ? ಹೇಳಾ, ಅಯ್ಯಾ !
ಇರಿಯುವ ವೀರ! ಇಲ್ಲದ ಸೊಬಗವ
ಎಲ್ಲಾ ಒಡೆಯರು ಏಱಿಸಿ ನುಡಿವರು !
ಎನಗಿದು ವಿಧಿಯೆ ಕೂಡಲ ಸಂಗಮದೇವಾ ? || ३೮೫ ||

೧೩೭

ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಹೊಗಳಿ, ಹೊಗಳಿ!
ಎನ್ನ ಹೊಗಳತೆ ಎನ್ನನಿಮ್ಮೆಯ್ಗೊಂಡಿತ್ತಲ್ಲಾ !
ಅಯ್ಯೊ, ನಿಮ್ಮ ಮನ್ನಣೆಯೇ ಮಸೆದಲಗಾಗಿ ತಾಗಿತ್ತಲ್ಲಾ !
ಅಯ್ಯೋ! ನೊಂದೆನು, ಸೈರಿಸಲಾಱೆನು:
ಕೂಡಲ ಸಂಗಮದೇವಾ, ನೀನೆನಗೊಳ್ಳಿದನಾದರೆ,
ಎನ್ನ ಹೊಗಳತೆಗಡ್ಡ ಬಾರಾ, ಧರ್ಮೀ ! || ३೮೬ ||

೧೩೮

ಎನ್ನವರೆನಗೊಲಿದು ಹೊನ್ನ ಶೂಲವನಿಕ್ಕಿದರಯ್ಯಾ !
ಅಹಂಕಾರವೂರಾಯಘಾಯದಲ್ಲಿ
ಆನೆಂತು ಬದುಕುವೆನೆಂತು ಜೀವಿಸುವೆ ?
ಜಂಗಮವಾಗಿ ಬಂದು ಜಱಿದು ಶೂಲವನಿಳುಹಿ
ಪ್ರಸಾದದ ಮದ್ದನಿಕ್ಕಿ, ಸಲಹು,
ಕೂಡಲ ಸಂಗಮದೇವಾ. || ३೮೭ ||

೧೪೯

ಎಡದ ಕೈಯಲು ಹಾಲ ಬಟ್ಟಲು, ಬಲದ ಕೈಯಲ್ಲಿ ಓಜುಗಟ್ಟಿಗೆ:
ಆವಾಗ ಬಂದಾನೋ, ನಮ್ಮಯ್ಯ,
ಬಡಿದು ಹಾಲ ಕುಡಿಸುವ ತಂದೆ?

ದಂಡಕ್ಷೀರದ್ವಯ ಹಸ್ತಂ । ಜಂಗಮಂ ಭಕ್ತಿಮಂದಿರಂ
ಅತಿಭಕ್ತಿಲಿಂಗಸಂತುಷ್ಟಂ । ಅಪಹಾಸ್ಯಂ ಯಮದಂಡನಂ

ಎಂದುದಾಗಿ, ಕೂಡಲ ಸಂಗಮದೇವಯ್ಯ, ತಾನೇ,
ಭಕ್ತಿಪಥವ ತೋಱುವ ತಂದೆ! || ೩೮೮ ||

೧೫೦

ಎನ್ನ ಆಪತ್ತು, ಸುಖ-ದುಃಖವನಿನ್ನಾರಿಗೆ ಹೇಳುವೆ?
ಶರಣಸ್ಥಳದವರಿಗೆ ಹೇಳಿದರೆ ಮಚ್ಚರ!
ಸವತಿ ಸಕ್ಕರೆ—ಬೇವು ಬೆಲ್ಲ ಉಂಟೆ?
ಇನ್ನಾರಿಗೆ ಹೇಳುವೆ?
ಕೂಡಲ ಸಂಗಮದೇವಾ, ಜಂಗಮವಾಗಿ ಬಂದು
ಎನ್ನ ಮನದ ಸೂತಕವ ಕಳೆಯಾ. || ೩೮೯ ||

೧೫೧

ನಾನಾಸ್ಥಾನಂಗಳಲ್ಲಿ ಬಂದು ಕುಳ್ಳಿರ್ದುದು ತೆರಳುವುದೆ, ಅಯ್ಯಾ:
ಉಭಯಕುಳಕ್ಕಲ್ಲದೆ ತೆರಳದು.
ಬೀದಿಯಲ್ಲಿ ಬಿದ್ದ ಶಿಶುವನು
ಹೆತ್ತ ತಾಯಿ ಹತ್ತರ ಬಂದು ಎತ್ತುವಂತೆ!
ಎನ್ನನಾಱು ಜನ್ಮಕ್ಕೆ ತಂದು ಅಘೋರನರಕದಲ್ಲಿಕ್ಕಿದುದ ನಾ ಬಲ್ಲೆ:
ಕೂಡಲ ಸಂಗಮದೇವಾ ನಿಮ್ಮ ಹಂಗೇನು? ಹಱಿಯೇನು?
ಆನುಭಯ ಲಿಂಗಜಂಗಮದ ಮಱೆಹೊಕ್ಕು ಬದುಕಿದೆನು. || ೩೯೦ ||

೧೫೨

ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ:
ಮೀನಜ, ರೋಮಜ ಮಹಾಮುನಿಗಳ

ಲಯವ ಮಾಡಿದುದ ನಾ ಬಲ್ಲೆನಾಗಿ.
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ :
ನವಕೋಟಿ ಬ್ರಹ್ಮರಿಗೆ
ಪ್ರಳಯವ ಮಾಡುವದ ನಾ ಬಲ್ಲೆನಾಗಿ.
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ :
ದಶಕೋಟಿ ನಾರಾಯಣರಿಗೆ
ಮರಣವ ಮಾಡುವುದ ನಾ ಬಲ್ಲೆನಾಗಿ.
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ :
ಅನಂತಕೋಟಿ ರುದ್ರರಿಗೆ
ಲಯವ ಮಾಡುವದ ನಾ ಬಲ್ಲೆನಾಗಿ.
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ !
ಎನ್ನನೇಳೇಳು ಭವಕ್ಕೆ ತಂದಲ್ಲಿ
ಆನುಭಯ ಲಿಂಗಜಂಗಮದ ಮಱೆಹೊಕ್ಕು
ಭವಂ ನಾಸ್ತಿಯಾಗಿ ಬದುಕಿದೆನಯ್ಯಾ,
ಕೂಡಲ ಸಂಗಮದೇವಾ. ॥ ೩೯೧ ॥

೧೪೩

ಲಿಂಗದರುಶನ ಕರಮುಟ್ಟಿ, ಜಂಗಮದರುಶನ ಸಿರಮುಟ್ಟಿ
ಆವುದು ಘನವೆಂಬೆ, ಆವುದು ಕಿಱಿದೆಂಬೆ ?
ತಾಳಸಂಪುಟಕ್ಕೆ ಬಾರದ ಘನವ ಅರ್ಪಿಸ ಹೋದರೆ,
ಅರ್ಪಣ ಮುನ್ನವೆ ಇಲ್ಲ : ಗಮನ ನಿರ್ಗಮನವಾಯಿತ್ತು !
ಈ ಉಭಯ ಭೇದವನಱಿಯರಾಗಿ :
ಜಂಗಮವೆ ಲಿಂಗ, ಕೂಡಲ ಸಂಗಮದೇವಾ. ॥ ೩೯೨ ॥

೧೪೪

ಶಿವಭಕ್ತರೆ ಅಧಿಕರು, ನೋಡಯ್ಯಾ, ಎಲ್ಲರಿಂದವು:
ಇದಕ್ಕೆ ಅಧಿಕವಾಗಿ ಜಂಗಮವ ಕಂಡೆ.
ಈ ದ್ವಿವಿಧವನೊಂದೇ ಎಂದು ನಂಬಿದೆ,
ಕೂಡಲ ಸಂಗಮದೇವಾ. ॥ ೩೯೩ ॥

೧೪೫

ಕೃತಯುಗದಲ್ಲಿ ಕೇ[ದಾ]ರವೆಂಬ ಮೂಲಸ್ಥಾನ;
ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ;
ದ್ವಾಪಾರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ;
ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ.
ನಾನಾ ಸ್ಥಾನಂಗಳ ಮುಟ್ಟದೆ ಜಂಗಮವೆ ಲಿಂಗವೆಂದು ನಂಬಿದೆ,
ಕೂಡಲ ಸಂಗಮದೇವಾ. || ೩೯೪ ||

೧೪೬

ಭಕ್ತದೇಹಿಕದೇವನಪ್ಪ ದೇವನು ಸದ್ಭಕ್ತರ ಬಳಿಯಲು ಬಪ್ಪನಾಗಿ,
ಆಳ್ದನು ಬರಲು ಆಳು ಮಂಚದ ಮೇಲಿಪ್ಪುದು ಗುಣವೇ? ಹೇಳಾ.
ಕೂಡಲ ಸಂಗಮದೇವರು—
ಜಂಗಮರೂಪಾಗಿ ಸಂಗಯ್ಯ ಬಂದಾನೆಂದು
ಎಂದೆಂದೂ ನಾನು ಮಂಚವನೇಱದ ಭಾಷೆ ! || ೩೯೫ ||

೧೪೭

ಜಂಗಮದ ಸನ್ನಿಧಿಯಲ್ಲಿ ನಾನು
ವಾಹನವನೇಱಲಮ್ಮೆ; ಏಱಿದರೆ ಭವ ಹಿಂಗದು !
ಅದೇನು ಕಾರಣ: ಮುಂದೆ ಸೂಲವನೇಱುವ ಪ್ರಾಪ್ತಿಯುಂಟಾದ ಕಾರಣ!
ಜಂಗಮ ಬರಲಾಸನದಲ್ಲಿರಲಮ್ಮೆ: ಇದ್ದರೆ ಭವ ಹಿಂಗದು !
ಏನು ಕಾರಣ: ಮುಂದೆ ಕಾಯ್ದಿಟ್ಟಿಗೆಯ ಮೇಲೆ
ಕುಳ್ಳಿರಿಸುವ ಪ್ರಾಪ್ತಿಯುಂಟಾದ ಕಾರಣ.
ಜಂಗಮದ ಮುಂದೆ ದಿಟ್ಟತನದಲ್ಲಿ ಬೆಱೆತು ನಿಂದಿರಲಮ್ಮೆನು:
ನಿಂದರೆ ಭವ ಹಿಂಗದಾಗಿ !
ಏನು ಕಾರಣ: ಮುಂದೆ ಹೆಡಗುಡಿಯ ಕಟ್ಟಿ
ಕುಳ್ಳಿರಿಸುವ ಪ್ರಾಪ್ತಿಯುಂಟಾದ ಕಾರಣ!
ಇಂತೀ ಬಾಧೆ ಭವಂಗಳಿಗಂಜುವೆನಯ್ಯಾ.
ನಿನ್ನವರ ಸುಳುಹು ನೀನೆಂದೇ ಭಾವಿಸಿ, ತೊತ್ತು-ಭೃತ್ಯನಾಗಿಪ್ಪೆನಯ್ಯಾ
ಕೂಡಲ ಸಂಗಮದೇವಾ. || ೩೯೬ ||

೧೪೮

ಜಂಗಮವಿರಹಿತ ಲಿಂಗಾರ್ಚನೆ ಓಡು ಬಲಲೆಱೆದ ಜಲದಂತೆ !
ಜಂಗಮಸನ್ನಿಹಿತ ಲಿಂಗಾರ್ಚನೆ : ಇದೆ ಭಕ್ತಿಗೆ ಪಥವಯ್ಯಾ.
ಜಂಗಮ ಪ್ರಸಾದಭೋಗೋಪಭೋಗವು :
ಎನಗಿದೇ ಲಿಂಗಾರ್ಚನೆ.
ಬೇಱೆ ಮತ್ತೊಂದಱಿದೆನಾದರೆ,
ಕೂಡಲ ಸಂಗಮದೇವ ನರಕದಲ್ಲಿಕ್ಕುವ. || ೩೯೭

೧೪೯

ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ ?
ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ ?
ಜಂಗಮವಿಲ್ಲದೆ ಮಾಡಬಹುದೆ ?
ರೂಢೀಶನ ಭೇದಿಸಬಹುದೆ ?
ಒಡಲಿಲ್ಲದ ನಿರಾಳ ಕರ್ತೃ, ಕೂಡಲ ಸಂಗಮದೇವ
ಜಂಗಮ ಮುಖವಾದನಾಗಿ ಮತ್ತೊಂದನಱಿಯೆನಯ್ಯಾ. || ೩೯೮

೧೫೦

ಸಮಯೋಚಿತದಲ್ಲಿ ಲಿಂಗಾರ್ಚನೆಯ ಮಾಡುತಿಪ್ಪನಾ ಭಕ್ತನು :
ಮಾಡಿದರೆ ಮಾಡಲಿ : ಮಾಡಿದರೆ ತಪ್ಪೇನು ?
ಆ ಜಂಗಮದ ಶಬ್ದವ ಕೇಳಿ ಪ್ರಸಾದಕ್ಕೆ ಕೈದುಡಿಕಿದರೆ
ಅದು ಪ್ರಸಾದವಲ್ಲ : ಕಲ್ಮಷ !
ಆ ಸಮಯೋಚಿತದಲ್ಲಿ ಬಂದ ಜಂಗಮದ ಶಬ್ದವ ಕೇಳಿ
ಪ್ರಸಾವಕ್ಕೆ ಕೈದೆಗೆದರೆ, ಅದು ಲಿಂಗಕ್ಕೆ ಬೋನ.
ಇದು ಕಾರಣ, ಕೂಡಲ ಸಂಗಮದೇವಾ,
ಇಂತಪ್ಪ ಸದಾಚಾರಿಗಳನೆನಗೆ ತೋಱಾ. || ೩೯೯

೧೫೧

ಉತ್ತಮ, ಮಧ್ಯಮ, ಕನಿಷ್ಠವೆಂದು ಬಂದ ಜಂಗಮವನೆಂದೆನಾದರೆ
ನೊಂದೆನಯ್ಯಾ, ಬೆಂದೆನಯ್ಯಾ, ಎನ್ನ ಕಿಚ್ಚು ಎನ್ನ ಸುಟ್ಟಿತ್ತು
ಸು[ಖಿ] ಜಂಗಮ, ಸಾಮಾನ್ಯ ಜಂಗಮವೆಂದುಂಟೆ,
ಕೂಡಲ ಸಂಗಮದೇವಾ ? || ೪೦೦

೧೫೨

ಲಾಂಛನವ ಕಂಡು ನಂಬುವೆ: ಅವರಂತರಂಗವ ನೀನೇ ಬಲ್ಲೆ!
  ತೊತ್ತಿಂಗೆ ತೊತ್ತುಗೆಲಸವಲ್ಲದೆ, ಅರಸರ ಸುದ್ದಿ ಎನಗೇಕಯ್ಯಾ?
ರತ್ನವೌಕ್ತಿಕದಚ್ಚು, ಕೂಡಲ ಸಂಗಮದೇವಾ ನಿಮ್ಮ ಶರಣರು.
|| ೪೦೧ ||

೧೫೩

ಆರಾರ ಮನದಲ್ಲಿ ಏನೇನಿಹುದೆಂದರಿಯೆ:
  ಒಳ್ಳಿಹರೆಂದೆಲವ್ಮ; ಹೊಲ್ಲಹರೆಂದೆನಲವ್ಮ!
ಶಿವಭಕ್ತರಾದ ಕಾರಣ, ಜಂಗಮವೇ ಲಿಂಗ,
  ಕೂಡಲ ಸಂಗಮದೇವಾ! || ೪೦೨ ||

೧೫೪

ಸಂಗಸಹಿತ ಶರಣರು ಬಂದರೆ ನಂಬುವುದೆನ್ನ ಮನವು,
  ನಚ್ಚುವುದೆನ್ನ ಮನವು!
ಹಾವು ನೇಣೆಂಬ ಭ್ರಾಂತುಳ್ಳನ್ನಕ್ಕ ನಾನು ಭಕ್ತನೆಂತಪ್ಪೆನು?
ಅಂಗ ಲಿಂಗಸಹಿತವಾಗಿ ಬಂದರೆ
  ಸಂಗ ನೀನೆಂದು, ಮತ್ತೆ ಮನದಲ್ಲಿ ಸಂದೇಹ ಹೊಳೆದರೆ
  ಬೆಂದೆನಲ್ಲಾ ನಾನು, ಕೂಡಲ ಸಂಗಮದೇವಾ! || ೪೦೩ ||

೧೫೫

ಕೆಂಡದಲ್ಲಿಟ್ಟಡೆ ಮೆಯಣ್ ಬೆಂದುದೆಂಬರು:
  ಕೊಂಡಿಟ್ಟವನ ಕೈ ಮುನ್ನವೇ ಬೆಂದುದು!
ನೊಂದೆನಾನು ನೊಂದೆನಯ್ಯಾ, ಬೆಂದೆನಾನು ಬೆಂದೆನಯ್ಯಾ!
  ಕೂಡಲ ಸಂಗನ ಶರಣರ ಕಂಡು ಕಾಣದಂತಿದ್ದರೆ
  ನಾನಂದೇ ಬೆಂದೆನಯ್ಯಾ! || ೪೦೪ ||

೧೫೬

ಎಡದ ಕೈಯಲಿ ನಿಗಳವನಿಕ್ಕಿ
  ಬಲದ ಕೈಯ ಕಡಿದುಕೊಂಡರೆ ನೋಯದಿಪ್ಪುದೆ?

ಪ್ರಾಣವೊಂದಾಗಿ ದೇಹ ಬೇಱಿಲ್ಲ :
 ಲಿಂಗವ ಪೂಜಿಸಿ ಜಂಗಮವನುದಾಸೀನವ ಮಾಡಿದರೆ
 ಬೆಂದೆನಯ್ಯಾ ನಾನು, ಕೂಡಲ ಸಂಗಮದೇವಾ ! ‖ ೪೦೫ ‖

೧೫೭

ತನುವ ನೋಯಿಸಿ, ಮನವ ಬಳಲಿಸಿ,
 ನಿಮ್ಮ ಪಾದವಿಡಿದವರೊಳರೆ ?
ಈ ನುಡಿ ಸುಡದಿಹುದೆ ?
ಕೂಡಲ ಸಂಗಮದೇವಾ,
 ಶಿವಭಕ್ತರ ನೋವೇ ಅದು ಲಿಂಗದ ನೋವು ! ‖ ೪೦೬ ‖

೧೫೮

ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯಾ, ನಿಮ್ಮ ಧರ್ಮ !
'ಆನು ಭಕ್ತನೆನ್ನಲ್ಲಿ ಲೇಸುಂಟೆ'ಂದು ಪರಿಣಾಮಿಸಿದರೆ
 ನಿಮಗಾನು ದ್ರೋ[ಹಿಯ]ಯ್ಯಾ !
ಕೂಡಲ ಸಂಗಮದೇವಾ,
 ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯಾ ! ‖ ೪೦೭ ‖

೧೫೯

ನಡೆಯಲಱಿಯದೆ, ನುಡಿಯಲಱಿಯದೆ
 ಲಿಂಗವ ಪೂಜಿಸಿ ಫಲವೇನು ?
ಅವರ ಸುಖವೆನ್ನ ಸುಖ : ಅವರ ದುಃಖವೆನ್ನ ದುಃಖ !
ಕೂಡಲ ಸಂಗನ ಶರಣ ಮನ ನೊಂದರೆ
 ಆನು ಬೆಂದೆನಯ್ಯಾ ! ‖ ೪೦೮ ‖

೧೬೦

ಬಂಜೆ ಬೇನೆಯನಱಿಯದಂತೆ
 ಒಬ್ಬರೊಂದ ನುಡಿವಿರಿ, ಕೇಳಿರಯ್ಯಾ.
ಎನ್ನಾಯುಷ್ಯ ಭವಿಷ್ಯ ಎನ್ನ ಭಕ್ತರು, ಕಂಡಯ್ಯಾ ;
 ಎನ್ನಾಯುಷ್ಯ ಭವಿಷ್ಯ ಎನ್ನಾ ಪ್ರಮಥರು ಕಂಡಯ್ಯಾ !
ಕೂಡಲ ಸಂಗನ ಶರಣರು ಮುಖಲಿಂಗಿಗಳಯ್ಯಾ ! ‖ ೪೦೯ ‖

೧೬೯

ಬೇಱೂರಲಿದ್ದು ಬಂದ ಜಂಗಮವೆ ಲಿಂಗವೆಂದು,
ಮನೆಯಲಿದ್ದ ಜಂಗಮವನುದಾಸೀನವ ಮಾಡಿದರೆ,
ನಾನು ಬೆಂದೆನಯ್ಯಾ.
ಆನು ಬೆಂದ ಬೇಗೆಯನಱಿಯೆ, ಕಾಣಾ,
ಕೂಡಲ ಸಂಗಮದೇವಾ. ॥ ೪೧೦ ॥

೧೬೨

ಉಟ್ಟು ತೊಟ್ಟು ಪೂಜ್ಯನಾಗಿ ಬಂದ ಜಂಗಮ ವಿಶೇಷವೆಂದು,
ಕಂತೆ-ಬೊಂತೆಯ ಜಂಗಮ ಬಂದರೆ ಹೀನವೆಂದು
ಕಂಡೆನಾದರೆ ಪಂಚಮಹಾಪಾತಕ !
ಇದು ಕಾರಣ, ಅನ್ನ-ವಸ್ತ್ರ-ಧನಮಾಟದಲ್ಲಿ
ಎರಡಾಗಿ ಕಂಡೆನಾದರೆ ನರಕದಲ್ಲಿಕ್ಕುವ
ಕೂಡಲ ಸಂಗಮದೇವ. ॥ ೪೧೧ ॥

೧೬೩

ಅಡ್ಡದೊಡ್ಡ ನಾನಲ್ಲಯ್ಯಾ : ದೊಡ್ಡ ಬಸಱು ಎನಗಿಲ್ಲಯ್ಯಾ :
ದೊಡ್ಡವರಲ್ಲದೆ ನಿಮ್ಮ ಶರಣರು ಮನ್ನಿಸರಯ್ಯಾ !
ಹಡೆಮುಂಬ ಸೂಳೆಯಂತೆ ಧನವುಳ್ಳವರನಱಸಿಯಱಸಿ,
ಬೋಧಿಸಲು ಪ್ರಾರ್ಥಿಸಲು ಮುನ್ನ ನಾನಱಿಯೆನಯ್ಯಾ.
ದೊಡ್ಡತನವೆನಗಿಲ್ಲ : ಅಂಜುವೆನಂಜುವೆ ನಿಮ್ಮ ಪ್ರಮಥರಿಗೆ :
ಅನಾಥ ನಾನಯ್ಯಾ, ಕೂಡಲ ಸಂಗಮದೇವಾ. ॥ ೪೧೨ ॥

೧೬೪

ಕುದುರೆ-ಸತ್ತಿಗೆಯವರ ಕಂಡರೆ ಹೊರಳಿ ಬಿದ್ದು ಕಾಲ ಹಿಡಿವರು !
ಬಡಭಕ್ತರು ಬಂದರೆ 'ಎಡೆಯಿಲ್ಲ, ಅತ್ತ ಸನ್ನಿ' ಎಂಬರು :
ಎನ್ನೊಡೆಯ ಕೂಡಲ ಸಂಗಯ್ಯನವರ
ತಡಗೆಡಹಿ ಮೂಗ ಕೊಯ್ಯದೆ ಮಾಣ್ಬನೆ ? ॥ ೪೧೩ ॥

೧೬೫

ದೂರದಿಂದ ಬಂದ ಜಂಗಮವನಯ್ಯಗಳೆಂದು,
  ಸಾರಿದ್ದ ಜಂಗಮವ ಪರಿಚಾರಕರೆಂಬ ಕೇಡಿಂಗೆ ಬೆರಗಾದೆನಯ್ಯಾ:
ಸಾರಿದ್ದವರ ದೂರದವರೆಂದು ಬೇಱಿಕೆ ಮಾಡಿದರೆ
  ಕೂಡಲ ಸಂಗಮದೇವ ಶಿಂಗಾರದ ಮೂಗ
  ಹಲುದೋಱಿಕೆ ಕೊಯ್ಯದೆ ಮಾಣ್ಬನೆ ? || ೪೧೪ ||

೧೬೬

ಹಿಡಿಪೆಡೆಯನೆ ಕಾಸಿ, ಹಿಡಿವ ಕೈ ಬೆಂದು,
  ಮಿಡುಮಿಡನೆ ಮಿಡುಕುವ ಮರುಳ ಮಾನವನೇ,
  ಬಡವರೆಂದೆನಬೇಡಾ ಲಾಂಛನಧಾರಿಯನು ;
  ಕಡುಸ್ನೇಹದಿಂದವರ ಪೂಜೆಯ ಮಾಡುವುದು.
ನಿಜವಡಗಿದ ರೂಪು, ನಿರ್ವಯಲ ಸ್ಥಾನ,
  ನಡೆಲಿಂಗ, ಜಂಗಮ : ಕೂಡಲ ಸಂಗಮದೇವ ! || ೪೧೫ ||

೧೬೭

ಹಾಲ ಕಂದಲು, ತುಪ್ಪದ ಮಡಕೆಯ
  'ಬೋಡು ಮುಕ್ಕೆ' ನ ಬೇಡ—
ಹಾಲು ಸಿಹಿ, ತುಪ್ಪ ಕಮ್ಮನೆ : ಲಿಂಗಕ್ಕೆ ಬೋನ !
ಕೂಡಲಸಂಗನ ಶರಣರ
  ಅಂಗಹೀನರೆಂದರೆ ನಾಯಕನರಕ ! || ೪೧೬ ||

೧೬೮

ಆಚಾರವಱಿಯಿರಿ, ವಿಚಾರವಱಿಯಿರಿ:
  ಜಂಗಮ ಸ್ಥಲ ಲಿಂಗ ಕಾಣಿರಯ್ಯಾ.
ಜಾತಿಭೇದವಿಲ್ಲ, ಸೂತಕವಿಲ್ಲ,
  ಅಜಾತಂಗೆ ಕುಲವಿಲ್ಲ !
ನುಡಿದಂತೆ ನಡೆಯದಿದ್ದರೆ
  ಕೂಡಲ ಸಂಗಯ್ಯ ಮೆಚ್ಚ, ಕಾಣಿರಯ್ಯಾ. || ೪೧೭ ||

೧೬೯

ಸ್ಥಾವರ–ಭಕ್ತಂಗೆ ಸೀಮೆಯಲ್ಲದೆ
  ಘನಲಿಂಗಜಂಗಮಕ್ಕೆ ಸೀಮೆಯೆಲ್ಲಿಯದು ?
ಅಂಬುಧಿಗೆ ಸೀಮೆಯಲ್ಲದೆ
  ಹರಿವ ನದಿಗೆ ಸೀಮೆಯೆಲ್ಲಿಯದು ?
ಭಕ್ತಂಗೆ ಸೀಮೆಯಲ್ಲದೆ
  ಜಂಗಮಕ್ಕೆ ಸೀಮೆಯುಂಟೆ, ಕೂಡಲ ಸಂಗಮದೇವಾ? || ೪೧೮ ||

೧೭೦

ಎತ್ತಿಕೊಳ್ಳಲೇಕೆ, ಮುತ್ತಿಳುಹಲೇಕಯ್ಯಾ ?
  ದರದುರದ ಭಕ್ತಿಯ ಮಾಡಲೇಕಯ್ಯಾ ?
  ನಿಂದಿಸಲೇಕೆ, ಸ್ತುತಿಸಲೇಕೆ ?
ಹೋಗಬಿಟ್ಟು ಜಂಗಮವ ಹಿಂದೆಯಾಡುವನ ಬಾಯಲಿ
  ಮೆಟ್ಟ ಹುಡಿಹೊಯ್ಯದೆ ಮಾಣ್ಬನೆ
  ಕೂಡಲ ಸಂಗಮದೇವಾ ? || ೪೧೯ ||

೧೭೧

ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆಱೆದರೆ
  ಮೇಲೆ ಪಲ್ಲವಿಸಿತ್ತು ನೋಡಾ !
ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದರೆ
  ಮುಂದೆ ಸಕಲ ಪದಾರ್ಥವನೀವನು !
ಆ ಜಂಗಮವ ಹರನೆಂದು ಕಂಡು ನರನೆಂದು ಭಾವಿಸಿದರೆ
  ನರಕ ತಪ್ಪದು, ಕಾಣಾ, ಕೂಡಲ ಸಂಗಮದೇವಾ ! || ೪೨೦ ||

೧೭೨

ಆರಾಧನೆಯ ಮಾಡಿದಡೆ ಅಮೃತದ ಬೆಳಸು :
  ವಿರೋಧಿಸಿದಡೆ ವಿಷದ ಬೆಳಸು !

ಇದು ಕಾರಣ ಲಿಂಗಜಂಗಮಕ್ಕಂಜಲೆ ಬೇಕು .
ಸ್ಥಾವರ ಜಂಗಮ ಒಂದೆಯೆಂದಱಿದರೆ
ಕೂಡಲ ಸಂಗಮದೇವ ಶರಣಸನ್ನಿಹಿತ ! ||೪೨೧||

೧೭೩

ಹೊಸತಿಲ ಪೂಜಿಸಿ ಹೊಱವಟ್ಟು ಹೋದ
ಒಕ್ಕಲಿತಿಯಂತಾಯಿತ್ತೆನ್ನ ಭಕ್ತಿ !
ಜಂಗಮವೆನ್ನೊಡೆಯರೆಂದು ಒಕ್ಕುದ ಕೊಂಡು
ಉದಾಸೀನವ ಮಾಡಿದರೆ,
ಇಹಲೋಕಕ್ಕೆ ದೂರ, ಪರಲೋಕಕ್ಕೆ ದೂರ !
ಕೂಡಲ ಸಂಗಮದೇವ ಅಘೋರನರಕದಲ್ಲಿಕ್ಕುವ ! ||೪೨೨||

೧೭೪

ಲಿಂಗವ ಪೂಜೆಯ ಮಾಡಿ ಜಂಗಮವ ಕಂಡುದಾಸೀನವ ಮಾಡಿದರೆ
ಆ ಲಿಂಗಪೂಜಕರಿಗೆ ಮಾಡಿದ ಶಿವದೂತರ ದಂಡವೆಂಬುದು !
ಲೋಕದ ಕರ್ಮಿಗಳಿಗೆ ಮಾಡಿದ ಯಮದೂತರ ದಂಡವೆಂಬುದು !
ಇದು ಕಾರಣ, ಲಿಂಗ,ಜಂಗಮವನೊಂದೆಯೆಂಪಱಿಯದರ
ಎನಗೆ ತೋಱದಿರಯ್ಯಾ, ಕೂಡಲ ಸಂಗಮದೇವಾ. ||೪೨೩||

೧೭೫

ಜಂಗಮವ ನಿಂದೆಯ ಮಾಡಿ ಲಿಂಗವ ಪೂಜಿಸುವ ಭಕ್ತನ
ಅಂಗವಣೆಯೆಂತೋ ? ಶಿವ ಶಿವಾ !
ನಿಂದಿಸುವ ಪೂಜಿಸುವ ಪಾತಕವಿದ ಕೇಳಲಾಗದು.
‘ ಗುರುವಿನ ಗುರು ಜಂಗಮ ’
ಇಂತೆಂದುದು ಕೂಡಲ ಸಂಗಯ್ಯನ ವಚನ. ||೪೨೪||

೧೭೬

ಅರಸನ ಕಂಡು ತನ್ನ ಪುರುಷನ ಮಱೆದರೆ
ಮರನೇಱಿ ಕೈಬಿಟ್ಟಂತಾಯಿತ್ತಯ್ಯಾ !

ಇಹಲೋಕಕ್ಕೆ ದೂರ, ಪರಲೋಕಕ್ಕೆ ದೂರ,
ನಮ್ಮ ಕೂಡಲ ಸಂಗಮದೇವ ಜಂಗಮ ಮುಖಲಿಂಗವಾದಕಾರಣ.
|| ೪೩೫ ||

೧೭೭

ಜಂಗಮವಿಲ್ಲದ ಮಾಟ, ಕಂಗಳಿಲ್ಲದ ನೋಟ !
ಹಿಂಗಿತ್ತು ಶಿವಲೋಕ, ಇನ್ನೆಲ್ಲಿಯದಯ್ಯಾ ?
ಲಿಂಗಕ್ಕೆ ಮಾಡಿದ ಬೋನವ ಸಿಂಬಕ ತಿಂಬಂತೆ
ಸಮಯೋಚಿತವನಱಿಯದೆ ಉದರವ ಹೊರೆವವರ
ನರಕದಲ್ಲಿಕ್ಕದೆ ಮಾಣ್ಬನೆ ಕೂಡಲ ಸಂಗಮದೇವ ? || ೪೩೬ ||

೧೭೮

ಲಿಂಗದಲ್ಲಿ ದಿಟವನಱಿಸುವರೆ ಜಂಗಮವ ನೆಱೆನಂಬುವುದು :
ನಡೆಲಿಂಗ, ನುಡಿಲಿಂಗ, ಮುಖಲಿಂಗವೆಂದೇ ನಂಬೋ !
' ಯತ್ರ ಮಾಹೇಶ್ವರ ತತ್ರಸನ್ನಿಹಿತ ' ನಾಗಿ
ಅಧರ ತಾಗಿದ ರುಚಿಯು, ಉದರ ತಾಗಿದ ಸುಖವ
ಉಣ್ಬ, ಉಡುವ ಕೂಡಲ ಸಂಗಮದೇವ ಜಂಗಮಮುಖದಲ್ಲಿ || ೪೩೭ ||

೧೭೯

ಜಂಗಮದ ಮನ-ಭಾವದಲ್ಲಿ ಭಕ್ತ [ನೆ] ಭೃತ್ಯನೆಂದು,
ಭಕ್ತನ ಮನ-ಭಾವದಲ್ಲಿ ಜಂಗಮ [ವೆ] ಕರ್ತನೆಂದು ಇದ್ದ ಬಳಿಕ,
' ಬಂದುದು, ಬಾರದು, ಇದ್ದುದು, ಹೋಯಿತ್ತೆ 'ಂಬ
ಸಂದೇಹವಿಲ್ಲದಿರಬೇಕು.
ಹೋಯಿತ್ತೆಂಬ ಗುಣವುಳ್ಳನ್ನಕ್ಕ
ನಿಮಗೆ ದೂರ, ನಿಮ್ಮವರಿಗೆ ಮುನ್ನವೆ ದೂರ !
ಶಿವಾಚಾರಕ್ಕಲ್ಲಿಂದತ್ತ ದೂರ !!
ಜಂಗಮದ ಹರಿದ ಹರವು, ಜಂಗಮದ ನಿಂದ ನಿಲವು,
ಜಂಗಮದ ಗಳಗರ್ಜನೆ, ಜಂಗಮದ ಕೋಳಾಟಕೆ ಸೈರಿಸದಿದ್ದರೆ
ನೀನಂದೇ ಮೂಗ ಕೊಯಿ, ಕೂಡಲ ಸಂಗಮದೇವಾ ! || ೪೩೮ ||

೧೮೦

ನಯನದಾಹಾರವ ಜಂಗಮವ ನೋಡಿಸುವೆ,
ಶ್ರೋತ್ರದಾಹಾರವ ಜಂಗಮವ ಕೇಳಿಸುವೆ,
ಘ್ರಾಣದಾಹಾರವ ಜಂಗಮವ ವಾಸಿಸುವೆ,
ಜಿಹ್ವೆಯಾಹಾರವ ಜಂಗಮವನೂಡಿಸುವೆ,
[ತ್ವ] ಚದಾಹಾರವ ಜಂಗಮಕ್ಕೆ ಪೊದ್ದಿಸುವೆ;
ಅಧಿಕ ಪ್ರೇಮ ಪ್ರಣಾಮವ ಮಾಡುವೆ—
ಸಕಲ ಪದಾರ್ಥಂಗಳ ನೀಡುವೆನು,
ಕೂಡಲ ಸಂಗಾ, ನಿಮ್ಮ ಶರಣರಿಗೆ. ||೪೨೯||

## (೧೧) ಭಕ್ತನ ಮಹೇಶಸ್ಥಳ

೧

ಎಂಬತ್ತುನಾಲ್ಕು ಲಕ್ಷ ಮುಖದೊಳಗೊಂದೇ ಮುಖವಾಗಿ
ಕಾಡಿ ನೋಡೆನ್ನನು, ಬೇಡಿ ನೋಡೆನ್ನನು :
ಬೇಡದಿದ್ದರೆ, ಅಯ್ಯಾ, ನಿಮಗೆ ಪ್ರಮಥರಾಣೆ !
ನೀನಾವ ಮುಖದಲು ಬಂದು ಬೇಡಿದಡೀವೆ,
ಕೂಡಲ ಸಂಗಮದೇವಾ. || ೪೩೦ ||

೨

ಕಂದಿದೆನಯ್ಯಾ ಎನ್ನ ನೋಡುವರಿಲ್ಲದೆ;
ಕುಂದಿದೆನಯ್ಯಾ ಎನ್ನ ನುಡಿಸುವರಿಲ್ಲದೆ;
ಬಡವಾದೆನಯ್ಯಾ ಎನ್ನ ತನು, ಮನ, ಧನವ ಬೇಡುವರಿಲ್ಲದೆ !
ಕಾಡುವ ಬೇಡುವ ಶರಣರ ತಂದು
ಕಾಡಿಸು, ಬೇಡಿಸಯ್ಯಾ, ಕೂಡಲ ಸಂಗಮದೇವಾ. || ೪೩೧ ||

೩

ವೇಷ ಅವಿಚಾರದಲ್ಲಿ ನಡೆಯಿತ್ತೆಂದು
ಆಸುರದಲ್ಲಿ ಬಗುಳುವ ಕುನ್ನಿ, ನೀ ಕೇಳಾ :
ಹಱಿಯನೆ ದಾಸನ ವಸ್ತ್ರವ ?
ಉಣ್ಣನೆ ಚೆನ್ನಯ್ಯನ ಸಂಗಾತ ?
ಪರವಧುವ ಕೊಳ್ಳನೆ ಸಿಂಧು ಬಲ್ಲಾಳನ ?
ಬೇಡನೆ ಸಿರಿಯಾಳನ ಮಗನ ?
ನಡೆವುದು ನುಡಿವುದು ಅವಿಚಾರವೆಂದು,
ಭಾವವಿಭಾವವೆಂದು ಕಂಡೆನಾದರೆ
ತಪ್ಪೆನ್ನದು, ಮೂಗ ಕೊಯಿ !
ಕೂಡಲ ಸಂಗಮದೇವಾ. || ೪೩೨ ||

೪

ನೀನಿಕ್ಕದ ಬೀಯದಲ್ಲಿ ವಂಚನೆಯುಳ್ಳರೆ
ಸಂಗಾ, ನಿಮ್ಮ ತೊತ್ತುತನಕ್ಕೆ ದೂರವಯ್ಯಾ !
ಕದ್ದು ತಿಂದರೆ ಕೈಹಿಡಿದೊಮ್ಮೆ ಬಡಿದು
ತುಡುಗುಣಿತನವ ಬಿಡಿಸಯ್ಯಾ !
ಜಂಗಮ ಮನೆಗೆ ಬಂದಲ್ಲಿ ಓಸರಿಸಿದರೆ
ಹಿಡಿದು ಮೂಗ ಕೊಯಿಯಯ್ಯಾ !
ಕೂಡಲ ಸಂಗಮದೇವಾ. || ೪೩೩ ||

೫

ದೇವನಿಂತಹನೆಂದು ತೋಱಿಕೊಡುವೆನು ಗಣಂಗಳಿಗೆ :
ಬಲ್ಲಾಳನ ವಧುವ ಬೇಡಿದಾತನೀ ದೇವ !
ದೇವನಿಂತಹನೆಂದು ತೋಱಿಕೊಡುವೆನು ಗಣಂಗಳಿಗೆ :
ದಾಸನ ವಸ್ತ್ರವ ಬೇಡಿದಾತನೀ ದೇವ !
ದೇವದಿಂತಹನೆಂದು ತೋಱಿಕೊಡುವೆನು ಗಣಂಗಳಿಗೆ :
ಸಿರಿಯಾಳನ ಮಗನ ಬೇಡಿದಾತನೀ ದೇವ !
ಕೂಡಲ ಸಂಗಮದೇವ ಜಂಗಮ ಮುಖಲಿಂಗವಾಗಿ,
ಕಾಡಿ ನೋಡುವ, ಬೇಡಿ ನೋಡುವ ! || ೪೩೪ ||

೬

ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ
ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ,
ನಿಮ್ಮಾಣೆ ! ನಿಮ್ಮ ಪುರಾತರಾಣೆ !
ನಿಮ್ಮ ಶರಣರಿಗಲ್ಲದೆ ಮತ್ತೊಂದನಱಿಯೆ,
ಕೂಡಲ ಸಂಗಮದೇವಾ. || ೪೩೫ ||

೭

ಆಲುತ್ತಲು ಹಱೆಯ ಹೊಯಿಸಿ ಅಂಕವ ಮಾಡಿದೆನೆಲ್ಲರ ಕಂಡು !
ಆನು ಬೇಡೆಂದರೂ ಮಾಣೆ, ಕಲಿತನವ ಮಾಡಿದೆನೆಲ್ಲರ ಕಂಡು !
ಅಲ್ಲಿ ಹೋಯಿತ್ತು ಗಳಿಯೆಂದರೆ
ಆಸೆಮಾಡೆನು, ಕೂಡಲ ಸಂಗಮದೇವಾ. || ೪೩೬ ||

೮

ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನು ?
ಕೋಳಿಯೊಂದು ಕುಟುಕ ಕಂಡರೆ ಕೂಗಿ ಕರೆಯದೆ ತನ್ನ ಕುಲವೆಲ್ಲವ ?
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಯಿಂದ ಕರಕಷ್ಟ !
ಕೂಡಲ ಸಂಗಮದೇವಾ. || ೪೩೭ ||

೯

ಆವ ನೇ [ಮವಾ] ದರೇನು ? ಹೇಮವಿಲ್ಲದಂಗೈಸಬಹುದೆ ?
ಕೊಡಲಿಲ್ಲೆಂಬುದಱಿಂದ ಸಾಯಲುಬಹುದು : ಸೈರಿಸಬಾರದು !
ಬೇಡುವವರ ನೋಡಿ ನೋಡಿ, ಈಯಲಿಲ್ಲದವನ ಜೀವನವದೇತಕೊ
ಕೂಡಲ ಸಂಗಮದೇವಾ ? || ೪೩೮ ||

೧೦

ಹರಗಣಪಂಕ್ತಿಯ ನಡುವೆ ಕುಳ್ಳಿರ್ದು
ನಾನು ಒಡೆಯತನದ ನಾಯ ತೇಜವ ಹೊತ್ತುಕೊಂಡು—
ಮಡದಿಯೆನ್ನಗಲೊಳಗೆ ಸಕಲದೇವಾನ್ನವ
ಒಡೆಯರಿಂದಲೂ ಮಿಗಿಲಾಗಿಕ್ಕಲು
ತೆಗೆದಿರಿಸಿದೆನು !
ಈ ಪರಿಯ ಆಯ ಕಣ್ಗೆ ತೋಱಲು ಕಲ್ಮಷವಾದುವು !
ಕರುಣಿ ಚೆನ್ನಬಸವಣ್ಣ[ನ] ಮರೆದುಕೊಂಡೆನಾದರೆ
ಒಡೆಯ ಕೂಡಲ ಸಂಗಯ್ಯ ಕೆಡಹಿ ನರಕದಲ್ಲಿಕ್ಕುವ ! || ೪೩೯ ||

೧೧

ಭಕ್ತಿಸುಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವೆ,
ನಡೆಯೊಳಗೆ ನುಡಿಯ ಪೂರೈಸುವೆ—
ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ;
ಒಂದು ಜವೆ ಕೊಱತೆಯಾದರೆ
ಎನ್ನನದ್ದಿ ನೀನೆದ್ದು ಹೋಗು,
ಕೂಡಲ ಸಂಗಮದೇವಾ. || ೪೪೦ ||

೧೨

ಓಡುವಾತ ಲೆಂಕನಲ್ಲ, ಬೇಡುವಾತ ಭಕ್ತನಲ್ಲ :
ಓಡಲಾಗದು ಲೆಂಕನು, ಬೇಡಲಾಗದು ಭಕ್ತನು.
ಓಡೆನಯ್ಯಾ, ಬೇಡೆನಯ್ಯಾ,
ಕೂಡಲ ಸಂಗಮದೇವಾ. || ೪೪೧ ||

೧೩

ಚಂದ್ರಶೈತ್ಯದಲು ಬೆಳೆದ ಕಾಯಕ್ಕೆ
ಬೆಳದಿಂಗಳ ಬಯಸುವ ಹಂಗೇಕಯ್ಯಾ ?
ಶರಣರ ಸಂಗದಲಿರ್ದು ಶಿವನ ಬೇಡುವ ಹಂಗೇಕಯ್ಯಾ ?
ಕೂಡಲ ಸಂಗಯ್ಯನ ಶರಣರು ಬಂದು
ತಮ್ಮವನೆಂದರೆಸಾಲದೆ ಅಯ್ಯಾ ? || ೪೪೨ ||

೧೪

ದಾಸನ ವಸ್ತ್ರವ ಬೇಡದ ಮುನ್ನ
ತವನಿಧಿಯನಿತ್ತರೆ ನಿಮ್ಮ ದೇವರೆಂದೆಂಬೆ !
ಸಿರಿಯಾಳನ ಮಗನ ಬೇಡದ ಮುನ್ನ
ಕಂಚಿಯ ಪುರದ ಕೈಲಾಸಕ್ಕೊಯಿದರೆ ನಿಮ್ಮ ದೇವರೆಂದೆಂಬೆ !
ಬಲ್ಲಾಳನ ವಧುವ ಬೇಡದ ಮುನ್ನ
ಸ್ವಯಲಿಂಗವಾದರೆ ನಿಮ್ಮ ದೇವರೆಂದೆಂಬೆ !
ದೇಹಿ ನೀನು, ವ್ಯಾಪಾರಿಗಳು ನಮ್ಮವರು !
ಬೇಡು, ಕೂಡಲ ಸಂಗಮದೇವಾ, ಎಮ್ಮವರ ಕೈಯಲು ! || ೪೪೩ ||

೧೫

ಎಲ್ಲರೂ ವೀರರು, ಎಲ್ಲರೂ ಧೀರರು;
ಎಲ್ಲರೂ ಮಹಿಮರು, ಎಲ್ಲರೂ ಪ್ರಮಥರು :
ಕಾಳೆಗದ ಮುಖದಲ್ಲಿ ಕಾಣಬಾರದು,
ಓಡುವ ಮುಖದಲ್ಲಿ ಕಾಣಬಹುದು !
ನಮ್ಮ ಕೂಡಲ ಸಂಗನ ಶರಣರು ಧೀರರು,
ಉಳಿದವರೆಲ್ಲಾ ಅಧೀರರು ! || ೪೪೪ ||

೧೬

ಎಲ್ಲಿ ನೋಡಿದಲ್ಲಿ ಮನವೆಳಸಿದರೆ
ಆಣೆ, ನಿಮ್ಮಾಣೆ, ನಿಮ್ಮ ಪ್ರಥಮರಾಣೆ !
ಪರವಧುವನು ಮಹಾದೇವಿಯೆಂಬೆ,
ಕೂಡಲ ಸಂಗಮದೇವಾ. || ೪೪೫ ||

೧೭

ಹರಿವ ಹಾವಿಂಗಂಜೆ, ಉರಿಯ ನಾಲಗೆಗಂಜೆ, ಸುರಗಿಯ ಮೊನೆಗಂಜೆ!
ಒಂದಕ್ಕಂಜುವೆ, ಒಂದಕ್ಕಳುಕುವೆ :
ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ !
ಮುನ್ನಂಜದ ರಾವಣನೇವಿಧಿಯಾದ !
ಅಂಜುವೆನಯ್ಯಾ, ಕೂಡಲ ಸಂಗಮದೇವಾ. || ೪೪೬ ||

೧೮

ಒಂದಕ್ಕೊಂಬತ್ತ ನುಡಿದು, ಕಣ್ಣ ಕೆಂಚನೆ ಮಾಡಿ, ಗಂಡುಗೆದಱಿ,
ಮುಡುಹಿಕ್ಕಿ ಕೆಲೆವವರ ಕಂಡಡಂಜುವೆ, ಓಸರಿಸುವೆ !
ಓಡಿದೆನೆಂಬ ಭಂಗವಾದಡಾಗಲಿ :
ನಮ್ಮ ಕೂಡಲ ಸಂಗನ ಶರಣರ ಅನುಭಾವವಿಲ್ಲದವರ
ಹೊಲಮೇರೆಯ ಹೊಂದೆ, ಹೊಲನ ಬಿಟ್ಟೋಡುವೆ ! || ೪೪೭ ||

೧೯

ಒಡೆಯರು ಬಂದರೆ ಗುಡಿತೋರಣವ ಕಟ್ಟಿ;
ನಂಟರು ಬಂದರೆ ಸಮಯವಿಲ್ಲೆನ್ನಿ !
ಅಂದೇಕೆ ಬಾರರು ನೀರಿಂಗೆ ನೇಣಿಂಗೆ ಹೊಱಗಾದಂದು ?
ಸಮಯಾಚಾರಕ್ಕೊಳಗಾದಂದು ?
ಪರುಷ ಮುಟ್ಟಲು ಕಬ್ಬುಣ ಸುವರ್ಣವಾಯಿತ್ತು :
ಬಳಿಕ ಬಂಧುಗಳುಂಟೆ, ಕೂಡಲ ಸಂಗಮದೇವಾ ? || ೪೪೮ ||

೨೦

ಒಡೆಯರಾಡುವ ಮಾತ ಕಡೆ ಪರಿಯಂತರ ಕೇಳಿ,
ಇದಿರು ಹೋಗಿ ಕಿಂಕರನಾಗಿ ಬಿನ್ನಹವ ಮಾಡುವ
ಸದ್ಭಕ್ತರ ತೋಱಯ್ಯಾ !
ಒಡೆಯರಾಡುವ ಮಾತ ಕಂಡು ಕರೆವಲ್ಲಿ ಕೆಡೆಮೆಟ್ಟಿ
ಬಾಯಿ ಘನವೆಂದು ಆಡುವವನ ತೋಱದಿರಯ್ಯಾ,
ಅವನ ಸಂಗದಲ್ಲಿರಿಸದಿರಯ್ಯಾ,
ಅವನ ಸಹಪಂಕ್ತಿಯಲ್ಲಿ ಕುಳ್ಳಿರಿಸದಿರಯ್ಯಾ !
ಕೂಡಲ ಸಂಗಮದೇವಯ್ಯಾ ನಿಮ್ಮ ಬೇಡುವುದೊಂದೇ ವರವು.
|| ೪೪೯ ||

೨೧

ಒಡಹಾರುವನೇಸು ಭಕ್ತನಾದರೆಯೂ ನೇಣಿನ ಹಂಗ ಬಿಡ !
ಮಾಲೆಗಾಱನೇಸು ಭಕ್ತನಾದರೆಯೂ ಬಾವಿಯ ಬೊಮ್ಮನ ಹಂಗ ಬಿಡ !
ಬಣಜಿಗನೇಸು ಭಕ್ತನಾದರೆಯೂ ಬಟ್ಟಲ ಬೆನಕನ ಹಂಗ ಬಿಡ !
ಕಂಚುಗಾಱನೇಸು ಭಕ್ತನಾದರೆಯೂ ಕಾಳಿಕಾದೇವಿಯ ಹಂಗ ಬಿಡ !
ನಾನಾವ ಹಂಗಿನವನಲ್ಲ, ನಿಮ್ಮ ಶರಣರ ಹಂಗಿನವನಯ್ಯಾ,
ಕೂಡಲ ಸಂಗಮದೇವಾ !
|| ೪೫೦ ||

೨೨

ಶ್ರೀವಿಭೂತಿರುದ್ರಾಕ್ಷಿಯಿದ್ದವರ ಲಿಂಗವೆಂಬೆ :
ಇಲ್ಲದವರ ಭವಿಯೆಂಬೆ.
ಕೂಡಲ ಸಂಗಮದೇವಾ, ಸದ್ಭಕ್ತರ ನೀನೆಂಬೆ.
|| ೪೫೧ ||

೨೩

ದೇವಸಹಿತ ಭಕ್ತ ಮನೆಗೆ ಬಂದರೆ
ಕಾಯಕವಾವುದೆಂದು ಬೆಸಗೊಂಡರೆ,
ನಿಮ್ಮಾಣೆ ! ನಿಮ್ಮ ಪುರಾತರಾಣೆ ! ತಲೆದಂಡ ! ತಲೆದಂಡ !!
ಕೂಡಲ ಸಂಗಮದೇವಾ, ಭಕ್ತರ ಕುಲವನರಸಿದರೆ
ನಿಮ್ಮ ರಾಣಿವಾಸದಾಣೆ !
|| ೪೫೨ ||

೨೪

ಲಿಂಗಾಂಗಿಗಳಿಲ್ಲದವರ, ಶರಣಸಂಗವಿಲ್ಲದವರ
ಕಂಡರೆ ನಾಚುವೆ.
ಅವರ ನುಡಿ ಎನಗೆ ಸಮನಿಸದಯ್ಯಾ,
ಕೂಡಲ ಸಂಗಮದೇವಾ, ಅಲ್ಲಿ ನೀವಿಲ್ಲದ ಕಾರಣ. || ೪೫೩ ||

೨೫

ಶ್ರೀವಿಭೂತಿಯ ಹೂಸದವರ, ಶ್ರೀರುದ್ರಾಕ್ಷಿಯ ಧರಿಸದವರ,
ನಿತ್ಯ ಲಿಂಗಾರ್ಚನೆಯ ಮಾಡದವರ,
ಜಂಗಮವೇ ಲಿಂಗವೆಂದರಿಯದವರ,
ಸದ್ಭಕ್ತರ ಸಂಗದಲ್ಲಿರದವರ ಎನಗೊಮ್ಮೆ ತೋರದಿರು,
ಕೂಡಲ ಸಂಗಮದೇವಾ, ಸೆರಗೊಡ್ಡಿ ಬೇಡುವೆನು ! || ೪೫೪ ||

೨೬

ಕೂಪವರಿಗೆ ಹೇಳುವೆನು ಕುಳಸ್ಥಳಂಗಳೆಲ್ಲವನು;
ಕೂರದವರಿಗೆ ಹೇಳಿ ನಾನೇವೆನು ಶಿವನೆ ?
ಕಲ್ಲ ಭೂಮಿಯಲ್ಲಿ ಕರೆದ ವೃಷ್ಟಿಯ ತೆರನಂತೆ
ಅವರೆತ್ತ ಬಲ್ಲರು ಎನ್ನ ಸುಖ-ದುಃಖವ ?
ಅಂಗತವಿಲ್ಲದ ಸಂಗವು ಅಳಲಿಲ್ಲದ ಹುಯ್ಯಲಂತೆ !
ಇದು ಕಾರಣ, ಕೂಡಲ ಸಂಗಮದೇವಾ,
ನಿಮ್ಮ ಶರಣರಿಗಲ್ಲದೆ ಬಾಯ್ದೆರೆಯೆನು. || ೪೫೫ ||

೨೭

ಒಡೆದೋಡು ಎನ್ನ ಮನೆಯಲ್ಲಿಲ್ಲದಂತೆ ಮಾಡಯ್ಯಾ,
ಕೊಡು ದೇವ, ಎನ್ನ ಕೈಯಲ್ಲೊಂದು ಕರೋಟಿಯ;
‘ ಮೃಡದೇವಾ ಶರಣೆ ’ಂದು ಭಿಕ್ಷಕ್ಕೆ ಹೋದರೆ, ಅಲ್ಲಿ,
‘ ನಡೆ ದೇವಾ ’ ಎಂದೆನಿಸು, ಕೂಡಲ ಸಂಗಮದೇವಾ ! || ೪೫೬ ||

೨೮

ಭವವಿರಹಿತ ಭಕ್ತನಾದ ಬಳಿಕ
ಭಕ್ತಿಭಾಜನವಲ್ಲಿ ಮಾಡಿ ಭಸಿಗಿಕ್ಕಲಾಗದಯ್ಯಾ :
ಯುಕ್ತಿಶೂನ್ಯರಿಗೆ ಮುಂದೆ ಪ್ರಸಾದ ದೂರ !

ಮುಕ್ತಿಯಿಲ್ಲ ! ಮುಂದೆ ನಾಯ ಬಸುರಲ್ಲಿ
ಬಪ್ಪುದು ತಪ್ಪದು ಪೃಥ್ವಿಯೊಳಗೆ !
ಕೂಡಲ ಸಂಗಮದೇವಾ, ನಿಮ್ಮ ಶರಣರಿಗಲ್ಲದೆ,
ಅನಾಚಾರಕ್ಕೆಲ್ಲಿಯದೊ ? || ೪೫೭ ||

## (೧೨) ಭಕ್ತನ ಪ್ರಸಾದಿಸ್ಥಳ

೧

ಅಯ್ಯಾ, ನಿಮ್ಮ ಶರಣರ ದಾಸೋಹಕ್ಕೆ
ಎನ್ನ ತನುಮನಧನವಲಸದಂತೆ ಮಾಡಯ್ಯಾ.
ತನು ದಾಸೋಹಕ್ಕುಬ್ಬುವಂತೆ ಮಾಡು,
ಮನ ದಾಸೋಹಕ್ಕೆ ಲೀಯವಹಂತೆ ಮಾಡು,
ಧನ ದಾಸೋಹಕ್ಕೆ ಸವೆದು, ನಿಮ್ಮ ಶರಣರ ಪ್ರಸಾದದಲ್ಲಿ
ನಿರಂತರ ಆಡಿ ಹಾಡಿ, ನೋಡಿ ಕೂಡಿ, ಭಾವಿಸಿ ಸುಖಿಸಿ,
ಪರಿಣಾಮಿಸುವಂತೆ ಮಾಡು, ಕೂಡಲ ಸಂಗಮದೇವಾ. || ೪೫೮ ||

೨

ಹಾರುವ ಹಾರುವನಪ್ಪೆ ಸದ್‌ಭಕ್ತರೆನ್ನುವರೆಂದು;
ಹಾರುವ ಹಾರುವನಪ್ಪೆ ಶರಣರು ಎನ್ನುವರೆನ್ನುವರೆಂದು,
ಕೂಡಲ ಸಂಗನ ಶರಣರು ತಮ್ಮೊಕ್ಕುದನಿಕ್ಕಿ ಸಲಹುವರಾಗಿ. || ೪೫೯ ||

೩

ಒಕ್ಕುದ ಮಿಕ್ಕುದನುಂಡು ಕಿವಿವಿಡಿದಾಡುವೆ :
ಶರಣರ ಮನೆಯ ಲೆಂಗಿಯ ಡಿಂಗರಿಗ ನಾನು;
ಕೂಡಲ ಸಂಗನ ಶರಣರ ಮನೆಯ
ಭಕ್ತಿಯ ಮರುಳ ನಾನು. || ೪೬೦ ||

೪

ಗುರುಲಿಂಗಜಂಗಮದಿಂದೆ ಪಾದೋದಕ ಪ್ರಸಾದವಾಯಿತ್ತು.
ಆ ಭಾವನೆ ಮಹಾಪ್ರಸಾದವಾಗಿ—
ಎನಗೆ ಬೇರೆ ಪ್ರಸಾದವೆಂಬುದಿಲ್ಲಾ,
ಕೂಡಲ ಸಂಗಮದೇವಾ. || ೪೬೧ ||

೫

ಅಹುದೆಂದಱಿಯೆ, ಅಗದೆಂದಱಿಯೆ,
ಆದಿಯ ಪಥವ ತೋಱಲಱಿಯೆ,
ಸತ್ಯವನಱಿಯೆ, ಸಹಜವನಱಿಯೆ,
ಸಜ್ಜನಶುದ್ಧವ ಮುನ್ನವೇ ಅಱಿಯೆ !
ನಿಮ್ಮ ಶರಣರ ಒಕ್ಕುದನುಂಡಿಪ್ಪೆ,
ಕೂಡಲ ಸಂಗಮದೇವಾ. || ೪೬೨ ||

೬

ಆವನಾದರೇನು, ಶ್ರೀಮಹಾದೇವನ ನೆನೆವವನ
ಬಾಯ ತಂಬುಲ ಮೆಲುವೆ, ಬೀಳುಡಿಗೆಯ ಹೊದೆವೆ,
ಪಾದರಕ್ಷೆಯ ಕಾಯ್ದು ಬದುಕುವೆ,
ಕೂಡಲ ಸಂಗಮದೇವಾ. || ೪೬೩ ||

೭

ಒಂದುವನಱಿಯದ ಸಂದೇಹಿ ನಾನಯ್ಯಾ;
ನಂಬುಗೆಯಿಲ್ಲದ ಡಂಬಕ ನಾನಯ್ಯಾ;
ನಿಮ್ಮ ನಂಬಿದ ಶರಣರ ಡಿಂಗರಿಗ ನಾನಯ್ಯಾ,
ಕೂಡಲ ಸಂಗಮದೇವಾ. || ೪೬೪ ||

೮

ಬಿಡದೆ ಬಾಯಗಲ ಎಂಜಲ ಕಾಯ್ದಿಪ್ಪೆನು : ಕಿಂಕರನು;
ಕಿಂಕರರ ಮನೆಯಲ್ಲಿ ಕಿಂಕಿಲವನು ಆನು ಹಾರುತಿಪ್ಪೆನು.
ನಮ್ಮ ಕೂಡಲ ಸಂಗನ ಶರಣರ ಒಕ್ಕುದ ಮಿಕ್ಕುದನುಂಬ
ಕಿಂಕರ ನಾನು ! || ೪೬೫ ||

೯

ಶೋತ್ರಿಂಗೇಕೆ ಲಕ್ಷಣ ? ಒಡೆಯಂಗೇಕೆ ಆಚಾರ ?
ಆಗಮವೇಕೆ ಡಿಂಗರಿಗಂಗೆ, ಒಕ್ಕುದನುಂಬುವಂಗಯ್ಯಾ ?
ಕೂಡಲ ಸಂಗಮದೇವಾ,
ನಿಮ್ಮ ನಂಬುವುದಾಚಾರವಯ್ಯಾ, || ೪೬೬ ||

೧೦

ತೊತ್ತಿಂಗೆ ಲಕ್ಷಣವೇಕಯ್ಯಾ ?
ಅವರೊಕ್ಕುದನುಂಡು ಮಿಕ್ಕುದ ಕಾಯ್ದುಕೊಂಡಿಪ್ಪುದು.
ಸಾರಿ ಹೊರಸೇಕೆ ? ಅವಳಿಗೆ ಮಾಱುತ್ತರವೇಕೆ ?
ಕೂಡಲ ಸಂಗನ ಶರಣರೊಡನೆ
ಇದಿರುತ್ತರವೇಕೆ ಸಿಂಬಕಂಗೆ ? || ೪೬೭ ||

೧೧

ಪಾದೋದಕವ ಕೊಂಬೆ; ಪ್ರಸಾದವ ಕೊಂಬೆ;
ಅರ್ಥಪ್ರಾಣಾಭಿಮಾನ ನಿಮ್ಮದೆಂಬೆ !
ರಾತ್ರಿಯಲೊತ್ತೆಯ ಕೊಂಬ ಪಾತಕ ಸೂಳೆಯಂತೆ
ಬಱಿಯ ಮಾತಿಂಗೊಲಿವನೆ
ನಮ್ಮ ಕೂಡಲ ಸಂಗಮದೇವ ? || ೪೬೮ ||

೧೨

ಪಾತಕ ಮಹಾಪಾತಕವ ಮಾಡಿದವನು
ಸದ್ಭಕ್ತರ ಮನೆಗೆ ಹೋಗಿ,
ಅವರೊಕ್ಕ ಪ್ರಸಾದವನಾಯ್ದುಂಡರೆ
ಸಕಲ ಬ್ರಹ್ಮಹತ್ಯಾದಿ ಪಾತಕ ಪರಿಹಾರವು
ಒಮ್ಮೆ ಬೇಡಿಕೊಂಡುಂಡರೆ.
ಪಾತಕೇಷು ಮನಃಪ್ರಾಪ್ತೇ । ಶಿವಭಕ್ತಗೃಹಂ ವ್ರಜೇತ್
ಯಾಚಯೇದನ್ನಮಮೃತಂ । ತದಲಾಭೇ ಜಲಂ ಪಿಬೇತ್
ಇದು ಕಾರಣ, ಕೂಡಲ ಸಂಗಮದೇವಾ,
ನಿಮ್ಮ ಸದ್ಭಕ್ತರಿಗೆ ‘ ನಮೋ ನಮಃ ’ ಎಂಬೆನು. ||೪೬೯||

೧೩

ನಾನು ಹೊತ್ತ ಹುಳ್ಳಿಯ ಹೊಱೆಯನಂಬಲಿಗೆ
ಕೊಂಬವರಿಲ್ಲ, ನೋಡಯ್ಯಾ.
ಆನು ನಿಮ್ಮ ಶರಣರ ಒಕ್ಕುದನುಂಡು ಬದುಕಿದೆನಯ್ಯಾ.
ಮೇರುವ ಸಾರಿದ ಕಾಗೆ ಹೊಂಬಣವಪ್ಪುದು ತಪ್ಪದು,
ಕೂಡಲ ಸಂಗಮದೇವಾ. || ೪೭೦ ||

೧೪

ಭವಭವದಲ್ಲಿ ನಿಮ್ಮ ಜಂಗಮವೆ ಶರಣಯ್ಯಾ :
ಅವರುಂಡು ಮಿಕ್ಕುದ ಉಡಿಗಿ, ಒಕ್ಕು,
ಪ್ರಸಾದವನಾಯ್ದುಂಬ ಮರುಳ ನಾನಯ್ಯಾ !
ನಮ್ಮ ಕೂಡಲ ಸಂಗನ ಶರಣರ
ರಿಣವ ನಾ ಹಿಂಗಲಾಱೆ ! ||೪೭೧||

೧೫

ದಾಸಿಯ ವರ್ಗದಲ್ಲಿಪ್ಪೆನು ಶಿವಶರಣರ ಮನೆಯಲ್ಲಿ :
ಅವರೊಕ್ಕುದನುಂಡು, ಮಿಕ್ಕುದ ಕಾಯ್ದುಕೊಂಡಿಪ್ಪ ಕಾರಣ
ಕಾಲ ಮುಟ್ಟಲಮ್ಮವು; ಕಲ್ಪಿತ ತೊಡೆಯಿತ್ತು;
ಎನ್ನ ಭವಬಂಧನ ಹಿಂಗಿತ್ತು; ಕರ್ಮ ನಿರ್ಮೂಳವಾಯಿತ್ತು !
ಅವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗನೆಂದು
ಕೂಡಲ ಸಂಗಮದೇವ 'ಇತ್ತಬಾ' ಯೆಂದೆತ್ತಿಕೊಂಡನು ! ||೪೭೨||

೧೬

ಜನ್ಮ ಜನ್ಮಕ್ಕೆ ಹೋಗಲೀಯದೆ, 'ಸೋಹಂ' ಎಂದೆನಿಸದೆ,
'ದಾಸೋಹಂ' ಎಂದೆನಿಸಯ್ಯಾ.
ಲಿಂಗಜಂಗಮದ ಪ್ರಸಾದವ ತೋಱಿ ಬದುಕಿಸಯ್ಯಾ,
ಕೂಡಲ ಸಂಗಮದೇವಾ. ||೪೭೩||

೧೭

ಕರ್ತರು ನಿಮ್ಮ ಗಣಂಗಳು ಎನ್ನ ತೊತ್ತುಮಾಡಿ ಸಲಹಿದ ಸುಖವು
ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯದಂತುಟಲ್ಲಾ —
ಕೇಳಿರಯ್ಯಾ, ಕೂಡಲ ಸಂಗನ ಶರಣರು
ತಮ್ಮ ಒಕ್ಕುದನಿಕ್ಕಿ ಸಲಹಿದ ಸುಖವು ! ||೪೭೪||

## (೧೩) ಭಕ್ತನ ಪ್ರಾಣಲಿಂಗಿಸ್ಥಳ

೧

ತೊತ್ತಿಂಗೆ ಬಲ್ಲಹನೊಲಿದರೆ ಪದವಿಯ ಮಾಡದೆ ಮಾಣ್ಬನೆ ?
ಜೇಡರ ದಾಸಯ್ಯಂಗೊಲಿದಾತ ಮತ್ತೊಬ್ಬ ದೇವನೆ, ಅಯ್ಯಾ ?
ಮಾದರ ಚೆನ್ನಯ್ಯಂಗೆ, ಡೋಹರ ಕಕ್ಕಯ್ಯಂಗೆ,
ತೆಲುಗ ಜೊಮ್ಮಯ್ಯಂಗೆ ಒಲಿದಾತ ಮತ್ತೊಬ್ಬ ದೇವನೆ, ಅಯ್ಯಾ ?
ಎನ್ನ ಮನದ ಪಂಚೇಂದ್ರಿಯ ನಿಮ್ಮತ್ತಲಾದರೆ
ತನ್ನತ್ತ ಮಾಡುವ ಕೂಡಲ ಸಂಗಯ್ಯ. || ೪೭೫ ||

೨

ಹೊಱಗೆ ಹೂಸಿ ಏವೆನಯ್ಯಾ,
ಒಳಗೆ ಶುದ್ಧವಾಗದನ್ನಕ್ಕ ?
ಮಣಿಯ ಕಟ್ಟಿ ಏವೆನಯ್ಯಾ,
ಮನ ಮುಟ್ಟದನ್ನಕ್ಕ ?
ನೂಱನೋದಿ ಏವೆನಯ್ಯ,
ನಮ್ಮ ಕೂಡಲ ಸಂಗಮದೇವರ ಮನಮುಟ್ಟಿ ನೆನೆಯದನ್ನಕ್ಕ ?
|| ೪೭೬ ||

೩

ಸುಚಿತ್ತದಿಂದಲೆನ್ನ ಮನವು
ನಿಮ್ಮ ನೆನೆಯಲೊಲ್ಲದು : ಎಂತಯ್ಯಾ ?
ಎನಗಿನ್ನಾವುದು ಗತಿ ? ಎಂತಯ್ಯಾ ?
ಎನಗಿನ್ನಾವುದು ಮತಿ ? ಎಂತಯ್ಯಾ ?
ಹರ ಹರಾ, ಕೂಡಲ ಸಂಗಮದೇವಾ,
ಮನವ ಸಂತೈಸೆನ್ನಾ. || ೪೭೭ ||

೪

ಅಷ್ಟಧಳಕಮಲವ ಸುತ್ತುವ ಜೀವಾತ್ಮನ
ಮೆಟ್ಟಿದ ದಳವನಱಿಯದೆ
ಭಕ್ತನಾನೆಂತೆಂಬೆ, ನಾನು ಶರಣನೆಂತೆಂಬೆ,

ಆನು ಲಿಂಗೈಕ್ಯನೆಂತೆಂಬೆ,
ಕೂಡಲ ಸಂಗಮದೇವಾ, ಎನ್ನ ಮನ ಸಮಾಧಾನವಾಗದನ್ನಕ್ಕ ?
|| ೪೭೮ ||

೫

ನಾ ನಿಮ್ಮ ನೆನೆವೆನು : ನೀವೆನ್ನ ನಜಿಾಯಿರಿ;
ನಾ ನಿಮ್ಮನೋಲೈಸುವೆನು; ನೀವೆನ್ನ ಕಾಣಿರಿ.
ನಾನೆಂತು ಬದುಕುವೆನೆಂತು ಜೀವಿಸುವೆನಯ್ಯಾ ?
ಕೂಡಲ ಸಂಗಮದೇವಾ,
ಎನಗೆ ನೀನೇ ಪ್ರಾಣ ಗತಿ ಮತಿ ನೋಡಯ್ಯಾ ! ||೪೭೯||

೬

ತಂದೆ ನೀನು, ತಾಯಿ ನೀನು;
ಬಂಧು ನೀನು, ಬಳಗ ನೀನು;
ನೀನಲ್ಲದೆ ಮತ್ತಾರೂ ಇಲ್ಲಯ್ಯಾ !
ಕೂಡಲ ಸಂಗಮದೇವಾ,
ಹಾಲಲದ್ದು, ನೀರಲದ್ದು ! || ೪೮೦ ||

೭

ಎನ್ನಾಪತ್ತು–ಸುಖ–ದುಃಖ ನೀನೇ, ಕಂಡಯ್ಯಾ;
ಮತ್ತಾರೂ ಇಲ್ಲ; ಹರಹರಾ, ನೀನೇ ಕಂಡಯ್ಯಾ !
ಎನ್ನ ಮಾತಾಪಿತರೂ ನೀನೇ ಕಂಡಯ್ಯಾ,
ಕೂಡಲ ಸಂಗಮದೇವಾ. || ೪೮೧ ||

೮

ಎನ್ನ ಜನ್ಮವ ತೊಡೆದ ನೀ ಧರ್ಮಿ,
ಎನ್ನ ಜನ್ಮವನತಿಗಳೆದ ನೀ ಧರ್ಮಿ,
ಎನ್ನ ಭವಬಂಧನವ ನಿಕರಿಸಿದೆಯಾಗಿ
ಶಿವನೇ ಗತಿಮತಿಯೆಂದು ನಂಬಿದೆನಯ್ಯಾ.
ಎನ್ನ ಅಷ್ಟಮದಂಗಳ ಸುಟ್ಟುರುಹಿದೆಯಾಗಿ

ಕಟ್ಟುಗ್ರಹದಿಂದ ನಿಮ್ಮ ಶ್ರೀಚರಣವ ಕಂಡೆ :
ಸೃಷ್ಟಿಪ್ರತಿಪಾಲಕಾ, ನಿಮ್ಮ ನಂಬಿದೆ, ಕರುಣಿಸು,
ಕೂಡಲ ಸಂಗಮದೇವಾ. ||೪೮೨||

೯

ಭವರೋಗವೈದ್ಯನೆಂದು ನಾ ನಿಮ್ಮ ಮಱಹೊಕ್ಕೆ .
ಭಕ್ತಿದಾಯಕ, ನೀ ಕರುಣಿಸು, ಲಿಂಗತಂದೇ !
'ಜಯಜಯ ಶ್ರೀಮಹಾದೇವ, ಜಯಜಯ ಶ್ರೀಮಹಾದೇವ,
ಜಯಜಯ ಶ್ರೀಮಹಾದೇವ' ಎನ್ನುತ್ತಿದ್ದಿತೆನ್ನ ಮನವು.
ಕೂಡಲ ಸಂಗಮದೇವಂಗೆ ಶರಣೆಂದಿತ್ತೆನ್ನ ಮನವು ! || ೪೮೩ ||

---

## (೧೪) ಭಕ್ತನ ಶರಣಸ್ಥಳ

೧

ಅಂಗೈಯೊಳಗಣ ಲಿಂಗವ ನೋಡುತ್ತ
ಕಂಗಳು ಕಡೆಗೋಡಿವರಿವುತ್ತ ಸುರಿಯುತ್ತ ಎಂದಿಪ್ಪೆನೊ ?
ನೋಟವೇ ಪ್ರಾಣವಾಗಿ ಎಂದಿಪ್ಪೆನೊ ?
ಕೂಟವೇ ಪ್ರಾಣವಾಗಿ ಎಂದಿಪ್ಪೆನೊ,
ಎನ್ನಂಗವಿಕಾರದ ಸಂಗವಳಿದು,
'ಕೂಡಲ ಸಂಗಯ್ಯಾ, ಲಿಂಗಯ್ಯಾ, ಲಿಂಗ ಲಿಂಗ ಲಿಂಗ 'ವೆನ್ನುತ್ತ?
|| ೪೮೪ ||

೨

ಎದೆ ಬಿರವನ್ನಕ್ಕ, ಮನ ದಣಿವನ್ನಕ್ಕ,
ನಾಲಿಗೆ ನಲಿನಲಿದಾಡುವನ್ನಕ್ಕ
ನಿಮ್ಮ ನಾಮಾಮೃತವ ತಂದೆಱೆಸು ಕಂಡಯ್ಯಾ
ಎನಗೆನ್ನ ತಂದೇ !

ಬಿರಿಮುಗಳಿಂದದಿ ಎನ್ನ ಹೃದಯ
ನಿಮ್ಮ ಶ್ರೀಚರಣದ ಮೇಲೆ ಬಿನ್ನ ರಸುಗೆ,
ಕೂಡಲ ಸಂಗಮದೇವಾ. || ೪೮೫ ||

೩

ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು
ಹಾಡಿ ನಾಲಿಗೆ ದಣಿಯದು : ಇನ್ನೇವೆನಿನ್ನೇವೆ ?
ನಿಮ್ಮ ಕೈಯಾರೆ ಪೂಜಿಸಿ ಮನ ದಣಿಯಲೊಲ್ಲದಿನ್ನೇವೆನಿನ್ನೇವೆ ?
ಕೂಡಲ ಸಂಗಮದೇವ, ಕೇಳಯ್ಯಾ,
ನಿಮ್ಮುದರವ ಬಗಿದಾನು ಹೋಗುವ ಭರವೆನಗೆ ! || ೪೮೬ ||

೪

ಕಾಮಸಂಗ ನಿಸ್ಸಂಗವಾಗಿ ಇನ್ನಾವ ಸಂಗವನಱಿಯೆನಯ್ಯಾ.
ಮಿಗೆಪೊಲಿದೆನಾಗಿ ಅಗಲಲಾಱೆನು :
ನಗೆಮೊಗದರಸಾ, ಅವಧಾರು ! ಕೂಡಲ ಸಂಗಮದೇವಾ,
ಬಗಿದು ಹೋಗುವೆ ನಾ ನಿಮ್ಮ ಮನವನು !

೫

ನೋಡಿ ನೋಡಿ ಲಿಂಗಧ್ಯಾನವೆನ್ನ ಮನವು :
ರಾಗರಂಜನೆಯ ಉತ್ಪತ್ತಿ ಸ್ಥಿತಿ ಲಯ ನಿನಗೆಂದಾದುವು.
ರಾಗರಂಜನೆಯ ಪೂಜೆ ಎನ್ನ ಮನ,
ಕೂಡಲ ಸಂಗಮದೇವಾ, ಆಹಾ, ಎನ್ನ ಮನ ! || ೪೮೮ ||

೬

ವಾರವೆಂದಱಿಯೆ, ದಿನವೆಂದಱಿಯೆ;
ಏನೆಂದಱಿಯೆನಯ್ಯಾ !
ಇರುಳೆಂದಱಿಯೆ, ಹಗಲೆಂದಱಿಯೆ;
ಏನೆಂದಱಿಯೆನಯ್ಯಾ !
ನಿಮ್ಮುವ ಪೂಜಿಸಿ ಎನ್ನುವ ಮಱೆದೆ,
ಕೂಡಲ ಸಂಗಮದೇವಾ. || ೪೮೯ ||

೭

ನಿಮ್ಮ ನೋಟವನಂತಸುಖ, ಕೂಟ ಪರಮಸುಖ !
ಅಪ್ಪಟುಕೋಟಿ ರೋಮಂಗಳೂ ಕಂಗಳಾಗಿ ನೋಡುತ್ತಿದ್ದೆನು !
ಕೂಡಲ ಸಂಗಮದೇವಯ್ಯಾ, ನಿಮ್ಮ ನೋಡಿ ನೋಡಿ
ಮನದಲ್ಲಿ ರತಿಹುಟ್ಟಿ ನಿಮಿರ್ದವೆನ್ನ ಕಳೆಗಳು ! || ೪೯೦ ||

೮

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ಕೀರುತಿ ತುಂಬಿ,
ಕೂಡಲ ಸಂಗಮದೇವಾ, ನಿಮ್ಮ ಚರಣಕಮಲದಲಾನು ತುಂಬಿ !
|| ೪೯೧ ||

೯

ಅಡಿಗಡಿಗೆ ಲಿಂಗವನಡರಿಯಡರಿ ನೋಡಿ ನೋಡಿ ಕಂಗಳು,
ಕಡೆಗೋಡಿವರಿದುವೆನಗಯ್ಯಾ ಎನ್ನಶ್ರುಜಲಂಗಳು.
ಆಲಿಕಲ್ಲ ರೂಹಿನಂತೆ, ಅರಗಿನ ಪುತ್ತಳಿಯಂತೆ
ತನು ಪುಳಕಿತವಾದ ಬೆಮರುಬಿಂದುಗಳೆಲ್ಲಾ !
ಕೂಡಲ ಸಂಗನ ದರ್ಶನಸ್ಪರ್ಶನದಿಂದ—
ಮನವೊಲಿದು ನೆರೆವ ಭರವನೇನ ಹೇಳುವೆನಯ್ಯಾ ! || ೪೯೨ ||

೧೦

ತಾಳಮಾನಸರಿಸವನರಿಯೆ, ಓಜೆಬಜಾವಣೆಯ ಲೆಕ್ಕವನರಿಯೆ,
ಅಮೃತಗಣ ದೇವಗಣವನರಿಯೆ !
ಕೂಡಲ ಸಂಗಮದೇವಾ, ನಿನಗೆ ಕೇಡಿಲ್ಲವಾಗಿ
ಆನುವೊಲಿದಂತೆ ಹಾಡುವೆ ! || ೪೯೩ ||

೧೧

ವರಂ ಪ್ರಾಣಪರಿತ್ಯಾಗಃ । ಛೇದನಂ ಶಿರಸೋಽಪಿ ವಾ
ನತ್ವನಭ್ಯರ್ಚ್ಯ ಭುಂಜೀಯಾತ್ । ಭಗವಂತಂ ತ್ರಿಲೋಚನಂ
ಎಂದುದಾಗಿ, ದೇಹಧರ್ಮ ತನ್ನ ಆದಂತೆ ಆಗಲಿ,
ಕೂಡಲ ಸಂಗನ ಪೂಜಿಸದಲ್ಲದೆ ನಿಲಲಾಱೆನು. || ೪೯೪ ||

೧೨

ಸುರರು ಕಿನ್ನರರು ಕಿಂಪುರುಷರೆಂಬವರನಾರು ಬಲ್ಲರು ?
ಎನ್ನ ಚಿತ್ತವು ನಿಮ್ಮ ಮೇಲೆ, ಸಂಗಯ್ಯಾ;
ಎನ್ನ ಚಿತ್ತವು ನಿಮ್ಮ ಮೇಲೆ, ಲಿಂಗಯ್ಯಾ.
ಕೂಡಲ ಸಂಗಮದೇವಾ.
ಅನ್ಯವೆಂಬುದನಱಿಯೆನಯ್ಯಾ. || ೪೯೫ ||

೧೩

ಮಂಡೆಯ ಬೋಳಿಸಿಕೊಂಡು ಗಂಡುದೊತ್ತುವೊಕ್ಕೆನಯ್ಯಾ !
ಲಜ್ಜೆಗೆಟ್ಟಾದರೂ ಲಿಂಗವನೊಲಿಸುವೆ;
ನಾಣುಗೆಟ್ಟಾದರೂ ಲಿಂಗವನೊಲಿಸುವೆ !
ಕೆಲದ ಸಂಸಾರಿಗಳು ನಗುತಿರ್ದೊಡಿರಲಿ;
ಕೂಡಲ ಸಂಗಮದೇವಾ, ಶರಣಗತಿವೊಕ್ಕೆನಯ್ಯಾ ! || ೪೯೬ ||

೧೪

ಎನಗೆ ನಿಮ್ಮ ನೆನಹಾದಾಗಲೆ ಉದಯ :
ಎನಗೆ ನಿಮ್ಮ ಮಱಹಾದಾಗಲೆ ಅಸ್ತಮಾನ !
ಎನಗೆ ನಿಮ್ಮ ನೆನಹವೆ ಜೀವನ :
ಎನಗೆ ನಿಮ್ಮ ನೆನಹವೆ ಪ್ರಾಣ, ಕಾಣಾ, ತಂದೇ, ಸ್ವಾಮೀ !
ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯಾ :
ವದನದಲ್ಲಿ ಷಡಕ್ಷರಿಯ ಬರೆಯಯ್ಯಾ, ಕೂಡಲ ಸಂಗಮದೇವಾ.
|| ೪೯೭ ||

೧೫

ಎನ್ನ ಕಾಯುವ ದಂಡಿಗೆಯ ಮಾಡಯ್ಯಾ;
ಎನ್ನ ಸಿರಿವ ಸೋರೆಯ ಮಾಡಯ್ಯಾ;
ಎನ್ನ ನರವ ತಂತಿಯ ಮಾಡಯ್ಯಾ;
ಎನ್ನ ಬೆರಳ ಕಡ್ಡಿಯ ಮಾಡಯ್ಯಾ !
ಬತ್ತೀಸ ರಾಗವ ಹಾಡಯ್ಯಾ; ಉರದಲೊತ್ತಿ ಬಾರಿಸು,
ಕೂಡಲ ಸಂಗಮದೇವಾ. || ೪೯೮ ||

೧೬

ಕುರುಳು ಬೆರಳು ಮುಡಹು ಮುಂಬಲ್ಲ ಕೊಳ್ಳಿ;
ನಿಱಿಯಸಿಕ್ಕಿ ದಾಂಟಿದರೆ ಅಂತೆನ್ನ ನಂಬಾ!
ಪರಪುರುಷರ ಮುಖವ ನೋಡದಂತೆ ಮಾಡಾ;
ಬಳಿಕ ನೀ ಹೇಂಗಿರಿಸಿದಂತೆ ಇರಿಸಾ!
ಎನ್ನುರದಲ್ಲಿ ಕೂಡಲ ಸಂಗಯ್ಯನೆಂದು ಬರೆಯಾ:
ಹರಿಬ್ರಹ್ಮರಿಗೇಱಗದಂತೆ ಬಳಿನೀರನೆಱೆಯಾ! || ೪೯೯ ||

೧೭

ಕಂಡ ಕನಸು, ನಿಧಾನವ ಕಂಡೆನಯ್ಯಾ;
ಬಿಡಲಾರದ ನಿಧಾನವ ಕಂಡೆನಯ್ಯಾ;
ಕೂಡಲ ಸಂಗಯ್ಯನೆಂಬ ನಿಧಾನವ ಕಂಡು ಬಿಡಲಾಱೆನಯ್ಯಾ.
|| ೫೦೦ ||

೧೮

ಹೊನ್ನ ಹಾವುಗೆಯ ಮೆಟ್ಟಿದವನ, ಮಿಡಿಮುಟ್ಟಿದ ಕೆಂಜೆಡೆಯವನ;
ಮೈಯಲ್ಲಿ ವಿಭೂತಿಯ ಧರಿಸಿದವನ,
ಕರದಲ್ಲಿ ಕಪಾಲವ ಪಿಡಿದವನ,
ಅರ್ಧನಾರಿಯಾದವನ, ಬಾಣನ ಬಾಗಿಲ ಕಾಯ್ದವನ;
ನಂಬಿಗೆ ಕುಂಟಣಿಯಾದವನ,
ಚೋಳಂಗೆ ಹೊನ್ನ ಮಳೆಯ ಕಱೆದವನ;
ಎನ್ನ ಮನಕ್ಕೆ ಬಂದವನ, ಸದ್ಭಕ್ತರ ಹೃದಯದಲ್ಲಿಪ್ಪವನ;
ಮಾಡಿದ ಪೂಜೆಯಲೊಪ್ಪುವನ, ಕೂಡಲ ಸಂಗಯ್ಯನೆಂಬವನ!
|| ೫೦೧ ||

೧೯

ಮನಕ್ಕೆ ಮನೋಹರವಲ್ಲದ ಗಂಡರು
ಮನಕ್ಕೆ ಬಾರರು, ಕೇಳವ್ವಾ ಕೆಳದೀ.
ಪನ್ನಗಭೂಷಣರಲ್ಲದ ಗಂಡರು

ಇನ್ನೆನಗಾಗದ ಮೊಱೆ, ನೋಡವ್ವಾ !
ಕನ್ನೆಯಂದಿನ ಕೂಟ : ಚಿಕ್ಕಂದಿನ ಬಾಳುವೆ,
ನಿಮ್ಮಾಣೆಯಂಗ್ಯಾ ಕೂಡಲ ಸಂಗಮದೇವಾ ! ॥ ೫೦೨ ॥

೨೦

ಜಗವೆಲ್ಲಾ ಅಱಿಯಲು ಎನಗೊಬ್ಬ ಗಂಡನುಂಟು :
ಆನು ಮುತ್ತೈದೆ, ಆನು ನಿಟ್ಟೈದೆ.
ಕೂಡಲ ಸಂಗಯ್ಯನಂತಪ್ಪ ಎನಗೊಬ್ಬ ಗಂಡನುಂಟು ! ॥ ೫೦೩ ॥

೨೧

ಸಂಸಾರವೆಂಬ ಶ್ವಾನನಟ್ಟಿ ಮೀಸಲ ಬೇಸರ ಮಾಡದಿರಯ್ಯಾ.
ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ :
ನೀವಲ್ಲದೆ ಮತ್ತೇನನೂ ಅಱಿಯೆನು.
ಕನ್ನೆಯಲ್ಲಿ ಕೈವಿಡಿದೆನು, ನಿಮ್ಮಲ್ಲಿ ನೆರೆದೆನು,
ಮನ್ನಿಸು, ಕಂಡಾ, ಮಹಾಲಿಂಗವೇ.
ಸತಿಯಾನು, ಪತಿ ನೀನು, ಅಯ್ಯಾ :
ಮನೆಯೊಡೆಯ ಮನೆಯ ಕಾಯ್ದಿಪ್ಪಂತೆ
ನೀನೆನ್ನ ಮನವ ಕಾಯ್ದಿಪ್ಪ ಗಂಡನು !
ನಿಮಗೋತ ಮನವನನ್ಯಕ್ಕೆ ಹರಿಸಿದರೆ
ನಿನ್ನಭಿಮಾನ ಹಾನಿ, ಕೂಡಲ ಸಂಗಮದೇವಾ. ॥ ೫೦೪ ॥

## (೧೫) ಭಕ್ತನೈಕ್ಯಸ್ಥಳ

೧

ನೀನೊಲಿಯುತ್ತೇ ಪುಣ್ಯ : ನೀನೊಲ್ಲುದುದೇ ಪಾಪ, ಕಂಡಯ್ಯಾ
ಸಕಲ ಜಗದೊಳಗೆ ಅನುಸ್ಯೂತನಾಗಿಪ್ಪೆಯಯ್ಯಾ :
ನೀನೊಲಿದವನೇ ನಿಮ್ಮನಜೀವನು :
ಪ್ರಸಾದಾದ್ದೇವತಾಭಕ್ತಿಃ । ಪ್ರಸಾದೋ ಭಕ್ತಿ ಸಂಭವಃ
ಯಥಾಂಕುರತೋವಾ ಬೀಜಂ । ಬೀಜತೋವಾ ಯಥಾಂಕುರಃ
ನೀನೊಲಿದವನೇ ಧನ್ಯ, ಜಗಕ್ಕೆ ಪಾವನ,
ಕೂಡಲ ಸಂಗಮದೇವಾ. ॥ ೫೦೫ ॥

೨

ಅಷ್ಟವಿಧಾರ್ಚನೆ ಷೋಡಶೋಪಚಾರವ,
ಅಂದಂದಿನ ಕೃತ್ಯವನಂದಂದಿಗೆ ಆನು ಮಾಡಿ ಶುದ್ಧನಯ್ಯಾ !
ಹಂಗು ಹರಿಯಿಲ್ಲದ ಕಾರಣ,
ಕೂಡಲ ಸಂಗಮದೇವ ನಿಷ್ಫಲದಾಯಕನಾಗಿ,
ಆನು ಮಾಡಿ ಶುದ್ಧನಯ್ಯಾ ! ॥ ೫೦೬ ॥

೩

' ಮಾಟ–ಕೂಟ ಫಲಪ್ರಾಪ್ತಿ ' ಎಂಬ ಮಾತ ಕೇಳಲಾಗದು, ಶಿವ ಶಿವಾ
ನಿಮ್ಮ ಭಕ್ತರಿಗೆ ' ಮಾಡಿದೆ ' ನೆನ್ನದಿರೆಂದು
ಶ್ರೀಗುರುಲಿಂಗವು ಕೃಪೆಯ ಮಾಡಿದ ಕಾರಣ,
ಅಲ್ಲಿ ಮಾಡುವರೂ ಮಾಡಿಸಿಕೊಂಬವರೂ ನೀವೇ,
ಕೂಡಲ ಸಂಗಮದೇವಾ. ॥ ೫೦೭ ॥

೪

ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ತನು ಹಾಳಾಯಿತ್ತಯ್ಯಾ !
ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಮನ ಹಾಳಾಯಿತ್ತಯ್ಯಾ !
ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಕರ್ಮ ಛೇದನವಾಯಿತ್ತು !
ನಿಮ್ಮವರು ಹೇಳಿ ಅಡಿಗಡಿಗೆ ಭಕ್ತಿಯೆಂಬ ಒಡವೆಯ
ದಿಟಮಾಡಿ ತೋರಿದರು, ಕಾಣಾ, ಕೂಡಲ ಸಂಗಮದೇವಾ ॥೫೦೮॥

೫

ಭಕ್ತನೆಂತೆಂಬೆನಯ್ಯಾ ಭವಿಸಂಗ ಬಿಡದನ್ನಕ್ಕ ?
ಮಾಹೇಶ್ವರನೆಂತೆಂಬೆನಯ್ಯಾ
ಪರಸ್ತ್ರೀಯ ಪರರರ್ಥದಾಸೆ ಬಿಡದನ್ನಕ್ಕ ?
ಪ್ರಸಾದಿಯೆಂತೆಂಬೆನಯ್ಯಾ
ಆಧಿ ವ್ಯಾಧಿ ನಷ್ಟವಾಗದನ್ನಕ್ಕ ?
ಪ್ರಾಣಲಿಂಗಿಯೆಂತೆಂಬೆನಯ್ಯಾ
ಪ್ರಾಣ ಸ್ವಸ್ಥಿರವಾಗದನ್ನಕ್ಕ ?
ಶರಣನೆಂತೆಂಬೆನಯ್ಯಾ, ಪಂಚೇಂದ್ರಿಯ ನಾಸ್ತಿಯಾಗದನ್ನಕ್ಕ ?
ಐಕ್ಯನೆಂತೆಂಬೆನಯ್ಯಾ
ಜನನ ಮರಣ ವಿರಹಿತವಾಗದನ್ನಕ್ಕ ?
ಇಂತಪ್ಪ ಭಾಷೆ ವ್ರತ ನೇಮಂಗಳ ನಾನಱಿಯೆನಯ್ಯಾ !
ಅಘಟಿತ ಘಟಿತ ವರ್ತಮಾನವ ನಾನೇಱಿಯೆನಯ್ಯಾ !
ನಿಮ್ಮ ಶರಣರ ತೊತ್ತು, ಭೃತ್ಯಾಚಾರವ ಮಾಡುವೆ,
ಕೂಡಲ ಸಂಗಮದೇವಾ. || ೫೦೯ ||

೬

ಅಭ್ಯಾಸವೆನ್ನ ವರ್ತಿಸಿತ್ತಯ್ಯಾ :
ಭಕ್ತಿ ಸಾಧ್ಯವಾಗದು, ನಾನೇವೆನಯ್ಯಾ ?
ಆ ನಿಮ್ಮ ಮನಬೊಗುವನ್ನಕ್ಕ ನೀವೆನ್ನ ಮನಬೊಗುವನ್ನಕ್ಕ
ಕಾಯಗುಣಂಗಳ ಕಳೆದವರಿಗೆ ಶರಣೆಂಬೆ,
ಕೂಡಲ ಸಂಗಮದೇವಾ. || ೫೧೦ ||

೭

ತನುಸಾರಾಯರ, ಮನಸಾರಾಯರ, ಜ್ಞಾನಸಾರಾಯರ
ತೋಱಿಯ್ಯಾ, ನಿಮ್ಮ ದರ್ಮ !
ಭಾವಸಾರಾಯರ ಭಕ್ತಿಸಾರಾಯರ
ತೋಱಿಯ್ಯಾ, ನಿಮ್ಮ ಧರ್ಮ !

ಕೂಡಲ ಸಂಗಮದೇವಯ್ಯಾ, ನಿಮ್ಮನಱಿಯದವಗುಣಿಗಳ
ತೋಱದಿರಯ್ಯಾ, ನಿಮ್ಮ ಧರ್ಮ ! || ೫೧೧ ||

೮

ಸಂಚುವಿಲ್ಲದ, ಭಕ್ತಿವಂಚನೆಯಿಲ್ಲದ
ಮಹಂತನ ತೋಱಾ.
ತನುಶುಚಿಗಳ ಮನಶುಚಿಗಳ ತೋಱಾ.
ಇಂತಪ್ಪ ಶಿವಲಿಂಗೈಕ್ಯರ ತೋಱು, ಬದುಕಿಸು,
ಕೂಡಲ ಸಂಗಮದೇವಾ. || ೫೧೨ ||

೯

ಕಾಮಸಂಗವಳಿದು ಅನುಭಾವಸಂಗದಲುಳಿದವರ ಅಗಲಲಾಱೆನು.
ಶಿವಂಗೆ ಮಿಗೆಯೊಲಿದವರನು ನಾನಗಲಲಾಱೆನು, ಕಾಣಾ,
ಕೂಡಲ ಸಂಗಮದೇವಾ. || ೫೧೩ ||

೧೦

ಭಕ್ತಿರತಿಯ ವಿಕಳತೆಯ ಯುಕ್ತಿಯನೇನ ಬೆಸಗೊಂಬಿರಯ್ಯಾ ?
ಕಾಮಿಗುಂಟೆ ಲಜ್ಜೆ-ನಾಚಿಕೆ ? ಕಾಮಿಗುಂಟೆ ಮಾನಾಪಮಾನವು ?
ಕೂಡಲ ಸಂಗನ ಶರಣರಿಗೊಲಿದ ಮರುಳನನೇನ ಬೆಸಗೊಂಬಿರಯ್ಯಾ ?
|| ೫೧೪ ||

೧೧

ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತಯ್ಯಾ !
ಆ ಕೂಸು ಬೀದಿಯಲ್ಲಿ ಛತ್ರಿಗೊಳ್ಳಲು ನಿಂದಿತ್ತಯ್ಯಾ !
ಇದರ ಸಂಗಸುಖದನುಭಾವವನು
ಕೂಡಲ ಸಂಗಮದೇವ ತಾನೇ ಬಲ್ಲ ! || ೫೧೫ ||

೧೨

ಸಕ್ಕರೆಯ ಕೊಡನ ತುಂಬಿ ಹೊಱಗೆ ಸವಿದರೆ ರುಚಿಯುಂಟೆ ?
ತಕ್ಕೈಸಿ ಭುಜತುಂಬಿ ಲಿಂಗಸ್ಪರ್ಶನವ ಮಾಡದೆ
ಅಕ್ಕಟಾ ! ಸಂಸಾರ ವೃಥಾ ಹೋಯಿತ್ತಲ್ಲಾ !

ಅದೇತರ ಭಕ್ತಿ ? ಅದೇತರ ಯುಕ್ತಿ ?
ಕೂಡಿಕೋ, ಕೂಡಲ ಸಂಗಮದೇವಾ. || ೫೧೬ ||

೧೩

ಕಾಳಿದಾಸಂಗೆ ಕಣ್ಣನಿತ್ತೆ, ಓಹಿಲಯ್ಯನ ನಿಜಪುರಕ್ಕೊಯಿದೆ;
ನಂಬಿ ಕರೆದೊಡೋ ಎಂದೆ,
ತೆಲುಗ ಜೊಮ್ಮಯ್ಯಂಗೆ ಒಲಿದೆ, ದೇವಾ.
ಕೂಡಲ ಸಂಗಮದೇವಾ,
ಎನ್ನನೇಕೆ ಒಲ್ಲೆಯಯ್ಯಾ ? || ೫೧೭ ||

೧೪

ಪರಚಿಂತೆ ಎನಗೇಕಯ್ಯಾ ? ನಮ್ಮ ಚಿಂತೆ ನಮಗೆ ಸಾಲದೆ ?
'ಕೂಡಲ ಸಂಗಯ್ಯ ಒಲಿದಾನೊ, ಒಲಿಯನೊ' ಎಂಬ ಚಿಂತೆ
ಹಾಸಲುಂಟು, ಹೊದೆಯಲುಂಟು ! || ೫೧೮ ||

೧೫

ಕಣ್ಣ ಕೋಪಕ್ಕೆ ಮುಂದರಿಯದೆ ನುಡಿದೆ :
ಮನಮೆಚ್ಚಿ ಮರುಳಾದೆ, ನೋಡವ್ವಾ !
ಕೇಳು, ಕೇಳವ್ವಾ, ಕೆಳದೀ,
ಸಖಿಯರಿಲ್ಲದೆ ಸುಖವ ಬಯಸುವರುಂಟೆ ? ಹೇಳಾ.
ಎನ್ನ ಮುನಿಸು ಎನ್ನಲ್ಲಿಯೆ ಅಡಗಿತ್ತು :
ಇನ್ನು ಬಾರಯ್ಯಾ, ಕೂಡಲ ಸಂಗಮದೇವಾ. || ೫೧೯ ||

೧೬

ಲಜ್ಜೆಗೆಟ್ಟೆನು, ನಾಣುಗೆಟ್ಟೆನು;
ಕುಲಗೆಟ್ಟೆನು, ಛಲಗೆಟ್ಟೆನು :
ಸಂಗಾ, ನಿನ್ನ ಪೂಜಿಸಿ ಭವಗೆಟ್ಟೆನು, ನಾನಯ್ಯಾ !
ಕೂಡಲ ಸಂಗಮದೇವಯ್ಯಾ
**ನಿಮ್ಮ ಮುಟ್ಟಿ ಹುಟ್ಟುಗೆಟ್ಟೆನು ನಾನು !!** || ೫೨೦ ||

೧೭

ಮಾಡುವ ಭಕ್ತನ ಕಾಯ ಬಾಳೆಯ ಕಂಭದಂತಿರಬೇಕು:
ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದರೆ
ಒಳಗೆ ಕೆಚ್ಚಿಲ್ಲದಿರಬೇಕು.
ಮೇಲಾದ ಫಲವ ನಮ್ಮವರು ಬೀಜಸಹಿತ ನುಂಗಿದರು :
ಎನಗಿನ್ನಾವ ಭವವಿಲ್ಲ, ಕಾಣಾ,
ಕೂಡಲ ಸಂಗಮದೇವಾ. || ೫೨೧ ||

೧೮

ಜಂಗಮವ ಕೂಡಿಕೊಂಡು ಲಿಂಗಾರ್ಚನೆಯ
ಮಾಡುವುದು ಲೇಸಯ್ಯಾ ಭಕ್ತಂಗೆ.
ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ
ಮಾಡುವುದು ಲೇಸಯ್ಯಾ ಜಂಗಮಕ್ಕೆ.
ಆ ಜಂಗಮದ ಕರ್ತವ್ಯವೆ ಆ ಭಕ್ತಂಗೆ ದಾಸೋಹ !
ಆ ಭಕ್ತನ ಕಿಂಕಲವೆ ಆ ಜಂಗಮಕ್ಕ ದಾಸೋಹ !
ಆ ಭಕ್ತನೊಳಗೆ ಜಂಗಮವಡಗಿ,
ಆ ಜಂಗಮದೊಳಗೆ ಭಕ್ತನಡಗಿ—
ಇದೇನೆಂದು ಹವಣಿಸುವೆನಯ್ಯಾ ಎರಡೊಂದಾದ ಘನವ ?
ಇದೇನೆಂದುಪಮಿಸುವೆನಯ್ಯಾ ತೆಱಹಿಲ್ಲದ ಘನವ ?
ಈ ಎರಡಕ್ಕೆ ಭವವಿಲ್ಲೆಂದು, ಕೂಡಲ ಸಂಗಯ್ಯಾ,
ನಿಮ್ಮ ಶ್ರುತಿಗಳು ಹೇಳಿದುವಾಗಿ,
ನಿಮ್ಮ ಕರುಣವೆನಗಾಯಿತ್ತು. || ೫೨೨ ||

೧೯

ಹರಿವ ನದಿಯ ತೆಱನ ಹೋಲಬಲ್ಲರೆ ಭಕ್ತಿ;
ಕೂಡಿ ಸುಯಿದಾನವ ನೀಡಬಲ್ಲರೆ ಭಕ್ತಿ.
ನೀಡಿ ಮಿಕ್ಕುದ ಕಾಯ್ದುಕೊಂಡಿರಬಲ್ಲರೆ
ಕೂಡಿಕೊಂಡಿಪ್ಪ ನಮ್ಮ ಕೂಡಲ ಸಂಗಮದೇವ ! || ೫೨೩ ||

೨೦

ಏನು ಮಾಡುವೆ ? ಎನ್ನ ಪುಣ್ಯದ ಫಲವು !
 ಶಾಂತಿಯ ಮಾಡಹೋದರೆ, ಕೂಡೆ ಬೇತಾಳನಾಯಿತ್ತು !
ಕೂಡಲ ಸಂಗಮದೇವನ ಪೂಜಿಸಿಹೆನೆಂದರೆ
ಭಕ್ತಿ ಎಂಬ ಮೃಗವೆನ್ನನಟ್ಟಿ ಬಂದು ನುಂಗಿತ್ತಯ್ಯಾ ! || ೫೨೪ ||

೨೧

ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ
 ಲಿಂಗವೆಂಬ ಎಲೆಯಾಯಿತ್ತು.
ಲಿಂಗವೆಂಬ ಎಲೆಯ ಮೇಲೆ
 ವಿಚಾರವೆಂಬ ಹೂವಾಯಿತ್ತು,
 ಆಚಾರವೆಂಬ ಕಾಯಾಯಿತ್ತು,
 ನಿಷ್ಪತ್ತಿಯೆಂಬ ಹಣ್ಣಾಯಿತ್ತು.
ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ
 ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ. || ೫೨೫ ||

———

# ಮಾಹೇಶ್ವರ ಸ್ಥಳ

## (೧೬) ಮಾಹೇಶ್ವರ ಜ್ಞಾನಿಸ್ಥಲ

೧

‘ ಸ್ವಾಮಿ ನೀನು, ಶಾಶ್ವತ ನೀನು : ’
ಎತ್ತಿದೆ ಬಿರುದ ಜಗವೆಲ್ಲಱಿಯಲು.
‘ ಮಹಾದೇವ, ಮಹಾದೇವ : ’
ಇಲ್ಲಿಂದ ಮುಂದೆ ಶಬ್ದವಿಲ್ಲ !
ಪಶುಪತಿ ಜಗಕ್ಕೆ ಏಕೋದೇವ :
ಸ್ವರ್ಗ ಮರ್ತ್ಯ ಪಾತಾಳದೊಳಗೆ
ಒಬ್ಬನೆ ದೇವ ಕೂಡಲ ಸಂಗಮದೇವ. || ೫೨೬ ||

೨

ಶ್ರುತಿಗಗಮ್ಯ, ದ್ವಾದಶಾಂತ್ಯನಪ್ರತಿಮಮಹಿಮಂಗೆ ಪ್ರತಿಯುಂಟೆ ?
‘ ಸೋಮಃ ಪವತೇ ’ ಎಂಬ ಶ್ರುತಿಯನಱಿತು,
ಶಿವ ‘ ನೇಕೋ ದೇವ, ರುದ್ರನದ್ವಿತೀಯನೆ ’ಂದು
ನಂಬುವುದು, ಕಾಣಿರಣ್ಣಾ.
‘ ಕೂಡಲ ಸಂಗಮದೇವನಲ್ಲದೆ ಇಲ್ಲ ’ ವೆಂದೆತ್ತಿದೆ
ಬಿರುದ ಜಗವೆಲ್ಲಱಿಯಲು. || ೫೨೭ ||

೩

ಉಪ್ಪರಗುಡಿ, ನಂದಿವಾಹನ ಸದ್ಯೋಜಾತನ
ಬಾಗಿಲ ಮುಂದೆ ಸಾರುತ್ತೈದಾವೆ, ನೋಡಾ :
ಶ್ರುತಿಗಳು ನಾಲ್ಕು ವೇದವೂ ಹುಸಿಯದೆ
‘ ಭರ್ಗೋದೇವಸ್ಯ ಧೀಮಹಿ ’ ಎಂದುದಾಗಿ
ಕೂಡಲ ಸಂಗಮನಲ್ಲದಿಲ್ಲೆಂದುದು ವೇದ. || ೫೨೮ ||

೪

‘ ವೇದ ಸ್ವಯಂಭು ’ ವೆಂಬ ವಾದಿ ನೀ ಕೇಳೆಲವೋ :
‘ ಏಕೋ ದೇವ ರುದ್ರಸದ್ವಿತೀಯ ’ ನೆಂದು
ನಂಬುವುದು ಕಾಣಿರಣ್ಣಾ
‘ ಓಂ ದ್ಯಾವಾ ಭೂಮೀಜನಯಂ ದೇವ ಏಕೋ ದೇವ
ಏಕೋ ಹಿ ರುದ್ರೋ ನದ್ವಿತೀಯಾಯ ತಸ್ತುಃ ’
ಎಂದು ನಂಬುವುದು, ಕಾಣಿರಣ್ಣಾ
‘ ಚಕಿತಮಭಿಧತ್ತೇ ’ ಎಂದು ಶ್ರುತಿ ಸಾರುತ್ತೈದಾವೆ.
ಜಗದ ಕರ್ತ ಕೂಡಲ ಸಂಗಮದೇವನೊಬ್ಬನೇ, ಕಾಣಿರಣ್ಣಾ. ||೫೨೯||

೫

ಶ್ರುತಿತತಿಶಿರದ ಮೇಲೆ ‘ ಅತ್ಯತಿಷ್ಠದ್ದಶಾಂಗುಲ ’ ನ
ನಾನೇನೆಂಬೆನಯ್ಯಾ,
ಘನಕ್ಕೆ ಘನಮಹಿಮನ, ಮನಕ್ಕಗೋಚರನ ?
‘ ಅಣೋರಣೀಯಾನ್ ಮಹತೋ ಮಹೀಯಾನ್ ’
ಮಹದಾನಿ ಕೂಡಲ ಸಂಗಮದೇವ. || ೫೩೦ ||

೬

ಸಕಲ ನಿಷ್ಕಲವ ಕೂಡಿಕೊಂಡಿಪ್ಪೆಯಾಗಿ
ಸಕಲ ನೀನೇ, ದೇವಾ; ನಿಷ್ಕಲ ನೀನೇ, ಕಂಡಯ್ಯಾ.
ವಿಶ್ವತಸ್‌ಚಕ್ಷು ನೀನೇ, ದೇವಾ; ವಿಶ್ವತೋಮುಖ ನೀನೇ, ದೇವಾ;
ವಿಶ್ವತೋಬಾಹು ನೀನೇ ದೇವಾ, ಕೂಡಲ ಸಂಗಮದೇವಾ. ||೫೩೧||

೭

ಎತ್ತೆತ್ತ ನೋಡಿದತ್ತತ್ತ ನೀನೇ ದೇವಾ;
ಸಕಲವಿಸ್ತಾರದ ರೂಹು ನೀನೇ, ದೇವಾ;
ವಿಶ್ವತಸ್‌ಚಕ್ಷು ನೀನೇ, ದೇವಾ; ವಿಶ್ವತೋಮುಖ ನೀನೇ, ದೇವಾ;
ವಿಶ್ವತೋಬಾಹು ನೀನೇ, ದೇವಾ;
ವಿಶ್ವತಃಪಾದ ನೀನೇ, ದೇವಾ; ಕೂಡಲ ಸಂಗಮದೇವಾ. || ೫೩೨ ||

೮

ಜಲಕೂರ್ಮನಾಗಮೇದಿನಿ ಸಪ್ತಸಾಗರ
ಅಜಾಂಡಭಾಂಡ ಹರಿವಿರಂಚಿಗಳು
ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯಾ !
ಕೂಡಲ ಸಂಗನ ಮಹಾಮನೆಯಲು ಅಸ್ತಿಗ್ರಾಹಕನೆಂಬ ಗಣೇಶ್ವರನ
ಇಚ್ಛಾಮಾತ್ರದಿಂದೆ ಜಗಜುಗವಯ್ಯಾ ? || ೫೩೩ ||

೯

ರುದ್ರ ಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜ ಜನನವು !
ಇಂದ್ರ ಪಾದದಲ್ಲಿ, ಚಂದ್ರ ಮನದಲ್ಲಿ, ಚಕ್ಷುವಿನಲ್ಲಿ ಸೂರ್ಯ ಜನನವು !
ಮುಖದಲ್ಲಿ ಅಗ್ನಿಯು, ಪ್ರಾಣದಲ್ಲಿ ವಾಯು
ನಾಭಿಯಲ್ಲಿ ಅಂತರಿಕ್ಷವು.
ಶಿರದಲುದಯ ತೆತ್ತೀಸಕೋಟಿ ದೇವತೆಗಳು,
ಪಾದತಳದಲ್ಲಿ ಭೂಮಿ ಜನನವು !
ಶ್ರೋತ್ರದಲ್ಲಿ ದಶದಿಕ್ಕುವೂ !
ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ ಅಕ್ಷಯನಗಣಿತನು !
ಸಾಸಿರ ತಲೆ, ಸಾಸಿರ ಕಣ್ಣು, ಸಾಸಿರ ಕೈ, ಸಾಸಿರ ಪಾದ,
ಸಾಸಿರಸನ್ನಿಹಿತ ನಮ್ಮ ಕೂಡಲ ಸಂಗಯ್ಯ ! || ೫೩೪ ||

೧೦

ವಿಶ್ವಾಧಿಕೋರುದ್ರನ ಹೊಗಳುವ ಶ್ರುತಿಗಳು :
'ವಿಶ್ವರೂಪಾಯ ವೈ ನಮಃ'
ಪರಮರೂಪನೇ ನಮೋ, ಪರರತತ್ತ್ವನೇ ನಮೋ,
ಆದಿಯಾರೂಢಭಯಂಕರನೇ ನಮೋ
ಹರಿಯನು ಹರಿಸಿದನೇ
ಎಂದು ಶ್ರುತಿಯು ಸಾರುತ್ತಿರಲು—
ಸಂಹಾರಕಾರಣನೇ ನಮೋ, ನಮ್ಮ ಕೂಡಲ ಸಂಗಮದೇವಾ,
ಮಹನ್‌ಮಹದ್‌ಭ್ಯೋ ನಮಃ || ೫೩೫ ||



ನಟರಾಜನ ಕಂಚಿನ ಪ್ರತಿಮೆ

೧೧

ಅಯ್ದುದೇ ಬ್ರಹ್ಮನ ಕಪಾಲ ಕರದಲ್ಲಿ :
ಅಯ್ದುದೇ ವಿಷ್ಣುವಿನ ನಯನ ಪಾದದಲ್ಲಿ
ಅಯ್ದುದೇ ಕಾಮನ ಸುಟ್ಟ ಭಸ್ಮ ಮೈಯಲ್ಲಿ
ಮುಖ ಮಾಡದಲೆ ಏಕಯ್ಯಾ, ಕೂಡಲ ಸಂಗಮದೇವಾ ? ‖ ೫೩೬ ‖

೧೨

ಹರನ ಕೊರಳಲ್ಲಿಪ್ಪ ಕರೋಟಿಮಾಲೆಯು
ಶಿರದ ಲಿಖಿತವ ಕಂಡು ಮರುಳುತಂಡಗಳು ಓದಿ ನೋಡಲು
' ಇವನಜ, ಇವ ಹರಿ, ಇವ ಸುರಪತಿ,
ಇವ ಧರಣೀಂದ್ರನಿವನಂತಕ ' ನೆಂದು
ಹರುಷದಿಂದ ಸರಸವಾಡಿತ್ತ ಕಂಡು
ಹರ ಮುಕುಳಿತನಾಗಿ ನಸು ನಕ್ಕನು
ನಮ್ಮ ಕೂಡಲ ಸಂಗಮದೇವ. ‖ ೫೩೭ ‖

೧೩

ಅದುರಿತು ಪಾದಾಘಾತದಿಂದ ಧರೆ;
ಬಿದಿರಿದುವು ಮುಕುಟ ತಾಗಿ ತಾರಕೆಗಳು;
ಉದುರಿದುವು ಕೈ ತಾಗಿ ಲೋಕಂಗಳೆಲ್ಲಾ !
ಮಹೀ ಪಾದಾಘಾತಾದ್ ವ್ರಜತಿ ಸಹಸಾ ಸಂಶಯಪದಂ
ಪದಂ ವಿಷ್ಣೋರ್ ಭ್ರಾಮ್ಯಾದ್ಭುಜಪರಿಘರುಗ್ಣಗ್ರಹಗಣಂ ।
ಮುಹುರ್ ದ್ಯೌರ್ದೌಸ್ಥ್ಯಂ ಯಾತ್ಯನಿಭೃತ ಜಟಾತಾಡಿತತಟಾ
ಜಗದ್ರಕ್ಷಾಯೈ ತ್ವಂ ನಟಸಿ ನನು ವಾಮೈವ ವಿಭುತಾ ॥
ನಮ್ಮ ಕೂಡಲ ಸಂಗಮದೇವನಿಂದು ನಾಟ್ಯವನಾಡೆ. ‖ ೫೩೮ ‖

೧೪

ಆಱುಕೋಟಿ ಬ್ರಹ್ಮರು ಮಡಿವಲ್ಲಿ ನಾರಾಯಣಗೆ ಒಂದು ದಿನವಾಯ್ತು.
ನಾರಾಯಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು.
ರುದ್ರಾವತಾರ ಹಲವಳಿದಲ್ಲಿ
ನಮ್ಮ ಕೂಡಲ ಸಂಗಮದೇವನೇನೆಂದೂ ಅಱಿಯನು. ‖೫೩೯‖

೧೫

ಯುಗಜುಗಪ್ರಳಯವಹಂದೂ ಕಾಣೆನಿಂದೂ ಕಾಣೆ !
ಧಿಗಿಲುಭುಗಿಲೆಂದುರಿವಂದೂ ಕಾಣೆನಿಂದೂ ಕಾಣೆ !
ಕೂಡಲ ಸಂಗಮದೇವನಲ್ಲದೆ ತಲೆದೋಱುವ
ದೈವಂಗಳನಂದೂ ಕಾಣೆನಿಂದೂ ಕಾಣೆ ! || ೫೪೦ ||

೧೬

ಒಬ್ಬ ಕೆಂಚನೊಬ್ಬ ಕರಿಕನೊಬ್ಬ ಶುದ್ಧಧವಳಿತನೆಂತಯ್ಯಾ, ಲಿಂಗವೇ ?
ಒಬ್ಬರಿಗೊಬ್ಬರು ಘನವೆಂಬರು : ಅದೆಂತಯ್ಯಾ ?
ಒಬ್ಬರಿಗೊಬ್ಬರು ಹಿರಿದೆಂಬರು; ಎಂತಯ್ಯಾ ?
ಬ್ರಹ್ಮಪ್ರಳಯ, ವಿಷ್ಣುಮರಣ ಉಂಟು,
ನಮ್ಮ ಕೂಡಲ ಸಂಗಂಗಿಲ್ಲ ! || ೫೪೧ ||

೧೭

ಹರಿ–ಹರನೊಂದೆ ಎಂಬರೆ ಸುರಿಯವೆ ಬಾಯಲ್ಲಿ ಬಾಲಹುಳುಗಳು ?
ಹರಿಗೆ ಹತ್ತುಪ್ರಳಯ ! ಬ್ರಹ್ಮಂಗನಂತಪ್ರಳಯ !
ಹರಂಗೆ ಪ್ರಳಯವುಂಟೆಂಬುದ ಬಲ್ಲರೆ ನೀವು ಹೇಳಿರೆ !
ಪ್ರಳಯ, ಪ್ರಳಯ ಅಂದಂದಿಂಗೆ !
ಹಳೆಯ ಕೂಡಲ ಸಂಗಮದೇವ !! || ೫೪೨ ||

೧೮

ವಿಷ್ಣು ಕರ್ಮಿ, ರುದ್ರ ನಿಷ್ಕರ್ಮಿ :
ಕ್ರಮವನಱಿಯದೆ ನುಡಿವಿರೋ !
ವೇದಶ್ರುತಿಗಳ ತಿಳಿಯಲಱಿಯದೆ
ವಾದವ ಮಾಡುವರೆಲ್ಲಾ ಕೇಳಿ :
ವಿಷ್ಣು ನಾನಾಯೋನಿಯಲ್ಲಿ ಬಾರದ ಭವಂಗಳಲ್ಲಿ ಬರುತಿಪ್ಪ :
ರುದ್ರನಾವ ಯೋನಿಯಲ್ಲಿ ಬಂದನೆಂದು ನೀವು ಹೇಳಿರೊ !

" ಓಂ ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಸೇ
ಇಂದ್ರಸ್ಯ ಯುಜ್ಯಃ ಸಖಾ ''
" ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ
ಅತೋ ಧರ್ಮಾಣಿ ಧಾರಯನ್ "
"ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ
ವಿಷ್ಣೋರ್ಯತ್ ಪರಮಂ ಪದಮ್ ''
ಎಂಬ ಶ್ರುತಿಯ ವಚನವ ತಿಳಿಯಿಂ ಭೋ
ಮರ್ಮವನೆತ್ತಿ ನುಡಿವಲ್ಲದೆ ಸಿಲ್ಲಿರಿ :
ನಿಮ್ಮ ಕರ್ಮವು ಅತ್ಯತಿಷ್ಠದ್ದಶಾಂಗುಲದಿಂದತ್ತತ್ತಲೆ !
ಕೂಡಲ ಸಂಗಮದೇವಾ. || ೫೪೩ ||

೧೯

ಅಮೃತವತಿ ಸೋಮಶಂಭುವಿಂಗೆ ಹುಟ್ಟಿದಾತ ಇಂದ್ರ;
ಸತ್ಯಋಷಿ ಜ್ಯೇಷ್ಠಾದೇವಿಗೆ ಹುಟ್ಟಿದಾಪ ಬ್ರಹ್ಮ;
ವಸುದೇವ ದೇವಕಿಗೆ ಹುಟ್ಟಿದಾತ ವಿಷ್ಣು;
ನಾಭಿರಾಜ ಮರುತಾದೇವಿಗೆ ಹುಟ್ಟಿದಾತನರುಹ.
ಇವರೆಲ್ಲರೂ ಯೋನಿಜರೆಂಬುದ ತ್ರೈಜಗ ಬಲ್ಲುದು.
ಉತ್ಪತ್ತಿ ಸ್ಥಿತಿ ಪ್ರಳಯಕ್ಕೆ ಹೊರಗಾದ ಕೂಡಲ ಸಂಗಮದೇವಂಗೆ
ಮಾತಾಪಿತರುಳ್ಳರೆ ಹೇಳಿರೋ ! || ೫೪೪ ||

೨೦

ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ :
ಒಬ್ಬನೇ ಕಾಣಿರೋ, ಇಬ್ಬರೆಂಬುದು ಹುಸಿ ನೋಡಾ !
ಕೂಡಲ ಸಂಗಮದೇವನಲ್ಲದೆ ಇಲ್ಲವೆಂದಿತ್ತು ವೇದ. || ೫೪೫ ||

೨೧

ಹುಟ್ಟಿಸುವಾತ ಬ್ರಹ್ಮನೆಂಬರು, ರಕ್ಷಿಸುವಾತ ವಿಷ್ಣುವೆಂಬರು, ನೋಡಾ.
ಬ್ರಹ್ಮ ತನ್ನ ಶಿರವನ್ನೇಕೆ ಹುಟ್ಟಿಸಲಾರ ?
ವಿಷ್ಣು ತನ್ನ ಮಗನನ್ನೇಕೆ ರಕ್ಷಿಸಲಾರ ?
ದುಷ್ಟನಿಗ್ರಹ ಶಿಷ್ಟಪರಿಪಾಲಕ ನಮ್ಮ ಕೂಡಲ ಸಂಗಮದೇವ. ||೫೪೬||

೨೨

‘ ಕೇಶವನಲ್ಲದೆ ಅಂತಃಪರದೈವವಿಲ್ಲೆ ’ ಂದು
ವೇದವ್ಯಾಸಮುನಿ ಭಂಗವಾದುದನಱಿಯಿರೆ ?
“ ಅಹಮೇವ ಜಗತ್ಕರ್ತಾ । ಮಮ ಕರ್ತಾ ಮಹೇಶ್ವರಃ ”
ಎಂದು ವಿಷ್ಣು ಹೇಳಿದ ವಚನವ ಮಱೆದಿರಲ್ಲಾ !
ಕೂಡಲ ಸಂಗಮದೇವನು ॥ ೩೪೭ ॥
ದಕ್ಷ ಯಜ್ಞವ ಕೆಡಿಸಿದುದ ಮಱೆದಿರಲ್ಲಾ !!

೨೩

ನಾರಾಯಣನೆಂಬವನ ಕಾಣೆ, ಗೀರಾಯಣನೆಂಬವನ ಕಾಣೆ !
ಬೊಮ್ಮನೆಂಬವನ ಕಾಣೆ, ಗಿಮ್ಮನೆಂಬವನ ಕಾಣೆ !
ವಿಷವಟ್ಟೆ ಸುಡುವಲ್ಲಿ ವೀರಭದ್ರ ಕೊಲುವಲ್ಲಿ
ಕೂಡಲ ಸಂಗಯ್ಯಂಗೆ ಶರಣೆಂದು
ಮೊಱೆಯಿಟ್ಟರೆಲ್ಲರೂ. ॥ ೩೪೮ ॥

೨೪

ಅಮೃತವ ಕಡೆವಲ್ಲಿ, ವಿಷವಟ್ಟೆ ಸುಡುವಲ್ಲಿ,
ದೇವರೆಂಬವರೆತ್ತ ಹೋದರೇನಿಂ ಭೋ ?
ಅಂದೊಮ್ಮೆ ಓಡಿಹೋಗಿ ಆತನ ಮೊಱೆಯ ಹೋಗುವಂದು
ದೇವರೆಂಬವರೆತ್ತ ಹೋದರೇನಿಂ ಭೋ ?
ಕೂಡಲ ಸಂಗಯ್ಯ ದೇವರಿಗೆ ದೇವನು;
ನೀವೆಲ್ಲಾ ಆಳೆಂಬುವನಱಿಯಿಂ ಭೋ ! ॥ ೩೪೯ ॥

೨೫

ವಿಷ್ಣು ಬಲ್ಲಿದನೆಂಬೆನೆ ?
ದಶಾವತಾರದಲ್ಲಿ ಭಂಗವಟ್ಟುದಕ್ಕೆ ಕಡೆಯಿಲ್ಲ !
ಬ್ರಹ್ಮ ಬಲ್ಲಿದನೆಂಬೆನೆ ?
ಶಿರಹೋಗಿ ನಾನಾವಿಧಿಯಾದ !

ವೇದ ಬಲ್ಲಿತ್ತೆಂಬೆನೆ ? ನಾನಾಮುಖದಲ್ಲಿ ಸ್ತುತಿಯಿಸಿತ್ತಲ್ಲದೆ
ಲಿಂಗದ ನಿಲುಕಡೆಯ ಕಾಣದು !
ಶಾಸ್ತ್ರ ಬಲ್ಲಿತ್ತೆಂಬೆನೆ ? ಶಬ್ದಕ್ರಿ !
ಪುರಾಣ ಬಲ್ಲಿತ್ತೆಂಬೆನೆ ? ಪೂರ್ವಕ್ರಿ !
ಆಗಮ ಬಲ್ಲಿತ್ತೆಂಬೆನೆ ? ವಾಯುಹೊಂದಿತ್ತು !
ಇದು ಕಾರಣ, ಕೂಡಲ ಸಂಗಯ್ಯನೇ ನಿತ್ಯ :
ಉಳಿದ ದೈವವೆಲ್ಲಾ ಅನಿತ್ಯ, ಕಾಣಿ, ಭೋ ! || ೫೫೦ ||

೨೬

ಮಱೆಯಲಾಗದು ಹರಿಯ, ಮಱೆಯಲಾಗದು ಬ್ರಹ್ಮನ !
ಮಱೆಯಲಾಗದು ತೆತ್ತೀಸಕೋಟಿ ದೇವರ್ಕಳ !
ನಮ್ಮ ಕೂಡಲ ಸಂಗಮದೇವರ ಮಱೆಯಲಿಹುದು ! || ೫೫೧ ||

೨೭

ಬಿದಿರೆಲೆಯ ಮೆಲಿದರೆ ಮೆಲಿದಂತಲ್ಲದೆ,
ರಸವನು ಪಡೆಯಲು ಬಾರದು !
ಮಳಲ ಹೊಸೆದರೆ ಹೊಸೆದಂತಲ್ಲದೆ,
ಸರನಿಯ ಪಡೆಯಲು ಬಾರದು !
ನೀರ ಕಡೆದರೆ ಕಡೆದಂತಲ್ಲದೆ,
ಬೆಣ್ಣೆಯ ಪಡೆಯಲು ಬಾರದು !
ನಮ್ಮ ಕೂಡಲ ಸಂಗಮದೇವನಲ್ಲದೆ,
ಅನ್ಯದೈವಕ್ಕೆಱಗಿದರೆ
ಹೊಳ್ಳುಕುಟ್ಟಿ ಕೈ ಹೊಟ್ಟೆಯಾದಂತಾಯಿತ್ತಯ್ಯಾ ! || ೫೫೨ ||

೨೮

ಆಗಳೂ ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪವು,
ಕೆಲವು ದೈವಂಗಳು;
ಹೋಗೆಂದರೆ ಹೋಗವು ಕೆಲವು ದೈವಂಗಳು;
ನಾಯಿಂದಲೂ ಕರಕಷ್ಟ, ಕೆಲವು ದೈವಂಗಳು.

ಲೋಗರ ಬೇಡಿಕೊಂಡುಂಬ ದೈವಂಗಳು
ತಾವೇನ ಕೊಡುವುವು, ಕೂಡಲ ಸಂಗಮದೇವಾ ? || ೫೫೩ ||

೨೯

ಗಾಡಿಗ ಡಿಂಗು ಗಂಗೆ ಚಿಕ್ಕ ಮುಟ್ಟಿಗೆ ಹಸುರಂಬಲಿ
ಮುಟ್ಟಿಗೆ ಹುರಿಬುತ್ತಿಯ ಬೇಡಿ,
ಮನುಷ್ಯರ ಪಿಡಿದು, ಪೀಡಿಸಿ ತಮ್ಮ ಬಸುರ್ಗೆ ಕಾಣದೆ,
ಈಡಾಡಿದ ಕೂಳಂಬಲಿಯನಾಯ್ದು ಕುಱುಕುವ
ಹೇಸಿ ದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ, ಎಲವೋ,
ಕೂಡಲ ಸಂಗಮದೇವರ ನೆಱೆ ನಂಬುವುದೆಲವೋ ! || ೫೫೪ ||

೩೦

ಹಾಳುಮೊರಡಿಗಳಲ್ಲಿ, ಊರ ದಾರಿಗಳಲ್ಲಿ,
ಕೆಱೆ ಬಾವಿ ಹೂಗಿಡುಮರಂಗಳಲ್ಲಿ,
ಗ್ರಾಮಮಧ್ಯಗಳಲ್ಲಿ, ಚೌಪಥಪಟ್ಟಣಪ್ರದೇಶದಲ್ಲಿ,
ಹಿರಿಯಾಲದ ಮರದಲ್ಲಿ ಮನೆಯ ಮಾಡಿ,
ಕಱೆವೆಮ್ಮೆಯ, ಹಸುಗೂಸು ಬಸುಱ ಬಾಣತಿ
ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ, ತಿರಿದುಂಬ
ಮಾರಯ್ಯ ಬೀರಯ್ಯ ಕೇಚರಗಾವಿಲ ಅಂತರ ಬೆಂತರ
ಕಾಳಯ್ಯ ಮಾರಯ್ಯ ದೂಳಯ್ಯ ಕೇತಯ್ಯಗಳೆಂಬ
ನೂಱುಮಡಕೆಗೆ
ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ ?
|| ೫೫೫ ||

೩೧

ಅರಗು ತಿಂದು ಕರಗುವ ದೈವವ,
ಉರಿಯ ಕಂಡರೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ ?
ಅವಸರ ಬಂದರೆ ಮಾಱುವ ದೈವವನೆಂತು ಸರಿಯೆಂಬೆನಯ್ಯಾ ?

ಅಂಜಿಕೆಯಾದರೆ ಹೊಳುವ ದೈವವನೆಂತು ಸರಿಯೆಂಬೆನಯ್ಯಾ ?
ಸಹಜಭಾವ ನಿಜೈಕ್ಯ ಕೂಡಲ ಸಂಗಮದೇವನೊಬ್ಬನೇ ದೇವ.
|| ೫೫೬ ||

೩೨

ಮಾರಿಕವ್ವೆಯ ನೋಂತು ಕೊರಳಲ್ಲಿ ಕಟ್ಟಿಕೊಂಬರು :
ಸಾಲಬಟ್ಟರೆ ಮಾಱುಕೊಂಬರಯ್ಯಾ !
ಸಾಲಬಟ್ಟರೆ ಅವಱನೊತ್ತೆಯನಿಟ್ಟುಕೊಂಡುಂಬರಯ್ಯಾ !
ಮಾಱುವೋಗನೊತ್ತೆವೋಗ ನಮ್ಮ ಕೂಡಲ ಸಂಗಮದೇವ. ||೫೫೭||

೩೩

ಉಣಲುಡಲು ಮಾರಿಯಲ್ಲದೆ ಕೊಲಲು ಕಾಯಲು ಮಾರಿಯೆ ?
ತನ್ನ ಮಗನ ಜವನೊಯ್ದಲ್ಲಿ ಅದೆತ್ತ ಹೋದಳಾ ಮಾರಿಕವ್ವೆ ?
ಈವಕಾವರೆ ನಮ್ಮ ಕೂಡಲ ಸಂಗಯ್ಯನಲ್ಲದೆ ಮತ್ತೊಂದು ದೈವವಿಲ್ಲಾ
|| ೫೫೮ ||

೩೪

ಮೊಱನ ಗೋಟಿಗೆ ಬರ್ಪ ಕಿಱುಕುಳ ದೈವಕ್ಕೆ
ಕುಱಿಯನಿಕ್ಕಿಹೆವೆಂದು ನಲಿನಲಿದಾಡುವರು :
ಕುಱಿ ಸತ್ತು ಕಾವುದೆ ಹರವುಳಿದವರ ?
ಕುಱಿ ಬೇಡ, ಮಱಿ ಬೇಡ :
ಬಱಿಯ ಪತ್ರೆಯ ತಂದು
ಮಱೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ. ||೫೫೯||

೩೫

ಬನ್ನಿರೆ ಅಕ್ಕಗಳು, ಹೋಗಿರೆ ಆಲದ ಮರಕ್ಕೆ !
ಕಚ್ಚುವುವೆ ನಿಮ್ಮ ಚಿಪ್ಪಿನ ಹಲ್ಲುಗಳು ?
ಚುಚ್ಚಿಸುವುವೆ ನಿಮ್ಮ ಬಚ್ಚಣೆಯ ರೂಹುಗಳು ?
ನಮ್ಮ ಕೂಡಲ ಸಂಗಮದೇವನಲ್ಲದೆ
ಪರದೈವಂಗಳು ಮನಕ್ಕೆ ಬಂದುವೆ,
ಬಿಕ್ಕನೆ ಬಿರಿವ ದೈವಂಗಳು ?' || ೫೬೦ ||

೩೬

ಮಡಕೆ ದೈವ, ಮೊಱ ದೈವ, ಬೀದಿಯ ಕಲ್ಲು ದೈವ,
ಹಣಿಗೆ ದೈವ, ಬಿಲ್ಲ ನಾರಿ ದೈವ, ಕಾಣಿರೋ,
ಕೊಳಗ ದೈವ, ಗಿಣ್ಣಿಲು ದೈವ, ಕಾಣಿರೋ !
ದೈವ, ದೈವವೆಂದು ಕಾಲಿಡಲಿಂಬಿಲ್ಲಾ !!
ದೈವನೊಬ್ಬನೆ ಕೂಡಲ ಸಂಗಮದೇವ. || ೫೬೧ ||

೩೭

ರಿಣ ತಪ್ಪಿದ ಹೆಂಡಿರಲ್ಲಿ, ಗುಣ ತಪ್ಪಿದ 'ನಂಟರಲ್ಲಿ,
ಜೀವವಿಲ್ಲದ ದೇಹದಲ್ಲಿ ಫಲವೇನೊ ?
ಆಳ್ದನೊಲ್ಲದ ಆಳಿನಲ್ಲಿ, ಸಿರಿ ತೊಲಗಿದ ಅರಸಿನಲ್ಲಿ,
ವರವಿಲ್ಲದ ದೈವದಲ್ಲಿ ಫಲವೇನೊ ?
ಕಳಿದ ಹೂವಿನಲ್ಲಿ ಕಂಪ, ಸುಳಿದ ಸೂಳೆಯಲ್ಲಿ ಹಂಪ,
ಕೊಳಚಿಯ ನೀರಿನಲ್ಲಿ ಗುಂಪನಱಸುವಿರಿ, ಮರುಳೇ—
ಪರಗುರು ವಿಶ್ವಕ್ಕೆಲ್ಲ ಗಿರಿಜಾಮನೋವಲ್ಲಭ
ಪರಮ ಕಾರಣಿಕ ನಮ್ಮ ಕೂಡಲ ಸಂಗಮದೇವ. || ೫೬೨ ||

೩೮

ಲಿಂಗಶಿವಾಲಯದ ಮುಂದೆ ಸಿಂಹ ಶೂದ್ರಿಕನಿಲ್ಲದಿಲ್ಲ;
ನಂದಿಕೇಶ್ವರ ಭೃಂಗಿನಾಟ್ಯ ನಮ್ಮ ಲಿಂಗನ ಮುಂದೆ;
ಇದಕ್ಕೆ ದಿಷ್ಟ, ದೀವಿಗೆ ನಮ್ಮ ಲಿಂಗನ ಮುಂದೆ !
ಅನ್ಯದೈವವೆಂಬುದ ತೂಱಿಯೂ ಕಾಣಬಾರದು :
ನೊಸಲ ಕಣ್ಣಭವನೊಬ್ಬನೆ ನಮ್ಮ ಕೂಡಲ ಸಂಗಮದೇವ.
|| ೫೬೩ ||

೩೯

ಗುಡಿಯೊಳಗಿರ್ದು ಗುಡಿಯ ನೇಣ ಕೊಯಿದರೆ
ಗುಡಿಯು ದಡಿ ಬಿದ್ದು ಹಲ್ಲು ಹೋಹುದು, ನೋಡಾ !
ಪೊಡವಿಗೀಶ್ವರನ ಗರ್ಭಾಸನದೊಳಗಿರ್ದು

ನುಡಿವರು ಮತ್ತೊಂದು ದೈವವುಂಟೆಂದು :
ತುಡುಗುಣಿ ನಾಯನು ಹಿಡಿತಂದು ಸಾಕಿದರೆ
ತನ್ನೊಡೆಯಂಗೆ ಬಗುಳುವಂತೆ, ಕಾಣಾ,
ಕೂಡಲ ಸಂಗಮದೇವಾ ! || ೫೬೮ ||

೪೦

ಅಸಮಾಕ್ಷ ಲಿಂಗಕ್ಕೆ ಅನ್ಯದೈವವ ಸರಿಯೆಂಬನ ಬಾಯಲ್ಲಿ
ಮಸೆದ ಕೂರಲಗನಿಕ್ಕದೆ ಮಾಣ್ಬನೆ ?
ಹುಸಿಯಾಗಿ ನುಡಿದವನ ನಾಯಾಗಿ ಬಗುಳಿಸನೆ ?
ಹಿರಿಯರುತ್ತಮರೆನ್ನದವರ ಕುದುರೆಯಾಗಿ ಕಟ್ಟಿಸನೆ ?
ಗುರುಲಘುವೆಂಬವರ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ ?
ಪರಸ್ತ್ರೀಗಳುಪಿದವರ ಗಾಣದಲ್ಲಿಕ್ಕಿ ಹಿಳಿಯನೆ ?
ಪರಧನಕ್ಕಳಿಪಿದವರ ಹಿಡಿಕಂಡಗೊಯ್ಯನೆ ?
ಕೂಡಲ ಸಂಗಮದೇವಾ, ನಿಮ್ಮ ಹೇಳಿದ ಹೇಳಿಕೆಯಿಂದ
ಪಿಂಬೇರ ವೈಲಿಗೆಮೇಳವಾಡುತ್ತಿದ್ದ, ಕಾಣಾ, ತ್ರೈಜಗದೊಳಗ !
|| ೫೬೯ ||

೪೧

ಶಿವನಾಯ ವಿಷ್ಣುವಲ್ಲ, ವಿಷ್ಣುವಾಯ ಶಿವನಲ್ಲಾ, ನುಡಿಯದಿರಿಂ ಭೋ !
ನಾರಾಯಣ ಹರನಲ್ಲ : ನುಡಿಯದಿರಿಂ ಭೋ !
ಶಿವನು ವಿಷ್ಣುವಲ್ಲ : ನುಡಿಯದಿರಿಂ ಭೋ !!
ನಮ್ಮ ಕೂಡಲ ಸಂಗಮದೇವನನಱಿಯದ ಮೂನೆಗಾಱರೆಲ್ಲಾ
ನುಡಿಯದಿರಿಂ ಭೋ !!! || ೫೭೦ ||

೪೨

ಅವಲಕ್ಷಣ ನಾಯನುಡಿಯ ಸಡಗರ
ಡೊಂಬೆಗೆ ಮೃತ್ಯುವಿನ ನುಡಿಗೊಳಗಾಯಿತ್ತು !
ಬೇಡವೋ, ಪರವಾದೀ, ಗಳಹದಿರು;
ಬೇಡವೋ, ದೂಷಕಾ, ಬಗುಳದಿರು !

ಭಕ್ತಿಗೆಯೂ ಬೇಟಕ್ಕೆಯೂ ಜಾತಿಸೂತಕವುಂಟೆ ?
ಪರುಷ ಮುಟ್ಟಲು ಕಬ್ಬುನ ಹೊನ್ನಾಯಿತ್ತು, ಕಾಣಾ.
ನಮ್ಮ ಕೂಡಲ ಸಂಗನ ಶರಣರನವರಿವರೆಂದರೆ
ಕುಂಭಿಯ ಪಾತಕ ನಾಯಕನರಕ ತಪ್ಪದು, ಕಾಣಾ. || ೫೬೭ ||

೪೩

ವಿಷ್ಣುವ ಪೂಜಿಸಿ ಮುಡುಹ ಸುಡಿಸಿಕೊಂಬುದ ಕಂಡೆ.
ಜಿನ್ನನ ಪೂಜಿಸಿ ಬತ್ತಲೆಯಿಪ್ಪುದ ಕಂಡೆ;
ಮೈಲಾರನ ಪೂಜಿಸಿ ನಾಯಾಗಿ ಬಗುಳುವುದ ಕಂಡೆ,
ನಮ್ಮ ಕೂಡಲ ಸಂಗನ ಶರಣರ ಪೂಜಿಸಿ
ದೇವಾ ಭಕ್ತರೆನಿಸಿಕೊಂಬುದ ಕಂಡೆ. || ೫೬೮ ||

೪೪

ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಗೌತಮುಮುನಿಗೆ ಗೋವೇಧೆಯಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಬಲಿಗೆ ಬಂಧನವಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಕರ್ಣನ ಕವಚ ಹೋಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ದಕ್ಷಂಗೆ ಕುಱಿದಲೆಯಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಪರಶುರಾಮುನು ಸಮುದ್ರಕ್ಕೆ ಗುಱಿಯಾದನು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ನಾಗಾರ್ಜುನನ ತಲೆ ಹೋಯಿತ್ತು.
ದೇವಾ ಭಕ್ತನೆಂದು ನಂಬಿದ ಕಾರಣ
ನಮ್ಮ ಕೂಡಲ ಸಂಗನ ಶರಣರು ಕೈಲಾಸವಾಸಿಗಳಾದರು. || ೫೬೯ ||

೪೫

ಆದಿ ಪುರಾಣ ಅಸುರರಿಗೆ ಮಾರಿ,
ವೇದಪುರಾಣ ಹೋತಿಂಗೆ ಮಾರಿ.
ರಾಮಪುರಾಣ ರಕ್ಕಸರಿಗೆ ಮಾರಿ,
ಭಾರತ ಪುರಾಣ ಗೋತ್ರಕ್ಕೆ ಮಾರಿ.
ಎಲ್ಲಾ ಪುರಾಣ ಕರ್ಮಕ್ಕೆ ಮೊದಲು :
ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲಾ,
ಕೂಡಲ ಸಂಗಮದೇವಾ. || ೫೭೦ ||

೪೬

ನಿಮ್ಮ ವಚನ ಎನ್ನ ಪುಣ್ಯವೆಂಬುದು ಹುಸಿಯಾಯಿತ್ತು, ನೋಡಾ.
ಶಾಸ್ತ್ರದ ವಚನ ಹೋತಿಂಗೆ ಮಾರಿ :
ಎಂತು ನಂಬುವೆನಯ್ಯಾ ?
' ನಾನು ಕೊಲ್ಲೆ, ನೀಣು ಕೊಂದಿತ್ತೆ'ಂಬ ಸೂನೆಗಾರನೇನೆಂಬೆ,
ಕೂಡಲ ಸಂಗಮದೇವಾ ? || ೫೭೧ ||

೪೭

ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು
ಎಲೆ ಹೋತೇ, ಅಳು, ಕಂಡಾ !
ವೇದವನೋದಿದವರ ಮುಂದೆ ಅಳು, ಕಂಡಾ !
ಶಾಸ್ತ್ರವ ಕೇಳಿದವರ ಮುಂದೆ ಅಳು, ಕಂಡಾ !!
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವ || ೫೭೨||

೪೮

ದಕ್ಷಯಾಗವ ನಡೆಸಲೆಂದು ಅಜಮುಖ್ಯರಾದ ಸುರರೆಲ್ಲಾ
ನೆರದು ಬಂದ ಬಾಯ ನೋಡಾ,
ಬಾಯ ತಪ್ಪಿಸಿ ಉಣಬಂದ ದೈವದ ಬೆಂದ ಬಾಯ ನೋಡಾ !
ಉಣ್ಣದೆ, ಉಡದೆ, ಹೊಗೆಯ ಕೈಯಲಿ ಸತ್ತ ಅಣ್ಣಗಳ ಕೇಡ ನೋಡಾ,
ಕೂಡಲ ಸಂಗಮದೇವಾ ! || ೫೭೩ ||

೪೯

**ಏನಯ್ಯಾ, ವಿಪ್ರರು ನುಡಿದಂತೆ ನಡೆಯರು : ಇದೆಂತಯ್ಯಾ ?**
**ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ !**
**ಕೂಡಲ ಸಂಗಮದೇವಾ, ಮೊ[illegible]ರ ಬಸುರ**
**ವಿಪ್ರರು ಹುಟ್ಟಿ ಗೋಮಾಂಸವ ತಿಂಬವರೆಂಬುದಕ್ಕೆ ಇದೆ ದೃಷ್ಟ !**
|| ೩೭೪ ||

೫೦

**ಹೊಲೆಯೊಳಗೆ ಹುಟ್ಟಿ ಕುಲವನರಸುವ,**
**ಎಲವೋ, ಮಾತಂಗಿಯ ಮಗ ನೀನು !**
**ಸತ್ತುದನೆಳೆವನೆತ್ತಣ ಹೊಲೆಯ ?**
**ಹೊತ್ತು ತಂದು ನೀವು ಕೊಲುವಿರಿ.**
**ಶಾಸ್ತ್ರವೆಂಬುದು ಹೋತಿಂಗೆ ಮಾರಿ,**
**ವೇದವೆಂಬುದು ನಿಮಗೆ ತಿಳಿಯದು.**
**ನಮ್ಮ ಕೂಡಲ ಸಂಗನ ಶರಣರು**
**ಕರ್ಮವಿರಹಿತರು, ಶರಣಸನ್ನಿಹಿತರು, ಅನುಪಮಚರಿತ್ರರು :**
**ಅವರಿಗೆ ತೋಱಲು ಪ್ರತಿಯಿಲ್ಲವು !** || ೩೭೫ ||

೫೧

**ಇಟ್ಟೆಯ ಹಣ್ಣ ನರಿ ತಿಂಬ ಸೃಷ್ಟಿ ತಿರುಗಿತೆಂಬಂತೆ**
**ಮಟ್ಟೆಯನಿಟ್ಟ ದ್ವಿಜರ ಮಾತೇಕೆ ?**
**ಹಗಲುಗಾಣದ ಗೂಗೆ ಇರುಳಾಯಿತ್ತೆಂದರೆ**
**ಜಗಕ್ಕೆ ಇರುಳಪ್ಪುದೆ, ಮರುಳೆ ||**
**ಹೋಮದ ನೆವದಲ್ಲಿ ಹೋತನ ತಿಂಬ**
**ಅನಾಮಿಕರೊಡನಾಡಿ ಗೆಲುವುದೇನು,**
**ಕೂಡಲ ಸಂಗಮದೇವಾ ?** || ೩೭೬ ||

೫೨

ಮೀಂಬುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿದ್ದು
ಮೂಗ ಹಿಡಿದು ಧ್ಯಾನವ ಮಾಡುವರಯ್ಯಾ.
ಬಿಟ್ಟ ಮಂಡೆವೆರೆಸಿ ಬಾಯ ಮಿಡುಕಿಸುತ
ಕಣ್ಣುಮುಚ್ಚಿ ಬೆರಳನೆಣಿಸುವರಯ್ಯಾ—
ನಿಮ್ಮ ಕೈಯಲ್ಲಿ ಕಟ್ಟಿದ ದರ್ಭೆಯ ಹುಲ್ಲು
ಕೂಡಲ ಸಂಗನನಱಿಯದೆ ಮೊಱೆಯಿಡುವಂತೆ ! ॥ ೫೭೭ ॥

೫೩

ಮಾಣದೆ ಅರಳೆಯ ತಿಟ್ಟನೆ ತಿರುಗುವ ಗಾಣದೆತ್ತಿನಂತೆ
ಸ್ನಾನ[illegible] ಮುಂ[illegible]ಗಾ[illegible]ಯದು.
ನಿ[illegible]ವೆಲ್ಲಾ [illegible] :
[illegible]
[illegible] ಪಾತ್ರ[illegible]ವ
[illegible] ರ [illegible] ಸಂಗಮದೇವ. ॥ ೫೭೮ ॥

೫೪

ನೀರ ಕಂಡಲ್ಲಿ ಮುಳುಗುವರಯ್ಯಾ,
ಮರನ ಕಂಡಲ್ಲಿ ಸುತ್ತುವರಯ್ಯಾ !
ಬತ್ತುವ ಜಲವನೊಣಗುವ ಮರನ
ನಚ್ಚಿದವರು ನಿಮ್ಮನೆತ್ತ ಬಲ್ಲರು
ಕೂಡಲ ಸಂಗಮದೇವಾ ? ॥ ೫೭೯ ॥

೫೫

ಕಣ್ಣ ಮುಚ್ಚಿ ಕನ್ನಡಿಯ ತೋಱುವಂತೆ,
[illegible] ಲಿನ [illegible] ಸಾಲಿಡೆ
ಬೆರಳನೆಣಿಸಿ ಪರಮಾರ್ಥವ ಪಡೆವರೆ ಚೋದ್ಯವಲ್ಲವೆ ? ಹೇಳಾ.

ಮೂಗ ಮುಚ್ಚಿ ಮುಕ್ತಿಯ ಬಯಸುವ
ನಾಚಿಕೆಯಿಲ್ಲದವರ ನಾನೇನೆಂಬೆ,
ಕೂಡಲ ಸಂಗಮದೇವಾ ? || ೫೮೦ ||

೫೬

ಬ್ರಹ್ಮಸಭೆ ತೆರೆದಲ್ಲಿ ಬ್ರಹ್ಮವಿತ್ತುಗಳು
ಬ್ರಹ್ಮತತ್ತ್ವವಡೆದು ತಮ್ಮ ವಚನಬ್ರಹ್ಮರೆನಿಸಿಕೊಂಡು
ನೆಮ್ಮವರು ವಿಷ್ಣುವನು—
ತಮ್ಮದೈವವ ಬಿಡುವುದಾವುದುಚಿತ !
ವಿಷ್ಣು ಶಿವಭಕ್ತನಾಗಿ ನಿಷ್ಠೆಯಿಂದ ಕಣ್ಣನಿತ್ತು
ಹಡೆದನು ಶಿವಭಕ್ತಿಯಿಂದ !
ಕಷ್ಟಜಾತಿ ಜೀವಿಗಳಿಗೆ ಮುಟ್ಟೆಯೆಂತು ಬಂದತ್ತೊ !
ಮುಟ್ಟರೊಂದುವನು ಮೂವಿಧಿಬಟ್ಟರೂ !
'ಹುಸಿವನೆ ಹೊಲೆಯ' ನೆಂದು ವಚನವುಂಟು ಲೋಕದಲ್ಲಿ :
ಹುಸಿದಜನ ಸಿರ ಹೋಯಿತ್ತಾದಿಯಲ್ಲಿ !
ಎಸವೋದ ಕಿಱು ಪಶುವನುಸುರಲೀಯದೆ
ವಿಧಾನಿಸಿ ತಿಂಬ ಜನ್ನ ಅದಾವ ಫಲವೊ :
ದಕ್ಷ ಯಾಗವ ಮಾಡಿ ನಿಕ್ಷೇತ್ರನೆರೆದುದಕಟಕಟಾ,
ಕೇಳಿಯೂ ಏಕೆ ಮಾಣರೊ ?
ಮಮಕರ್ತ ಕೂಡಲ ಸಂಗನ ಶರಣರು ಅಕ್ಷಯರಧಿಕರು :
ವಿಪ್ರರು ಕೀಳು ಜಗವೆಲ್ಲಱಿಯಲು ! || ೫೮೧ ||

೫೭

ಕುಲದಲ್ಲಿ ಹಾರುವನು ಬ್ರಹ್ಮೇತಿಗೆ ಸಾರುವನು :
ಆರೊ ಮಾಡಿದ ಪಾಪಕ್ಕೆ ತಾನೆ ಕೈಯಾಸುವನು !
ಸರಿಯೆ ದೇವಭಕ್ತರಿಗಿವನು ?
ಸರಿಯೆ ಲಿಂಗಭಕ್ತರಿಗಿವನು ?

ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹನೆಂದು
ಹೊನ್ನ ಕಪಿಲೆಯ ರಾವಣಶಾಖದುಚ್ಚಿಷ್ಟದ ಹಾಲಿನಿಂದ
ಗೊಳನಟ್ಟುಂಬವರನೇನೆಂಬೆ,
ಕೂಡಲ ಸಂಗಮದೇವಾ ? || ೫೮೭ ||

೫೮

ನರಜನ್ಮದಲ್ಲಿ ಹುಟ್ಟಿ ಲಿಂಗಮುಖವನಱಿಯದೆ
ಉಪಮದ ಸೊಕ್ಕಿ ತಲೆಗೇಱಿತ್ತೆ, ಅಯ್ಯಾ !
' ಜೀವೋ ಜೀವೇನ ಭಕ್ಷ್ಯತೇ ' ಕರ್ಮಕರ್ಮದಲ್ಲಿಪ್ಪೆಯಯ್ಯಾ !
ಅಂದೊಮ್ಮೆ ದಕ್ಷನು ಹೋತನ ಕೊಂದಲ್ಲಿ—
ಘೋಳಿಡಲಿ ಘೋಳಿಡಲಿಕೆ ತಂದಿಕ್ಕೆ ಅಕ್ಕಿತ್ತೆ !
ನಿಮ್ಮ ವೇದಶಾಸ್ತ್ರಂಗಳ ಮೂರುತಿಗೊಂಡಲ್ಲಿ
ಚತುರ್ವೇದಿಗಳಿಗೊಮ್ಮೆ ಅಕ್ಕಿತ್ತೆ ಅಯ್ಯಾ !
ನಮ್ಮ ಕೂಡಲ ಸಂಗನನಱಿಯದ ಕಾರಣ
ನಾಯಕನರಕದಲ್ಲಿಕ್ಕಿತ್ತೆ ಅಯ್ಯಾ ! || ೫೮೮ ||

೫೯

ಕಿಚ್ಚು ದೈವವೆಂದು ಹವಿಯನಿಕ್ಕುವ
ಹಾರುವನ ಮನೆಯಲ್ಲಿ ಕಿಚ್ಚೆದ್ದು ಸುಡುವಾಗ,
ಬಚ್ಚಲ ನೀರ ಬೀದಿಯ ದೂಳ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯಾ !
ಕೂಡಲ ಸಂಗಮದೇವಾ,
ವಂದನೆಯ ಮಱೆದು ನಿಂದಿಸುತಿರ್ದರಯ್ಯಾ ! || ೫೮೯ ||

೬೦

ವೇದವನೋದಿದ ವಿಪ್ರರು ಹೊಸಲಲ್ಲಿ ಹೋದ ಕೇಡ ನೋಡಿರೇ !
' ಭರ್ಗೋ ದೇವಸ್ಯ ಧೀಮಹಿ ' ಎಂಬರು :
ಒಬ್ಬರಿಗಾಗಿ ವಿಚಾರವಿಲ್ಲ, ನೋಡಿರೆ,
ಕೂಡಲ ಸಂಗಮದೇವಾ. || ೫೯೦ ||

೬೧

ಎನಿಸನೋದಿದರೇನು ? ಎನಿಸ ಕೇಳಿದರೇನು ?
ಚತುರ್ವೇದಪಾಠ ತೀವ್ರವಾದರೇನು?
ಲಿಂಗಾರ್ಚನೆಹೀನನಾದರೆ, ಶಿವಶಿವಾ,
ಬ್ರಾಹ್ಮಣನೆಂಬೆನೆ ? ಎನಲಾಗದು.
ಜನ್ಮನಾ ಜಾಯತೇ ಶೂದ್ರಃ ॥ ಕರ್ಮಣಾ ದ್ವಿಜ ಉಚ್ಯತೇ
ಶ್ರುತೇನ ಶ್ರೋತ್ರಿಯಶ್ಚೈವ ॥ ಬ್ರಹ್ಮಂ ಚರತಿ ಬ್ರಾಹ್ಮಣಃ
ಎಂದುದಾಗಿ, ಬ್ರಹನಾಸ್ತಿ ಶ್ವಪಚರಥಮರೆಂದುದಾಗಿ,
ಇದು ಕಾರಣ, ಕೂಡಲ ಸಂಗಮದೇವಾ
'ವೇದಭಾರಭರಾಕ್ರಾಂತಾಃ ಬ್ರಾಹ್ಮಣಾ ಗರ್ದಭಾಃ' ಎಂಬೆನು.
|| ೫೮೬ ||

೬೨

ನಿಮ್ಮನರಿಯದ ಕಾರಣ ಕೈಯಲ್ಲಿ ಹುಲ್ಲು !
ನಿಮಗೆರಗದ ಕಾರಣ ಕೊರಳಲ್ಲಿ ನೇಣು !!
ಹಿಂಡಲೇಕೋ ? ತೊಳೆಯಲೇಕೋ ?
ಮುಳುಗಿ ಮುಳುಗಿ ಮೂಗ ಹಿಡಿಯಲೇಕೋ ?
ಕೂಡಲ ಸಂಗನ ಶರಣರಲ್ಲಿ
ಡೋಹರ ಕಕ್ಕಯ್ಯನಾವ ತೊರೆಯಲ್ಲಿ ಮಿಂದ ? || ೫೮೭ ||

೬೩

ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ,
ಮಂಡೋದರಿ ಕಪ್ಪೆಯ ಮಗಳು !
ಕುಲವನರಸದಿರಿಂ ಭೋ, ಕುಲದಿಂದ ಮುನ್ನೇನಾದಿರಿಂ ಭೋ ?
ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ,
ಕಶ್ಯಪ ಕಮ್ಮಾರ, ಕೌಂಡಿಲ್ಯನೆಂಬ ಋಷಿ
ಮೂರು ಭುವನವರಿಯೆ ನಾವಿದ ಕಾಣಿಂ ಭೋ !
ನಮ್ಮ ಕೂಡಲ ಸಂಗನ ವಚನವಿಂತೆಂದುದು :
'ಶ್ವಪಚೋಪಿ.... ' ಯಾದರೇನು, ಶಿವಭಕ್ತನೇ ಕುಲಜನು. ||೫೮೮||

೬೪

ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ.
ಜಲ-ಬಿಂದುವಿನ ವ್ಯವಹಾರವೊಂದೇ :
ಆಶೆಯಾಮಿಷರೋಷಹರುಷವಿಷಯಾದಿಗಳೆಲ್ಲಾ ಒಂದೆ.
ಏನನೋದಿ ಏನ ಕೇಳಿ, ಏನು ಫಲ ?
ಕುಲಜನೆಂಬುದಕ್ಕಾವುದು ದೃಷ್ಟ ?
ಸಪ್ತಧಾತು ಸಮಂ ಪಿಂಡಂ । ಸಮಯೋನಿ ಸಮುದ್ಭವಂ
ಆತ್ಮಜೀವಸಮಾಯುಕ್ತ । ವರ್ಣಾನಾಂ ಕಿಂ ಪ್ರಯೋಜನಂ
ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ;
ಹಾಸನಿಕ್ಕಿ ಸಾಲಿಗನಾದ; ವೇದವನೋದಿ ಹಾರುವನಾದ !
ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ ?
ಇದು ಕಾರಣ, ಕೂಡಲ ಸಂಗಮದೇವಾ,
ಅಂಗಸ್ಥಲವನರಿದವನೆ ಕುಲಜನು. ॥ ೫೮೯ ॥

೬೫

ಕೊಲುವನೇ ಮಾದಿಗ, ಹೊಲಸ ತಿಂಬವನೇ ಹೊಲೆಯ !
ಕುಲವೇನೋ, ಅವಂದಿರ ಕುಲವೇನೊ ?
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲ ಸಂಗನ ಶರಣರೇ ಕುಲಜರು. ॥ ೫೯೦ ॥

೬೬

ಹಾರುವನ ಭಕ್ತಿ ಓಡಿನೊಳಗಗೆಯ ಹೋಳಿಗೆಯಂತೆ :
ಕೆಳಯಿಂಕೆ ಬೇಯೂದದು, ಮೇಲೆ ಫಲವಾಗದು !
ಪ್ರಾಣಲಿಂಗದ ಪ್ರಸಾದವ ಮುಂದಿಟ್ಟುಕೊಂಡು
‘ ಪ್ರಾಣಾಯ ಸ್ವಾಹಾ, ಅಪಾನಾಯ ಸ್ವಾಹಾ, ವ್ಯಾನಾಯ ಸ್ವಾಹಾ
ಉದಾನಾಯ ಸ್ವಾಹಾ, ಸಮಾನಾಯ ಸ್ವಾಹಾ ’
ಎಂಬ ಕರ್ಮಿಗಳನೇನೆಂಬೆ, ಕೂಡಲ ಸಂಗಮದೇವಾ ? ॥ ೫೯೧ ॥

೬೭

‘ ನಾನು ಭಕ್ತ, ನಾನು ಪ್ರಸಾದಿ ’ ಎಂದು
ವಿಪ್ರಕರ್ಮವ ಮಾಡುವೆ, ಕರ್ಮಿ :
ಲಿಂಗದೇವನ ಮುಟ್ಟಿ ಮಜ್ಜನಕ್ಕೆಱೆವ ಕೈಯಲು
ವಿಪ್ರನ ಕಾಲ ತೊಳೆವರೆ
ಲಿಂಗೋದಕ ಹೃದಯದಲ್ಲಿ,
ವಿಪ್ರನ ಕಾಲತೊಳೆದ ನೀರು ಮಂಡೆಯ ಮೇಲೆ !
ಶ್ರೋತ್ರೋತ್ಕಟದುರಾಚಾರೀ । ಯಜ್ಞಕೂಪಸಘಾತಕಃ
ಉದ್ರಿದ್ಯೈಕವಿಧಿಃ ಶಾಂತೇ । ವಿಪ್ರರೂಪೇಣ ರಾಕ್ಷಸಃ
ಇದು ಕಾರಣ, ಕೂಡಲ ಸಂಗಮದೇವಾ,
ಇಂತಪ್ಪ ದುರಾಚಾರಿಗಳ ಮುಖವ ನೋಡಲಾಗದು. ॥ ೫೯೨ ॥

೬೮

ಹೊನ್ನ ನೇಗಿಲಲುತ್ತು ಎಕ್ಕೆಯ ಬೀಜವ ಬಿತ್ತುವರೆ ?
ಕರ್ಪುರದ ಮರನ ಕಡಿದು ಕಳ್ಳಿಗೆ ಬೇಲಿಯನಿಕ್ಕುವರೆ ?
ಶ್ರೀ ಗಂಧದ ಮರನ ಕಡಿದು ಬೇವಿಂಗೆ ಅಡೆಯನಿಕ್ಕುವರೆ ?
ನಮ್ಮ ಕೂಡಲ ಸಂಗನ ಶರಣರಿಗಲ್ಲದೆ
ಬೇಱೆ ಇಚ್ಛಾಭೋಜನವನಿಕ್ಕಿದರೆ,
ಕಿಚ್ಚಿನೊಳಗೆ ಉಚ್ಚೆಯ ಹೊಯಿದು
ಹವಿಯ ಬೇಳ್ದಂತಾಯಿತ್ತು ! ॥ ೫೯೩ ॥

೬೯

ಜಾತಿವಿಡಿದು ಸೂತಕವನಱಸುವೆ :
ಜ್ಯೋತಿವಿಡಿದು ಕತ್ತಲೆಯನಱಸುವೆ !
ಇದೇಕೊ ಮರುಳ ಮಾನವಾ ?
ಜಾತಿಯಲ್ಲಿ ಅಧಿಕನೆಂಬೆ :

ವಿಪ್ರಶತಕೋಟಿಗಳಿದ್ದಲ್ಲಿ ಫಲವೇನು ?
‘ ಭಕ್ತಶಿಖಾಮಣಿ ’ ಎಂದುದು ವಚನ.
ನಮ್ಮ ಕೂಡಲ ಸಂಗನ ಶರಣರ ಪಾದಪರುಷವ ನಂಬು,
ಕೆಡಬೇಡಾ ಮಾನವಾ. || ೫೯೪ ||

೨೦

ಹೊಲೆಯು ಮಾದಿಗ ಭಕ್ತನಾದರೆ
ಆತನ ಮನೆಯು ಸೊಣಗಂಗೆ
ಪಂಚಮಹಾವಾದ್ಯದಲ್ಲಿ ಸನ್ಮಾನನೆಯ ಮಾಡೆನೆ ?
ನೆಲನನುಗ್ಘಡಿಪೆ ‘ ಉಘೇ, ಚಾಂಗು ಭಲರೆ ’ ಎಂದು !
ಕುಲದಲಧಿಕ ಹಾರುವಂಗೆ ಸಿದ್ಧಿಗೆಯ್ಯೆಸಲೆ !
ನಿಮ್ಮ ಶರಣರ ಮಹಿಮೆ ಘನಕ್ಕೆ ಘನ !
ಎಲೆ ಕೂಡಲ ಸಂಗಮದೇವಾ, ನಿಮ್ಮ ನಂಬದವ ಹೊಲೆಯು ! || ೫೯೫ ||

೨೧

ಕುಱಿವಿಂಡು ಕಬ್ಬಿನ ಉಲಿವ ತೋಂಟವ ಹೊಕ್ಕು
ತೆಱನನಱಿಯದೆ ತನಿರಸದ,
ಹೊಱಗಣೆಲೆಯನೆ ಮೇದುವು !
ನಿಮ್ಮನಱಿವ ಮದಕರಿಯಲ್ಲದೆ
ಕುಱಿ ಬಲ್ಲುದೆ, ಕೂಡಲ ಸಂಗಮದೇವಾ ? || ೫೯೬ ||

೨೨

ಪ್ರಣವನುಚ್ಚರಿಸುವ ಅಪ್ರಮಾಣಿಕರೆಲ್ಲರೂ
ಪ್ರಣವ ಮಂತ್ರಾರ್ಥವನೋದಿ, ಮಂತ್ರಾರ್ಥವನಱಿಯರು.
‘ ಪ್ರಣವ ಓಂ ನಮಃಶಿವಾಯ, ಪ್ರಣವ ಓಂ ನಮಃಶಿವಾಯ,
ಪ್ರಣವ ಓಂ ನಮಃಶಿವಾಯ ’ ಎಂದುವು ಶ್ರುತಿಗಳೆಲ್ಲಾ;
‘ ಪ್ರಣವ ಭರ್ಗೋ ದೇವಃ ’ ಎಂದುವು ಶ್ರುತಿಗಳೆಲ್ಲಾ.
ಕೂಡಲ ಸಂಗನನಱಿಯದ ದ್ವಿಜರೆಲ್ಲಾ ಭ್ರಮಿತರು ! || ೫೯೭ ||

೭೭

ಎಮ್ಮವರು ಅಧಿಕರು, ಎಲ್ಲರಿಂದವು ಅಧಿಕರು;
ಪಾಕವ ಮಾಡುವ ಭಾಂಡ ಸೊಣಗನ ದವಗುಂಡಯ್ಯಾ !
ಕೆರಹಿನಲ್ಲಿ ಮುಚ್ಚುವುದು ಅದ ಆಗಸುವಯ್ಯಾ ?
ಕೂಡಲ ಸಂಗಮದೇವಾ, ನಿಮ್ಮ ನಿಜಶರಣರೆಂದೆಂಬುದು :
' ಭವಿ ನೋಡಿದ ಓಗರ ಲಿಂಗಾರ್ಪಿತವಾಗದೆ'ಂಬುದು || ೬೦೨ ||

೭೮

ನಿಮ್ಮ ಶರಣರ ಚಮ್ಮಾವುಗೆಗೆ ಸೃಷ್ಟಿ ಸಮಬಾರದು---
ಸರಿಯಲ್ಲಾ, ನೋಡಾ, ಕೂಡಲ ಸಂಗಮದೇವಾ,
ನಿಮ್ಮ ಶರಣರ ಚಮ್ಮಾವುಗೆಗೆ ! || ೬೦೩ ||

೭೯

ದೇವಾ, ನಿಮ್ಮ ಪೂಜಿಸಿ ಚೆನ್ನನ ಕುಲ ಚೆನ್ನಾಯಿತ್ತಯ್ಯಾ;
ದೇವಾ, ನಿಮ್ಮ ಪೂಜಿಸಿ ದಾಸನ ಕುಲ ಪೇಸಿಪಡೆಯಿತ್ತು.
ದೇವಾ, ನಿಮ್ಮಡಿಗೆರಗಿದ ಗೊಡಿವಾಳ ನಿಜಭಕ್ತ ನಿಮ್ಮಡಿಯಾದ !
ನೀನೊಲಿದ ಕುಲಕ್ಕೆ [illegible] ಕುಲಕೆ ಮೊರೆಯುಂಟೆ, ದೇವಾ ?
ಶ್ವಪಚೋಽಪಿ ಮುನಿಃ ಶ್ರೇಷ್ಠೋ || ಯಸ್ತು ಲಿಂಗಾರ್ಚನೇ ರತಃ
ಲಿಂಗಾರ್ಚನವಿಹೀನೋಽಪಿ || ಬ್ರಾಹ್ಮಣಃ ಶ್ವಪಚಾಧಮಃ
ಎಂದುದಾಗಿ, ಜಾತಿ-ವಿಜಾತಿಯಾದರೇನು ?
' ಅಜಾತ ಶರಣೆ 'ನ್ನದವನು, ಆತನೆ, ಹೊಲೆಯ !
ಕೂಡಲ ಸಂಗಮದೇವಾ. || ೬೦೪ ||

೮೦

ಚತುರ್ವೇದಿಯಾದರೇನು ? ಲಿಂಗವಿಲ್ಲದವನೇ ಹೊಲೆಯ !
ಶ್ವಪಚನಾದರೇನು ? ಲಿಂಗವಿದ್ದವನೇ ವಾರಣಾಸಿ.
ಆತನ ನುಡಿಗಡಣವೇ ಲೇಸು, ಆತ ಜಗಕ್ಕೆ ಪಾವನ;
ಆತನ ಪ್ರಸಾದವೆನಗಮೃತಸೇವನೆ !

ನ ಮೇ ಪ್ರಿಯಶ್ಚತುರ್ವೇದೀ ॥ ಮದ್ಭಕ್ತಃ ಶ್ವಪಚೋಽಪಿ ವಾ
ತಸ್ಮಾದೇವ ತತೋ ಗ್ರಾಹ್ಯಂ ॥ ಸ ಚ ಪೂಜ್ಯೋ ಯಥಾಹ್ಯಹಂ
ಕೂಡಲ ಸಂಗಮದೇವನನಱಿತು ಪೂಜಿಸಿದಾತ
ಷಡುವರುಶನಕ್ಕಧಿಕ, ಜಗಕ್ಕೆ ಪಾವನ, ನೋಡಾ ! || ೬೦೫ ||

೮೧

ಭಕ್ತಿಹೀನನ ದಾಸೋಹವ ಸದ್ಭಕ್ತರು ಸವಿಯರು :
ಬೇವಿನ ಹಣ್ಣು ಕಾಗೆಗೆ ಇನಿದಲ್ಲದೆ ಕೋಗಿಲೆಗೆ ಮೆಲಬಾರದು.
ಲಿಂಗಸಂಬಂಧವಿಲ್ಲದವರ ನುಡಿ
ಕೂಡಲ ಸಂಗನ ಶರಣರಿಗೆ ಸಮನಿಸದು. || ೬೦೬ ||

೮೩

ಬಂದು ಬಲ್ಲಹ ಬಿಡಲು ಹೊಲಗೇರಿ ಎಂಬ ಹೆಸರೊಳವೆ ? ಅಯ್ಯಾ !
ಲಿಂಗವಿದ್ದವರ ಮನೆ ಕೈಲಾಸವೆಂದು ನಂಬಬೇಕು.
ಇದಕ್ಕೆ ಪ್ರಮಾಣ :
ಚಾಂಡಾಲವಾಟಿಕಾಯಾಂ ವಾ । ಶಿವಭಕ್ತಃ ಸ್ಥಿತೋ ಯದಿ
ತಚ್ಛ್ರೇಣಿಃ ಶಿವಲೋಕಸ್ಯ । ತದ್ಗೃಹಂ ಶಿವಮಂದಿರಂ
ಲೋಕದ ಡಂಭಕರ ಮಾತು ಬೇಡಾ,
ಕೂಡಲ ಸಂಗಮನಿದ್ದುದೇ ಕೈಲಾಸ. || ೬೦೭ ||

೮೩

ಲಿಂಗವಿಲ್ಲದೆ ನಡೆವವರ, ಲಿಂಗವಿಲ್ಲದೆ ನುಡಿವವರ—
ಲಿಂಗವಿಲ್ಲದೆ ಉಗುಳು ನುಂಗಿದರೆ—
ಅಂದಂದಿಂಗೆ ಕಿಲ್ಬಿಷವಯ್ಯಾ !
ಏನೆಂಬೆ ಏನೆಂಬೆನಯ್ಯಾ ?
ಲಿಂಗವಿಲ್ಲದೆ ನಡೆವವರ ಅಂಗ ಲೌಕಿಕ : ಮುಟ್ಟಲಾಗದು :
ಲಿಂಗವಿಲ್ಲದೆ ನುಡಿದ ಶಬ್ದ ಸೂತಕ : ಕೇಳಲಾಗದು !
ಲಿಂಗವಿಲ್ಲದೆ ಗಮನಿಸಿದೊಡೆ ಆ ನಡೆನುಡಿಗೊಮ್ಮೆ ವ್ರತಗೇಡಿ,
ಕೂಡಲ ಸಂಗಮದೇವಾ ! || ೬೦೮ ||

೮೪

ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ,
ಗ್ರಹಣ-ಸಂಕ್ರಾಂತಿಯಿಂಡ ವೆಗ್ಗಳ,
ಏಕಾದಶಿ-ವ್ಯತೀಪಾತದಿಂದ ವೆಗ್ಗಳ
ಸೂಕ್ಷ್ಮ ಶಿವಪಥವಱಿದವಂಗೆ—
ಹೋಮ-ನೇಮ-ಜಪ-ತಪದಿಂದ ವೆಗ್ಗಳ,
ಕೂಡಲ ಸಂಗಮದೇವಾ, ನಿಮ್ಮ ಮಾಣದೆ ನೆನೆವವಂಗೆ. || ೬೦೯ ||

೮೫

ಅಶ್ವಮೇಧಯಾಗವಂತಿರಲಿ, ಅಜಪಯುಪದೇಶಸಮಾಧಿಯಂತಿರಲಿ, ಹೋ!
ಹೋಮ-ನೇಮ-ಗಾಯತ್ರಿಯ ಜಪವಂತಿರಲಿ, ಹೋ !
ಜನಮೋಹನ ಮಂತ್ರವಂತಿರಲಿ, ಹೋ !
ಕೂಡಲ ಸಂಗನ ಶರಣರ ನುಡಿಗಡಣೆ
ಎಲ್ಲಕ್ಕೂ ಅಧಿಕ, ನೋಡಾ ! || ೬೧೦ ||

೮೬

ವೇದಶಾಸ್ತ್ರದವರ ಹಿರಿಯರೆನ್ನೆ;
ಮಾಯಾಭ್ರಾಂತಿ ಕವಿದ ಗೀತಜ್ಞರ ಹಿರಿಯರೆನ್ನೆ !
ಇವರು ಹಿರಿಯರುಗಳೇ ? ಯಾಗನಟ್ಟುವಿಗಪಾಣರು !
ಇವರಿಂದಧಿಕವ ಸಾಧಿಸುವರೇನು ಕಿಱಿಯರೆ ?
ಇಂತು ವಿದ್ಯೆ ಗುಣ ಜ್ಞಾನ ಧರ್ಮ ಆಚಾರ ಶೀಲಂಗಳ
ನಮ್ಮ ಕೂಡಲ ಸಂಗನ ಶರಣರು
ಸಾಧಿಸಿದ ಸಾಧನೆಯನೇ ಸಾಧಿಸುವುದು. || ೬೧೧ ||

೮೭

ಊರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ
ನಂದಿಮುಖವಲ್ಲದೆ ಮಾಡಲಾಗದು;
ವಿಭೂತಿಯಲ್ಲದೆ ಮತ್ತೇನನೂ ಮಾಡಲಾಗದು;

'ಭರ್ಗೋದೇವ' ಎಂಬ ಮಂತ್ರವಲ್ಲದೆ ಮತ್ತೇನನೂ ಮಾಡಲಾಗದು !
ನಿಮ್ಮಿಂದ ಕುಲಜರಾಗಿ ಮತ್ತೆ ಅನ್ಯದೈವಕ್ಕೆಱಗುವ
ಜಗದನ್ಯಾಯಿಗಳನೇನೆಂಬೆ, ಕೂಡಲ ಸಂಗಮದೇವಾ ? ||೬೧೨||

೮೮

ದೇವನೊಬ್ಬ, ನಾಮ ಹಲವು :
ಪರಮಪತಿವ್ರತೆಗೆ ಗಂಡನೊಬ್ಬ;
ಮತ್ತೊಂದಕ್ಕೆಱಗಿದರೆ ಕಿವಿ-ಮೂಗ ಕೊಯ್ವನು !
ಹಲವು ದೈವದ ಎಂಜಲ ತಿಂಬವರನೇನೆಂಬೆ,
ಕೂಡಲ ಸಂಗಮದೇವಾ ? || ೬೧೩ ||

೮೯

ಕರ್ತಾರನ ಪೂಜಿಸಿ ಕು[ಕ್ಷಿ]ತ ದೈವಕ್ಕೆಱಗುವರು
ಕತ್ತೆ ಕುಂಬರಿಗೆ ಬಿಟ್ಟುದ ವೇಸರನಂತೆ !
ಭಕ್ತರೆಂತೆಂಬೆ, ಭೃತ್ಯರೆಂತೆಂಬೆ, ಶರಣರೆಂತೆಂಬೆನವರ ?
ಎರಡುಳ್ಳ ಪ್ರಪಂಚಿಗಳ ಮೆಚ್ಚ
ಕೂಡಲ ಸಂಗಮದೇವ ! || ೬೧೪ ||

೯೦

ಕಂಡಕಂಡವರೆಲ್ಲರ ಗಂಡರೆಂಬೆಂಬ
ಮುಂಡೆಯ ಮನದ ನಚ್ಚನೆಂತು ನಂಬಹುದೆ ?
ಲಿಂಗಪ್ರಸಾದವನುಂಡು ಅನ್ಯದೈವಂಗಳ ಕೊಂಡಾಡುವವರ—
ನಮ್ಮ ಕೂಡಲ ಸಂಗಮದೇವನು
ಆ ಭಂಡರಿಗೆ ಮಾಡಿದ ಮುಳುಗೊಂಡವನು ! || ೬೧೫ ||

೯೧

ನಂಬಿದ ಹೆಂಡತಿಗೆ ಗಂಡನೊಬ್ಬ, ಕಾಣಿರೋ :
ನಂಬಬಲ್ಲ ಭಕ್ತಂಗೆ ದೇವನೊಬ್ಬ, ಕಾಣಿರೋ !
ಬೇಡ ! ಬೇಡ ! ಅನ್ಯದೈವದ ಸಂಗ ಹೊಲ್ಲ !

ಬೇಡ ! ಬೇಡ ! ಅನ್ಯದೈವವೆಂಬುದು ಹಾದರ, ಕಾಣಿರೋ !
ಕೂಡಲ ಸಂಗಮದೇವ ಕಂಡರೆ ಮೂಗ ಕೊಯ್ವ, ಕಾಣಿರೋ ! ||೬೧೬||

೯೨

ಊಡುವ ಉಡಿಸುವ ಗಂಡನಿದ್ದಂತೆ,
ಜೋಡೆ ! ಮಿಂಡಂಗೆ ಕಣ್ಣು ಚೆಲ್ಲುವಳ
ಕೇಡಿಂಗೆ ಬೆಱಗಾದೆ ನಾನು !
ನಮ್ಮ ಕೂಡಲ ಸಂಗಮದೇವನು
ಸಿಂಗಾರದ ಮೂಗ ಬಣ್ಣಿಸಿ ಹಲುದೋಱಿ ಕೊಯ್ವ ! || ೬೧೭ ||

೯೩

ಅಷ್ಟಮಿ ನವಮಿ ಎಂಬ ಕಲ್ಪಿತವೇಕೊ ಶರಣಂಗೆ ?
ತಪ್ಪಿತ್ತು ಗಣಪದವಿ ! ಲಿಂಗಕ್ಕೆ ದೂರ, ಜಂಗಮಕ್ಕೆ ದೂರ !!
ಒಬ್ಬರಿಗಾಳಾಗಿ ಒಬ್ಬರನೋಲೈಸುವ
ನಿರ್ಬುದ್ಧಿ ಮನುಜರನೇನೆಂಬೆ,
ಕೂಡಲ ಸಂಗಮದೇವಾ ? || ೬೧೮ ||

೯೪

ಎಲವೊ, ಎಲವೋ, ಪಾಪಕರ್ಮವ ಮಾಡಿದವನೇ,
ಎಲವೊ, ಎಲವೋ, ಬ್ರಹ್ಮಹತ್ಯವ ಮಾಡಿದವನೇ,
ಒಮ್ಮೆ 'ಶರಣೆ' ನ್ನೆಲವೋ
ಒಮ್ಮೆ 'ಶರಣೆ'ಂದರೆ ಪಾಪಕರ್ಮ ಓಡುವುವು.
ಸರ್ವಪ್ರಾಯಶ್ಚಿತ್ತಕ್ಕೆ ಹೊನ್ನಪರ್ವತಂಗಳೈದವು :
ಒರ್ವಂಗೆ ಶರಣೆನ್ನು, ನಮ್ಮ ಕೂಡಲ ಸಂಗಮದೇವಂಗೆ ! ||೬೧೯ ||

೯೫

ಹಲವು ಕೊಂಬಿಂಗೆ ಹಾಯಬೇಡ :
ಬಱುಕಾಯಕ್ಕೆ ನೀಡಬೇಡ,
ಲೋಗರಿಗೆಡೆಗೊಟ್ಟು ಭ್ರಮಿತನಾಗಿರಬೇಡ !
ಆಚಾರವೆಂಬುದು ಹಾವಸೆಗಲ್ಲು :

ಭಾವ ತಪ್ಪಿದ ಬಳಿಕ ಏಗೆಯ್ದೊಡಾಗದು.
ಅಂಜದಿರು, ಅಳುಕದಿರು, ಪರದೈವಕ್ಕೆಱಗದಿರು :
ಕೂಡಲ ಸಂಗನ ಕೈಯಲು ಈಸುವುದೆನ್ನ ಭಾರ ! ||೬೦||

೯೬

ದ್ವಿಜರಿಗೆ ಕೊಟ್ಟು, ಹಲಬರು ಕೆಟ್ಟರು :
ಉದ್ಧರಿಸುವನೊಬ್ಬ, ಶಿವಶರಣ, ಸಾಲದೆ ?
ನಾರಾಯಣ ವೃದ್ಧಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ ಬೇಡಿದ:
ಕೊಟ್ಟ ಬಲಿ ಬಂಧನಕ್ಕೆ ಸಿಕ್ಕಿದ !
ಈಶ ಭಕ್ತನಾಗಿ ಬಂದು ದಾಸನ ವಸ್ತ್ರವ ಬೇಡಿದ :
ಕೊಟ್ಟ ದಾಸ ತವನಿಧಿಯ ಪಡೆದ !
ಕಪಟದಿಂದೆ ನಾರಾಯಣ ಹಾರುವನಾಗಿ ಬಂದು ಕರ್ಣನ ಕವಚವಬೇಡಿದ:
ಕೊಟ್ಟ ಕರ್ಣ ಕಳದಲ್ಲಿ ಮಡಿದ !
ಕಾಮಾರಿ ಜಂಗಮನಾಗಿ ಬಂದು ಸಿರಿಯಾಳನ ಮಗನ ಬೇಡಿದ :
ಕೊಟ್ಟ ಸಿರಿಯಾಳಸೆಟ್ಟಿ ಕಂಚಿಯ ಪುರವ ಕೈಲಾಸಕ್ಕೊಯ್ದ !
ನಾರಾಯಣ ಹಾರುವನಾಗಿ ಬಂದು ನಾಗಾರ್ಜುನನ ಸಿರವ ಬೇಡಿದ :
ಕೊಟ್ಟ ನಾಗಾರ್ಜುನನ ಸಿರ ಹೋಯಿತ್ತು !
ಶಿವನು ಜಂಗಮನಾಗಿ ಬಂದು ಸಿಂಧುಬಲ್ಲಾಳನ ವಧುವ ಬೇಡಿದ :
ಕೊಟ್ಟ ಸಿಂಧುಬಲ್ಲಾಳ ಸ್ವಯ ಲಿಂಗವಾದ !
ಇದು ಕಾರಣ, ಇಲ್ಲಿಯೂ ಲೇಸು, ಅಲ್ಲಿಯೂ ಲೇಸು :
ಕೊಡಿರೇ, ನಮ್ಮ ಕೂಡಲ ಸಂಗನ ಶರಣರಿಗೆ. || ೬೧ ||

೯೭

ಎಚ್ಚು ಬಾಲಿಯ ಕೊಂದ, ಕಟ್ಟಿದನು ಶರಧಿಯನು;
ಹತ್ತು ತಲೆಯ ರಾವಣನ ಒಂದೆ ಅಂಬಿನಲಿ ಮಡುಹಿದ;
ಛಲದಿಂದ ಲಂಕಾದ್ವೀಪವ ನೆಲವಣ್ಣವ ಮಾಡಿದ;
ಕಲಿ ವಿಭೀಷಣಂಗೆ ಪಟ್ಟವ ಕಟ್ಟಿದ :
ರಾಮನ ತೋಱಾ !

ಮಾಯದ ಸಂಸಾರವ ನಚ್ಚಿ, ವಾಯಕ್ಕೆ ಕೆಟ್ಟು
ಬಱುದೊಱೆವೊಗಬೇಡ,
ಕರ್ತು ಕೂಡಲ ಸಂಗಯ್ಯಂಗೆ ಶರಣೆನ್ನಿರಯ್ಯಾ ! ॥ ೬೨ ॥

೯೮

ವಿಪ್ರರ ಕರೆದು ' ನೃಪರುಗಳು ಇಪ್ಪರೆ ತಮ್ಮ ಶಿಶುವಿನೊಡನೆ ' ಎಂದು
ಬೆಸಗೊಂಡರೆ,
" ಇಪ್ಪರು, ಇಪ್ಪರು, ತಾವು ಬಿತ್ತಿದ ಫಲಂಗಳ
ತಾವು ಉಣ್ಣದವರುಂಟೆ ? "
ಎಂದು ಕಣ್ಣುಕಾಣದೆ ಹೇಳಿದರು, ಅಣ್ಣಗಳು, ಕರ್ಮದ ಬಟ್ಟೆಯನು!
ಅಂತೆಂದ ಮಾತ ಶಿಶು ಕೇಳಿ
ಕೆಟ್ಟೋಡಿ ಬಂದು ಲಿಂಗದ ಹೊಟ್ಟೆಯ ಹೊಗಲು,
ಅಟ್ಟಿ ಬಂದು ಖಂಡೆಯವ ಕಳೆದುಕೊಂಡು ಮಂಡೆಯನೊಡೆಯಲು,
ಮಂಡೆಯೊಡೆದು ಭೂಮಂಡಲವಱಿಯೆ ನಾಲ್ಕು ಪುರವಾಗಲು,
ಘಟಸರ್ಪನ ತುಡುಕಿ ನಾಗನಾಥನಾಗಿ
ಇಪ್ಪತ್ತೇಳು ಬಸತಿಯನೊಡೆಯನೆ ?
ಆಗಳಂತೆ, ಎನ್ನ ಮಾಡಿದ ಕರ್ಮ ನಿಮ್ಮ ಕೈಯಲು ಕೆಡಿಸುವರು.
ಮುನ್ನೊಬ್ಬ ಕೆಡಿಸಿಹೆನೆಂದು ಬಂದು ಒಂದು ತುತ್ತನಿಟ್ಟು
ಮರಳಿ ಕೈಯಿಡ ಹೋದರೆ ತುತ್ತು ಹುಳುಗುಪ್ಪೆಯಾಗದೆ ?
ಶಿವಧರ್ಮವ ಕೆಡಿಸಿದವನು ಅಧರ್ಮಕ್ಕಿಳಿವನು :
ಕೂಡಲ ಸಂಗಮದೇವ ಸಾಕ್ಷಿಯಾಗಿ,
ಮಕರಭೋಜನವಾಗನೆ ವಿನಾಶಕ್ತಿರಾಯನು ? ॥ ೬೩ ॥

೯೯

ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ, ಮಾನವಾ :
ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು, ನೋಡಾ !
ಒಬ್ಬ ಜಂಗಮದಭಿಮಾನದಿಂದ
ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು,
ಸಂದಿತ್ತು, ಕೂಡಲ ಸಂಗಮದೇವಾ, ನಿಮ್ಮ ಕವಳಿಗೆಗೆ ! ॥ ೬೪ ॥

೧೦೦

ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ,
ಆಕಳ ಹಾಲನೆಱೆದು, ಜೇನ ತುಪ್ಪವ ಹೊಯ್ದರೆ,
ಸಿಹಿಯಾಗಬಲ್ಲುದೆ, ಕಹಿಯಹುದಲ್ಲದೆ ?
ಶಿವಭಕ್ತರಲ್ಲದವರ ಕೂಡೆ ನುಡಿಯಲಾಗದು,
ಕೂಡಲ ಸಂಗಮದೇವಾ. || ೬೫ ||

೧೦೧

ಕರ್ತನನಱಿಯದವನು ವಿಪ್ರನಾದರೇನು, ಚತುರ್ವೇದಿಯಾದರೇನು ?
ಭುಕ್ತಿಕಾರಣ ಲೋಕದ ಇಚ್ಛೆಗೆ ನುಡಿದು ನಡೆವರಯ್ಯಾ !
ಭವಿ ಮಾಡಿದ ಪಾಕವ ತಂದು ಲಿಂಗಕರ್ಪಿಸುವ ಕಷ್ಟರ ಕಂಡು
ನಾಚಿತ್ತೆನ್ನ ಮನ !
ಕೂಡಲ ಸಂಗನ ಶರಣರ ಒಕ್ಕುದ ಕೊಂಡು
ಅನ್ಯವನಾಚರಿಸಿದೊಡೆ ತಪ್ಪದು—
ಸೂಕರ ಶುಚಿರ್ಭೂತತೆಯ ಪ್ರಾಣಿಯಂತೆ ! || ೬೬ ||

೧೦೨

ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿತೆಂಬರು :
ಕೊಂಬಲ್ಲಿ ಕೊಡುವಲ್ಲಿ ಕುಲವನಱಸುವರು.
ಎಂತಯ್ಯಾ, ಅವರ ಭಕ್ತರೆಂಬೆ ?
ಎಂತಯ್ಯಾ, ಅವರ ಯುಕ್ತರೆಂಬೆ ?
ಕೂಡಲ ಸಂಗಮದೇವ, ಕೇಳಯ್ಯಾ,
ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯಾ ! || ೬೭ ||

೧೦೩

ಭಕ್ತರನಲ್ಲದೆ ಒಲ್ಲೆವೆಂದೆಂಬಿರಿ :
ಭಕ್ತರಿಗಲ್ಲದೆ ಕೈಯಾನೆವೆಂಬಿರಿದೇನ ಮಾಡುವಿರಿ ?
ಎಲ್ಲಿಗೊಯ್ವಿರಿ ?
ಪಾವನವಾದುದನು ಲಿಂಗಕೆ ಮಾಡುವುದೆ ಆಚಾರ.

ವಿಷಯಕ್ಕೆ ಇಕ್ಕಿ, ಅಸುಗತಿಗಿಳಿಯದಿರಿ,
ಕೂಡಲ ಸಂಗನ ಶರಣರ ಒಡವೆಯ ! || ೬೨೮ ||

೧೦೪

ಮಾರಿ ಮಸಣಿಯೆಂಬುವು ಬೇಱಿಲ್ಲ ಕಾಣಿರೋ !
ಮಾರಿಯೆಂಬುದೇನು ? ಕಂಗಳು ತಪ್ಪಿ ನೋಡಿದರೆ ಮಾರಿ,
ನಾಲಿಗೆ ತಪ್ಪಿ ನುಡಿದರೆ ಮಾರಿ,
ನಮ್ಮ ಕೂಡಲ ಸಂಗಮದೇವರ ನೆನಹ ಮಱೆದರೆ ಮಾರಿ !
|| ೬೨೯ ||

೧೦೫

ಆಯುಧವಿಕ್ಕಿದವಂಗೆ ವೀರದ ಮಾತೇಕೆ ?
ಲಿಂಗವನಂತರಿಸಿದವಂಗೆ ಒಳನುಡಿಯೇಕೆ ?
ಅಯಿದೆ-ಅಣಚಿಯಿಲ್ಲದವಳಿಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ ?
ಸತ್ಯನಲ್ಲದವಂಗೆ ನಿತ್ಯನೇಮವೇಕೆ ?
ಕರ್ತಾರ, ನಿಮ್ಮ ಒಲವಿಲ್ಲದವಂಗೆ ಶಂಭುವಿನ ಬಂಧುಗಳೇಕೆ ?
ಕೂಡಲ ಸಂಗಮದೇವಯ್ಯಾ,
ನೀವಿಲ್ಲದವಂಗೆ ಶಿವಾಚಾರದ ಮಾತೇಕೆ ? || ೬೩೦ ||

೧೦೬

ಇರುಳೆಂದೇನೋ ಕುರುಡಂಗೆ, ಹಗಲೆಂದೇನೊ ಕುರುಡಂಗೆ ?
ತಾಳವ ಬಾರಿಸಿದರೇನೊ,
ಪಂಚಮಹಾಶಬ್ದವ ಬಾರಿಸಿದರೇನೋ ಕಿವುಡಂಗೆ—
ಕೂಡಲ ಸಂಗಯ್ಯನ ಪಥವಿನ್ನಾವುದೆಂದಱಿಯದವಂಗೆ? || ೬೩೧ ||

೧೦೭

ಸಿಂಗದ ನಡು ಮುಱಿಯಲಾ ಸಿಂಗವೇನು ಬಾತೆ ?
ಸುಂಡಿಲು ಮುಱಿದರೆ ಗಜವೇನು ಬಾತೆ ?
ಸಂಗ್ರಾಮದಲ್ಲಿ ವೀರನುಳಿಯಲದೇನು ಬಾತೆ?

ಶೃಂಗಾರದ ಮೂಗು ಹೋದರೆ ಶೃಂಗಾರವೇನು ಬಾತೆ ?
ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ,
ಕೂಡಲ ಸಂಗಮದೇವಾ ? || ೬೩೭ ||

೧೦೮

ಮುನ್ನಿನ ಆದ್ಯರ ಪಥಂಗಳು ಇನ್ನಾರಿಗೆಯೂ ಅಳವಡದು, ನೋಡಾ !
ಬಲ್ಲೆನಾಗಿ ಒಲ್ಲೆನು-- ಅವರು ಸಲ್ಲರು ಶಿವಪಥಕ್ಕೆ,
ಒಳ್ಳಿಹ ವೈಲಾರನ ಸಿಂಗಾರದಂತೆ,
ವೇಶಿಯ ಬಾಯಂಜಲ ತಿಂಬ ದಾಸಿಯ ಸಂಸಾರದಂತೆ--
ಕೂಡಲ ಸಂಗನ ಶರಣರನಱಿಯದ ಉಳಿದ ಭಂಗಿತರ ! || ೬೩೩ ||

೧೦೯

ಗೀಜಗನ ಗೂಡು, ಕೋಡಗದಣಲ ಸಂಚ,
ಬಾದುಮೆಯ ಮದುವೆ, ಬಾವುಲ ಬಿದ್ದಿನಂತೆ,
ಜೂಜುಗಾಱನ ಮಾತು, ಬೀದಿಯ ಗುಂಡನ ಸೊಬಗು,
ಓಡಿನೊಳಗಗೆಯ ಹೊಯ್ದಂತೆ, ಕಾಣಿರೋ !
ಶಿವನಾದಿಯಂತವನಱಿಯದವನ ಭಕ್ತಿ
ಸುಖಶೋಧನೆಗೆ ಮದ್ದ ಕೊಂಡಂತೆ,
ಕೂಡಲ ಸಂಗಮದೇವಾ ! || ೬೩೪ ||

೧೧೦

ತೊತ್ತಿನ ಕೊರಳಲ್ಲಿ ಹೊಂಬಿತ್ತಾಳೆಯ ಸಿಂಗಾರವ ಮಾಡಿದಂತೆ.
ಕು[ಚ್ಚಿ]ತರ ಸಂಗ ಸುಸಂಗಿಗೆ ಸಂಗಡವಲ್ಲ !
ಗುರುಗುಂಜಿ ಮಾಣಿಕಕ್ಕೆ ಸರಿಯಪ್ಪುದೆ,
ಕೂಡಲ ಸಂಗಮದೇವಾ ? || ೬೩೫ ||

೧೧೧

ಕೆಂಚ ಕರಿಕನ ನೆನೆದರೆ ಕರಿಕನಾಗಬಲ್ಲನೆ ?
ಕರಿಕ ಕೆಂಚನ ನೆನೆದರೆ ಕೆಂಚನಾಗಬಲ್ಲನೆ ?

ದರಿದ್ರ ಸಿರಿವಂತನ ನೆನೆದರೆ ಸಿರಿವಂತನಾಗಬಲ್ಲನೆ ?
ಸಿರಿವಂತ ದರಿದ್ರನ ನೆನೆದರೆ ದರಿದ್ರನಾಗಬಲ್ಲನೆ ?
ಮುನ್ನಿನ ಪುರಾತರ ನೆನೆದು ಧನ್ಯನಾದಹೆನೆಂಬ
ಮಾತಿನ ರಂಜಕರನೇನೆಂಬೆ, ಕೂಡಲ ಸಂಗಮದೇವಾ ? || ೬೩೬ ||

೧೧೨

ಆನೆಯನೇಱಿಕೊಂಡು ಹೋದಿರೆ ನೀವು,
ಕುದುರೆಯನೇಱಿಕೊಂಡು ಹೋದಿರೆ ನೀವು,
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ, ಅಣ್ಣಾ !
ಸತ್ಯದ ನಿಲವನಱಿಯದೆ ಹೋದಿರಲ್ಲಾ !
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ !
ಅಹಂಕಾರವೆಂಬಸದ ಮದಗಜವೇಱಿ
ವಿಧಿಗೆ ಗುಱಿಯಾಗಿ ನೀವು ಹೋದಿರಲ್ಲಾ !
ನಮ್ಮ ಕೂಡಲ ಸಂಗಮದೇವರನಱಿಯದೆ
ನರಕಕ್ಕೆ ಭಾಜನವಾದಿರಲ್ಲಾ ! || ೬೩೭ ||

೧೧೩

ಇಂದ್ರಿಯನಿಗ್ರಹವ ಮಾಡಿದರೆ ಹೊಂದುವುವು ದೋಷಂಗಳು :
ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು !
ಸತಿಪತಿರತಿಸುಖವ ಬಿಟ್ಟರೆ ಸಿರಿಯಾಳ-ಚಂಗಳೆಯವರು ?
ಸತಿಪತಿರತಿಸುಖಭೋಗೋಪಭೋಗವಿಳಾಸವ
ಬಿಟ್ಟ [ನೆ] ಸಿಂಧುಬಲ್ಲಾಳನು ?
ನಿಮ್ಮ ಮುಟ್ಟಿ ಪರಧನ-ಪರಸತಿಯರಿಗೆಳಸಿದರೆ
ನಿಮ್ಮ ಚರಣಕ್ಕೆ ದೂರ, ಕೂಡಲ ಸಂಗಮದೇವಾ ! || ೬೩೮ ||

೧೧೪

ಲಿಂಗಜಂಗಮ ಒಂದೆ ಎಂದು ನಂಬಿದ ಬಳಿಕ
ಅವರಂಗನೆಯರು ಲಿಂಗದ ರಾಣಿವಾಸ :
ಅಲ್ಲಿಯೂ ಮೇಳ, ಇಲ್ಲಿಯೂ ಮೇಳ,

ಚೌಡೇಶ್ವರಿಯಲ್ಲಿಯೂ ಮೇಳ !
ಮೊಲೆಯುಂಬ ಭಾವ ತಪ್ಪಿ ಅಪ್ಪಿದವರ
ತಲೆಯ ಕೊಂಬ ಕೂಡಲ ಸಂಗಮದೇವ. || ೬೩೯ |

೧೧೫

ಒಡೆಯರು ತಮ್ಮ ಮನೆಗೆ ಒಡಗೊಂಡು ಹೋದರೆ,
ತುಡುಗುಣಿತನದಲ್ಲಿ ಪರವಧುವ ನೋಡುವ ಸರಸ ಬೇಡ,
ಕಾಣಿರಣ್ಣಾ ! ಒಡೆಯನರಸಿಯ ಸರಸಬೇಡ !
ಕೂಳ ಸೊಕ್ಕು ತಲೆಗೇಱಿ ರಾಣಿವಾಸದೊಡನೆ ಸರಸಬೇಡ;
ಕೂಡಲ ಸಂಗಮದೇವ ಕರ ಸಿತಗನಯ್ಯಾ ! || ೬೪೦ |

೧೧೬

ನೋಡಲಾಗದು ನುಡಿಸಲಾಗದು ಪರಸ್ತ್ರೀಯ, ಬೇಡ, ಕಾಣಿರೋ !
ತಗರ ಬೆನ್ನಲಿ ಹರಿವ ಸೊಣಗನಂತೆ, ಬೇಡ, ಕಾಣಿರೊ !
ಒಂದಾಸೆಗೆ ಸಾವಿರ ವರುಷ ನರಕದೊಳದ್ದುವ
ಕೂಡಲ ಸಂಗಮದೇವ ! || ೬೪೧ |

೧೧೭

ತೊಱೆಯ ಮೀವಣ್ಣಗಳಿರಾ, ತೊಱೆಯ ಮೀವ ಸ್ವಾಮಿಗಳಿರಾ,
ತೊಱೆಯಿಂ ಭೋ, ತೊಱೆಯಿಂ ಭೋ,
ಪರನಾರಿಯ ಸಂಗವ ತೊಱೆಯಿಂ ಭೋ !
ಪರಧನದಾಮಿಷವ ತೊಱೆಯಿಂ ಭೋ !
ಇವ ತೊಱೆಯದೆ ಹೋಗಿ ತೊಱೆಯ ಮಿಂದರೆ,
ಬಱುದೊಱೆ ಹೋಹುದು, ಕೂಡಲ ಸಂಗಮದೇವಾ. || ೬೪೨

೧೧೮

ಸತ್ಯ ಶೌಚ ನಿತ್ಯ ನೇಮವ ತಪ್ಪದೆ ಮಾಡಬಲ್ಲರೆ ಅದು ಲೇಸು,
ಮತ್ಸ್ಯ ಕೂರ್ಮ ಮಂಡೂಕ ಜಲದೊಳಗಿದ್ದಲ್ಲಿ ಫಲವೇನು ?
ಚಿತ್ತಮಂತರ್ಗತಂ ದೃಷ್ಟ್ವಾ । ತೀರ್ಥಸ್ನಾನೇನ ಶುಧ್ಯತೇ ॥
ಶತಕುಂಭಜಲೇ ಶೌಚಂ । ಸುರಾಭಾಂಡಮಿವಾಶುಚಿಃ ॥
ಆಗಡವ ಮಾಡಿ ಮಾಗುಡವ ಮಿಂದರೆ
ತಾ ಕೊಡಬಲ್ಲನೆ ಕೂಡಲ ಸಂಗಮದೇವ ? || ೬೪೩

೧೧೯

ಕುಳ್ಳಿರ್ದಲ್ಲಿ ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯಾ :
ಬೆಳ್ಳಿತ್ತಿನ ಮಱೆಯಲ್ಲಿರ್ದು ಹುಲ್ಲೆಗಂಬ ತೊಡುವಂತೆ!
ಕಳ್ಳಹಾವರಿಗರ ಕೈಯಲು, ಪೂಜೆಯಕೊಳ್ಳ
ನಮ್ಮ ಕೂಡಲ ಸಂಗಮದೇವ ! || ೬೪೪ ||

೧೨೦

ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ
ಹಿಡಿದಿರ್ದ ಲಿಂಗವು ಘಟಸರ್ಪನಂತೆ !
ನುಡಿಯಲು ಬಾರದು, ನಡೆಯಲು ಬಾರದು,
ಲಿಂಗದೇವನೆ ದಿಬ್ಯವೊ, ಅಯ್ಯಾ !
ಬಡವನ ಕೋಪ ಅವುಡಿಗೆ ಮೃತ್ಯುವಾದಂತೆ
ಕಡೆದಾಂಟದು, ಕಾಣಾ, ಕೂಡಲ ಸಂಗಮದೇವಾ. || ೬೪೫ ||

೧೨೧

ತನುಶುಚಿಯಲ್ಲದವನ ದೇಹಾರವೇಕೆ ?
ದೇವರು ಕೊಡನೆಂಬ ಭ್ರಾಂತದೇಕೆ ?
ಮನಕ್ಕೆ ಮನವೇ ಸಾಕ್ಷಿ; ಸಾಲದೆ, ಲಿಂಗ ತಂದೆ ?
ಹೇಂಗೆ ಮನ ಹಾಂಗೆ ನಿಮ್ಮ ಘನ, ತಪ್ಪದು, ಕೂಡಲ ಸಂಗಮದೇವ.
|| ೬೪೬ ||

೧೨೨

ಶರಣರ ನಿಚ್ಚ ನಿಚ್ಚ ಪೂಜಿಸುವಂಗೆ— ಇದಕ್ಕಿದೆ ದೃಷ್ಟ ದೀವಿಗೆ—
ಪಾದೋದಕ ಕೋಶಪಾನವಲ್ಲದೆ ಏನೂ ಇಲ್ಲವಯ್ಯಾ .
ಮಜ್ಜನಕ್ಕೆಱೆವುದು ಲಿಂಗ—
ಅದು ಲಿಂಗ ಕರಸ್ಥಲದ ದಿಬ್ಯ—
ಗುರುವಚನ ಭಾಷಾಪತ್ರ ಶಿವಕರದಲ್ಲಿ !
ಸತ್ಯದಿಂದ ನಡೆವಂಗೆ ನಿತ್ಯನೇಮವಾಗಿ ಸಲಿಸುವನಲ್ಲದೆ,
ಹುಸಿವಂಗೆ ಮಡಿಲ ಕಿಚ್ಚಾಗಿ ಸುಡುವ !
ಲಿಂಗವ ಪೂಜಿಸಿ ಮರಳಿ ಅನ್ಯಕ್ಕೆಱಗಿದಡೆ
ಕೂಡಲ ಸಂಗಮದೇವನವರ ಹಲ್ಲ ಕಳೆವ ! || ೬೪೭ ||

೧೩೩

ಪಾಪಿಗೆ ಕೋಪಿಗೆ ಭಕ್ತಿಯಾಗೆಂದರಪ್ಪುದೆ ?
ನಾರಿವಾಣವಕ್ಕುವುದೆ ನಾಯಿಗೆ,
ಕೂಡಲ ಸಂಗಮದೇವಾ,
ನಿಮ್ಮ ನಂಬಿಯೂ ನಂಬದ ಡಂಭಕಂಗೆ ? || ೬೪೮ ||

೧೩೪

ಕೋಪಿ ಮಜ್ಜನಕ್ಕೆಱೆದರೆ ರಕ್ತದ ಧಾರೆ !
ಪಾಪಿ ಹೂವನೇಱಿಸಲು ಮಸೆದಡಾಯುಧದ ಗಾಯ !
ಕೂರ್ಪವರನಾರನೂ ಕಾಣೆನು ಮಾದಾರ ಚೆನ್ನಯ್ಯನಲ್ಲದೆ;
ಕೂರ್ಪವರನಾರನೂ ಕಾಣೆನು ಡೋಹಾರ ಕಕ್ಕಯ್ಯನಲ್ಲದೆ.
[ವ್ಯಾಪತ್ತಿ] ಯುಳ್ಳ ನಮ್ಮ ಮಡಿವಾಳಮಾಚಯ್ಯ
ನಿನ್ನಾಪತ್ತಿಗಱಿವರಯ್ಯಾ, ಕೂಡಲ ಸಂಗಯ್ಯಾ ! || ೬೪೯ ||

೧೩೫

ಸದಾಚಾರ ಸದ್‌ಭಕ್ತಿಯಿಲ್ಲದವರನೊಲ್ಲನಯ್ಯಾ :
ಅವರಾರಾಧನೆ ದಂಡ !
ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲ,
ಕೂಡಲ ಸಂಗಮದೇವ, ಭೂಭಾರಕರ ! || ೬೫೦ ||

೧೩೬

ನೂಱನೋದಿ ನೂಱ ಕೇಳಿದರೇನು ?
ಆಸೆ ಹಱಿಯದು, ರೋಷ ಬಿಡದು,
ಮಜ್ಜನಕ್ಕೆಱೆದು ಫಲವೇನು ?
ಮಾತಿನಂತೆ ಮನವಿಲ್ಲದ ಜಾತಿಡೊಂಬರ ನೋಡಿ, ನಗುವ
ನಮ್ಮ ಕೂಡಲ ಸಂಗಮದೇವ. || ೬೫೧ ||

೧೩೭

ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ
ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ.

ಲಿಂಗವಂತನು ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ
ಅವಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ ಮುನಿಯ.
ಲಿಂಗಭಕ್ತನು ಲಿಂಗಪಥವ ಹೇಳಿದರೆ
ಮಚ್ಚರಿಸುವರ ಮೆಚ್ಚ ಕೂಡಲ ಸಂಗಮದೇವ. || ೬೫೭ ||

೧೨೮

ಗುರೂಪದೇಶ ಮಂತ್ರವೈದ್ಯ; ಜಂಗಮೋಪದೇಶ ಶಸ್ತ್ರವೈದ್ಯ, ನೋಡಾ :
ಭವರೋಗವ ಗೆಲುವ ಪರಿಯ ನೋಡಾ.
ಕೂಡಲ ಸಂಗನ ಶರಣರ ಅನುಭಾವ
ಮಡಿವಾಳನ ಕಾಯಕದಂತೆ ! || ೬೫೩ ||

೧೨೯

ಕೇಳಿರೆ, ಕೇಳಿರೆ, ಹಿರಿಯರು ಗುರುವಿನುಪದೇಶವನು:
ಒಂದು ಗೀಜಗನ ಉಪದೇಶದಿಂದ
ಪೌಲಸ್ತ್ಯನೆಂದು ಹಡೆಯನೆ ದಶಮುಖನ ?
ಶಿರವ ಹಱಿದಿಕ್ಕೆ ಪರಮನಿದ್ದೆಡೆಯ ಕಾಣದೇನಿಳೆಯಲ್ಲಿ ?
ಕರುಳ ತಂತಿಯುಪದೇಶದಿಂದೆ
ಅಸುರನೆಂದು ಹಡೆಯನೆ ಸುರಪದವ ?
ತರುಣಿ ಹರಿಣಿಯುಪದೇಶದಿಂದೆ ಗತಿ ಪಥ ಮುಕ್ತಿಯ ಪಡೆದು
ಬಟ್ಟೆಯ ಹತ್ತನೆ ವಿನಾಶಕ್ತಿರಾಯನು ?
ರಂಭೆಯುಪದೇಶದಿಂದ
ಶಂಭುವಿನೋಲಗದಲ್ಲಿ ಕುಳ್ಳಿರನೆ ಶ್ವೇತನು ?
ನಮ್ಮ ಕೂಡಲ ಸಂಗನ ಶರಣರ ಉಪದೇಶವ ಕೇಳಿದವರಿಗೆ
ದುರಿತ-ಪಾಪಂಗಳು ಬಿಟ್ಟುಹೋಗಿ ಮನನಿರತರಾಗಿಪ್ಪರು ಲಿಂಗದಲ್ಲಿ.
|| ೬೫೮ ||

೧೩೦

ಶಿವಚಿಂತೆ ಶಿವಜ್ಞಾನ ಭ್ರಮೆತಿಳಿದವಂಗಲ್ಲದೆ
ಆಚಾರ ಶಿವಾಚಾರ ತಮತಮಗೆ ಸೂಱೆಯೆ,
ಕೂಡಲ ಸಂಗಮದೇವನ ನೆಱೆ ಪೂಜಿಸಿದವಂಗಗಲ್ಲದೆ ? ||೬೫೫||

೧೩೧

ಶ್ವಪಚನಾದರೇನು ? ಲಿಂಗಭಕ್ತನೇ ಕುಲಜನು.
ನಂಬಿ ನಂಬದಿದ್ದರೆ ಸಂದೇಹಿ, ನೋಡಾ !
ಕಟ್ಟಿದರೇನು, ಮುಟ್ಟಿದರೇನು, ಹೂಸಿದರೇನು
ಮನ ಮುಟ್ಟದನ್ನಕ್ಕ ?
ಭಾವಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು,
ಕೂಡಲ ಸಂಗಯ್ಯನೊಲಿದಂಗಲ್ಲದೆ. ॥ ೬೫೬ ॥

೧೩೨

ಅವರ ನಡೆಯೊಂದು ನುಡಿಯೊಂದಾದರೆ
ಶಿವಾಚಾರಕ್ಕವರು ಸಲ್ಲರಯ್ಯಾ :
ಬಲ್ಲನು, ಸಾತ್ವಿಕರಲ್ಲದವರನೊಲ್ಲನು;
ಶಿವಾಚಾರವ ಬಲ್ಲನು, ಅಲ್ಲಿ ನಿಲ್ಲನು,
ಪ್ರಪಂಚಿಯ ಮನವನೊಲ್ಲನು ಕೂಡಲ ಸಂಗಮದೇವನು. ॥ ೬೫೭ ॥

೧೩೩

ನಿಧಾನವನಗಿಸಿಹೆವೆಂದು ಹೋದರೆ, ವಿಘ್ನ ಬಪ್ಪುದು ಮಾಣ್ಬುದೆ ?
ಸದಾಶಿವನೆಂದರೆ ಬೆದರಟ್ಟಿ ಸುಡುವುದು ಮಾಣ್ಬುದೆ ?
ಹದುಳಿಗನಾಗಿ ಉಳಿದರೆ ಪದವಿಯನೀವ, ಕಾಣಾ,
ಕೂಡಲ ಸಂಗಮದೇವ. ॥ ೬೫೮ ॥

೧೩೪

ಅಡಿಗಡಿಗೆ ದೇವರಾಣೆ, ಅಡಿಗಡಿಗೆ ಭಕ್ತರಾಣೆ
ಅಡಿಗಡಿಗೆ ಗುರುವಿನಾಣೆ ಎಂಬ ವಚನವೇ ಹೊಲ್ಲ !
ಮುಂದೆ ಶಿವಪಥಕ್ಕೆ ಸಲ್ಲರು !
ಆದಿಯಿಂದ ಬಂದ ವಚನವೆಂದು ಶರಣರ ಕೂಡೆ ಸರಸವಾಡಿದರೆ—
ನಗುತಲಿಱಿದುಕೊಂಡರೆ ಅಲಗು ನೆಡದಿಹುದೆ,
ಕೂಡಲ ಸಂಗಮದೇವಾ ? ॥ ೬೫೯ ॥

೧೩೫

ಅರಗಿನ ಪುತ್ತಳಿಯನುರಿಯ ನಾಲಗೆ ಹೊಯಿದು
ಮಾತಾಡುವ ಸರಸ ಬೇಡ !
ಬೆಣ್ಣೆಯ ಬೆನಕಂಗೆ ಕೆಂಡದುಂಡಲಿಗೆಯ ಮಾಡಿ
ಚಲ್ಲವಾಡಿದರೆ ಹಲ್ಲು ಹೋಹುದು !
ಕೂಡಲ ಸಂಗನ ಶರಣರೊಡನೆ ಸರಸವಾಡಿದರೆ
ಅದು ವಿರಸ ಕಾಣಿರಯ್ಯಾ ! || ೬೬೦ ||

೧೩೬

ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುಱಿಸುವಂತೆ,
ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ,
ಹುಲಿಯ ಮೀಸೆಯ ಹಿಡಿದುಕೊಂಡು
ಒಲಿದುಯ್ಯಲೆಯಾಡುವಂತೆ,
ಕೂಡಲ ಸಂಗನ ಶರಣರೊಡನೆ ಮಱೆದು ಸರಸವಾಡಿದರೆ
ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ !
|| ೬೬೧

೧೩೭

ಉರಿವ ಕೊಳ್ಳಿಯ ಮಂಡೆಯಲಿಕ್ಕಿದೊಡುರಿವುದು ಮಾಣ್ಬುದೆ ?
ಕಲ್ಲ ಗುಗ್ಗರಿಯ ಮೆಲಿದರೆ ಹಲ್ಲು ಹೋಹುದು ಮಾಣ್ಬುದೆ ?
ಶರಣರೊಡನೆ ಸರಸವಾಡಿದರೆ ನರಕ ತಪ್ಪದು, ಕಾಣಾ,
ಕೂಡಲ ಸಂಗಮದೇವಾ ! || ೬೬೨ ||

೧೩೮

ಕೋಣನ ಹೇಱಿಂಗೆ ಕುನ್ನಿ ಬಸುಗುತ್ತಬಡೆವಂತೆ
ತಾವು ನಂಬರು, ನಂಬುವವರ ನಂಬಲೀಯರು;
ತಾವು ಮಾಡರು, ಮಾಡುವವರ ಮಾಡಲೀಯರು !
ಮಾಡುವ ಭಕ್ತರ ಕಂಡು ಸೈರಿಸಲಾಱದವರ,
ಕೂಗಿಡೆ ಕೂಗಿಡೆ, ನರಕದಲ್ಲಿಕ್ಕುವ
ಕೂಡಲ ಸಂಗಮದೇವ ! || ೬೬೩ ||

೧೩೯

ಚೇಳಿಂಗೆ ಬಸುಱಾಯಿತ್ತೆ ಕಡೆ; ಬಾಳೆಗೆ ಫಲವಾಯಿತ್ತೆ ಕಡೆ, ನೋಡಾ !
ರಣರಂಗದಲ್ಲಿ ಕಾದುವ ಓಲೆಯಕಾಱಂಗೆ ಓಸರಿಸಿತ್ತೆ ಕಡೆ !
ಮಾಡುವ ಭಕ್ತಂಗೆ ಮನ ಹೀನವಾದರೆ ಅದೇ ಕಡೆ,
ಕೂಡಲ ಸಂಗಮದೇವಾ ! || ೬೬೪ ||

೧೪೦

ಹುಲಿಯ ಹಾಲು ಹುಲಿಗಲ್ಲದೆ ಹೋದ ಹುಲ್ಲಿಗೆ ಉಣಸಬಾರದು;
ಕಲಿಯ ಕಾಲ ತೊಡರು ಛಲದಾಳಿಗಲ್ಲದೆ ಇಕ್ಕಬಾರದು;
ಅಳಿಮನದಾಸೆಯವರ ಮೂಗ ಹಲುದೋಱಿ ಕೊಯ್ವ
ಕೂಡಲ ಸಂಗಮದೇವ. || ೬೬೫ ||

೧೪೧

" ಅರ್ಥಪ್ರಾಣಾಭಿಮಾನ ನಿಮ್ಮದೆ '' ಎಂಬಿರಿ :
ಒತ್ತಿ ನೋಡಿದರೆ ಮುಟ್ಟಲೀಯಿರಿ;
ಮುಟ್ಟಿ ಬಂದಲ್ಲಿ ಕಠಾರಿಯ ಕಾಳಗವ ನಿವಾಡಿಸುವಿರಲ್ಲದೆ,
ಲಿಂಗ-ಜಂಗಮವಂತನಾಗಬಾರದು !
ಕೂಡಲ ಸಂಗಮದೇವಾ, ವೇಷಡಂಭಕರಿಗೆ ಭಕ್ತಿ ಎಂತಪ್ಪುದಯ್ಯಾ ?
|| ೬೬೬ ||

೧೪೨

ಅಲಗಲಗು ಮೋಹಿಸಿದಲ್ಲದೆ ಕಲಿತನವ ಕಾಣಬಾರದು.
ನುಡಿದ ನುಡಿ ಜಾಱಿದರೆ ಮನಕ್ಕೆ ಮನ ನಾಚಬೇಕು :
ಶಬ್ದಘಟ್ಟಿಯತನದಲ್ಲಿ ಎಂತಪ್ಪುದಯ್ಯಾ ಭಕ್ತಿ ?
ಪಾಪಿಯ ಕೂಸನೆತ್ತಿದಂತೆ,
ಕೂಡಲ ಸಂಗಮದೇವರ ಭಕ್ತಿ
ಅಳಿಮನದವರಿಗೆ ಅಳವಡದಯ್ಯಾ. || ೬೬೭ ||

೧೪೩

ಹರಬೀಜವಾದರೆ ಹಂದೆ ತಾನಪ್ಪನೆ ?
ಒಱೆಗಟ್ಟಿ ಇಱಿಯದವರ ಲೋಕ ಮೆಚ್ಚುವುದೆ ?
ಉಟ್ಟ ಚಲ್ಲಣ ಕೈಯ ಪಟ್ಟೆಯವಿಡಿದು,
  ಗರುಡಿಯ ಕಟ್ಟಿ ಶ್ರವವ ಮಾಡುವಂತೆ
  ತನ್ನ ತಪ್ಪಿಸಿಕೊಂಡರೆ, ಶಿವ ಮೆಚ್ಚುವನೆ ?
ಅಱಿಯದವರಿಗೆ ಒಳ್ಳೆ ಹೆಡೆಯನೆತ್ತಿಯಾಡುವಂತೆ
  ಬೊಳ್ಳಗನ ಭಕ್ತಿ, ಕೂಡಲ ಸಂಗಮದೇವಾ ! || ೬೬೮ ||

೧೪೪

ಮೊಸೆ ತಪ್ಪಿದ ಬಳಿಕ ಅಲಗೇನ ಮಾಡುವುದು ?
ವಿಷ ತಪ್ಪಿದ ಬಳಿಕ ಹಾವೇನ ಮಾಡುವುದು ?
ಭಾಷೆ ತಪ್ಪಿದ ಬಳಿಕ ಪ್ರಾಣದಾಸೆಯನು ಹಾರಿದರೆ
  ಮೀಸಲ ಸೊಣಗ ಮುಟ್ಟಿದಂತೆ, ಕೂಡಲ ಸಂಗಮದೇವಾ ! ||೬೬೯||

೧೪೫

ಶರಣರ ಸಂಬಂಧವನಱಿದ ಬಳಿಕ
  ಮರಳಿ ಭವಿಯ ಬೆರಸಬಾರದು :
  ಬ್ರಹ್ಮಹತ್ಯ, ಭ್ರೂಣಹತ್ಯ, ವೈತಿರಣಿ, ದುರ್ಗತಿ
  ಪಂಚಮಹಾಪಾತಕದಿಂದಧಿಕ, ನೋಡಾ !
ಅಳುಪಿ ಭವಿಯೊಡನುಂಡರೆ ಭಕ್ತನಲ್ಲಾ,
  ಕೂಡಲ ಸಂಗಮದೇವಾ. || ೬೭೦ ||

೧೪೬

ವೀರ ವ್ರತಿ ಭಕ್ತನೆಂದು ಹೊಗಳಿಕೊಂಬಿರಿ, ಕೇಳಿರಯ್ಯಾ :
  ವೀರನಾದರೆ ವೈರಿಗಳು ಮೆಚ್ಚಬೇಕು,
  ವ್ರತಿಯಾದರೆ ಅಂಗನೆಯರು ಮೆಚ್ಚಬೇಕು,
ಈಭಕ್ತನಾದರೆ ಜಂಗಮ ಮೆಚ್ಚಬೇಕು.
  ನುಡಿಯೊಳಗೆ ತನ್ನ ಬಗೆಯಿರೆ
  ಬೇಡಿದ ಪದವಿಯನೀವ ಕೂಡಲ ಸಂಗಮದೇವಾ. || ೬೭೧ ||

೧೪೭

ಕಲಿತನ ತನಗುಳ್ಳರೆ ಸೂಜಿ-ಬಾಳು ಮೊದಲಾಗಿ ಕಾದಲೇಬೇಕು.
ಶರಣಪಥ ತನಗುಳ್ಳರೆ ಶಿವಭಕ್ತರ ಮನೆಯ ಶಿವರಸವ
ಪಂಚಾಮೃತವ ಮಾಡಿಕೊಳ್ಳಬೇಕು.
ಭ್ರಾಂತುವಿಡಿದು ಲಿಂಗಕೋಗರವನಱಸುವ
ಪಾತಕರ ಮೆಚ್ಚ ಕೂಡಲ ಸಂಗಮದೇವಾ. ॥ ೬೭೨ ॥

೧೪೮

ಕಟ್ಟಿ ಬಿಡುವನೆ ಶರಣನು ? ಬಿಟ್ಟು ಹಿಡಿವನೆ ಶರಣನು ?
ನಡೆದು ತಪ್ಪುವನೆ ಶರಣನು ? ನುಡಿದು ಹುಸಿವನೆ ಶರಣನು ?
ಸಹಜ ಸಜ್ಜನಿಕೆ ತಪ್ಪಿದರೆ,
ಕೂಡಲ ಸಂಗಯ್ಯ ಮೂಗ ಹಲುದೋಱ ಕೊಯ್ವ ! ॥ ೬೭೩

೧೪೯

ಹುಟ್ಟುವಲ್ಲಿ ಭವಿ, ಮರಳಿ ಭಕ್ತನ ಮಾಡಿ, ಪೂರ್ವಾಶ್ರಮವ ಕಳೆದು
ಹೊಂದುವಲ್ಲಿ ಭವಿಯಾಗಿ ಹೋಹರೆ ಮುಟ್ಟಲಾಗದು.
ಅವನ ಮುಟ್ಟಿದವ ಮುನ್ನವೆ ವ್ರತಗೇಡಿ,
ಅವನ ಶ್ರಾದ್ಧಕಾಲವೆ ಶ್ವಾನಮಾಂಸ,
ಕ್ರಿಯಾಕಾರವೆ ಕ್ರಿಮಿಗಳು, ತದ್ದಿನವೆ ಮದ್ಯಮಾಂಸ !
ಇದು ಕಾರಣ, ಕೂಡಲ ಸಂಗಮದೇವಾ,
ಅವನ ಮನೆಯ ವಿಚಾರಿಸದೆ ಹೊಕ್ಕವಂಗೆ ನಾಯಕನರಕ! ॥ ೬೭೪ ॥

೧೫೦

ಒಡನೆ ಹುಟ್ಟಿದುದಲ್ಲ, ಒಡನೆ ಬೆಳೆದುದಲ್ಲ :
ಎಡೆಯಲಾದ ಒಂದು ಉಡುಗೆಯನುಟ್ಟು,
ಸಡಿಲಿದರೆ ಲಜ್ಜೆ-ನಾಚಿಕೆಯಾಯಿತ್ತೆಂಬ
ನುಡಿ ದಿಟವಾಯಿತ್ತು ಲೌಕಿಕದಲ್ಲಿ !
ಹಡೆದ ಗುರುಕರುಣದೊಡನೆ ಹುಟ್ಟಿದ ನೇಮವನು ಬಿಡದಿರೆಲವೋ;
ಬಿಟ್ಟರೆ ಕಷ್ಟ, ಕೂಡಲ ಸಂಗಮದೇವನಡಸಿ ಕೆಡಹುವ
ನಾಯಕನರಕದಲ್ಲಿ! ॥ ೬೭೫ ॥

೧೫೧

ಛಲಬೇಕು ಶರಣಂಗೆ ' ಪರಧನವನೊಲ್ಲೆನೆ'ಂಬ
ಛಲಬೇಕು ಶರಣಂಗೆ ' ಪರಸತಿಯನೊಲ್ಲೆನೆ'ಂಬ
ಛಲಬೇಕು ಶರಣಂಗೆ ' ಪರದೈವವನೊಲ್ಲೆನೆ'ಂಬ,
ಛಲಬೇಕು ಶರಣಂಗೆ ' ಲಿಂಗ ಜಂಗಮ ಒಂದೆ ' ಎಂಬ
ಛಲಬೇಕು ಶರಣಂಗೆ ' ಪ್ರಸಾದ ದಿಟವೆ'ಂಬ :
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲ ಸಂಗಮದೇವ. || ೬೭೬ ||

೧೫೨

ಜಂಬೂದ್ವೀಪ ನವಖಂಡಪೃಥ್ವಿಯೊಳಗೆ ಕೇಳಿರಯ್ಯಾ
ಎರಡಾಳಿನ ಭಾಷೆಯ—
' ಕೊಲುವೆನೆ 'ಂಬ ಭಾಷೆ ದೇವನದು :
' ಗೆಲುವೆನೆ 'ಂಬ ಭಾಷೆ ಭಕ್ತನದು !
ಸತ್ಯವೆಂಬ ಕೂರಲಗನೆ ಕಳೆದುಕೊಂಡು
ಸದ್‌ಭಕ್ತರು ಗೆದ್ದರು, ಕಾಣಾ, ಕೂಡಲ ಸಂಗಮದೇವಾ ! ||೬೭೭||

೧೫೩

ಮುನ್ನಿನ ಕಲಿ ವೀರ ಧೀರರು ಕಾದಿದ ರಣಗಳನು
ಪರಿಪರಿಯಲಿ ಬಣ್ಣಿಸಿ ಹೇಳಬಹುದಲ್ಲದೆ
ಆ ದಳವಿದಿರಾದಲ್ಲಿ ಬಿರಿದ ಪಚಾರಿಸಿ, ಕಾದಿ ತೋಱಲು ಬಾರದು.
ಮುನ್ನಿನ ಪುರುಷವ್ರತಿಯರು ಓಲಿಸಿದ ಆಯತವ
ಪರಿಪರಿಯಲು ಬಣ್ಣಿಸಲು ಬಹುದಲ್ಲದೆ
ಪುರುಷನಿರ್ವಾಣಕ್ಕುರಿವಗ್ನಿಯ
ಬಂದು ಹೊಕ್ಕುತೋಱಲು ಬಾರದು.
ಮುನ್ನಿನ ಪುರಾತರೆಲ್ಲರೂ ತನುಮನಧನವನಿತ್ತು
ಮಾಡಿ ನೀಡಿ ಲಿಂಗವ ಕೂಡಿವ ಪರಿಗಳನು
ಅನುಭಾವದಲರ್ಥಯಿಸಿ ಹೇಳಬಹುದಲ್ಲದೆ
ಮಾಡಿ, ನೀಡಿ ತೋಱಲು ಬಾರದು.
ಇಂತೀ ಅಱುಬಿರುದಿನ ಬಂಟರು, ಪುರುಷವ್ರತಿಯರು, ಪುರಾತನರು

ಬಱಿಯ ಮಾತನಾಡಿ ಹೊಱಗೆ ಮೆಱೆವರಲ್ಲಾ;
ಪರೀಕ್ಷೆಯುಂಟಾಗಿಯಿದ್ದರೆ, ಒಣಗಣವರ ಹೆಸರ ಹಿಡಿದು,
ಪರಿಪರಿಯಲು ಹೊಗಳುವರು.
ಶರೀರ-ಅರ್ಥ-ಪ್ರಾಣ ಗುರು-ಲಿಂಗ-ಜಂಗಮಕ್ಕೆ ಪರೀಕ್ಷೆ ಉಂಟಾಗಿಯೆ
'ಆತ ಮಾಹೇಶ್ವರ ಪುರಾತ–ವಳಿ' ಎಂಬ
ಪರಮಬಂಧುಗಳಾತನ ನೆನೆನೆನೆದು ಬದುಕುವರು.
ಇಂತೀ ಅನುಭಾವದ ಓದಿದ ಅಕ್ಷರಾಭ್ಯಾಸವ
ಸಾಧಿಸಿ ತರ್ಕಿಸಿ ನಿಂದಿಸಲಾಗದು.
ಕೂಡಲ ಸಂಗನ ಶರಣರಿಗಲ್ಲದೆ ಅನುಭಾವವಿಲ್ಲಾ ! || ೬೭೮

೧೫೪

ಕಬ್ಬಿನ ಹಣಿದವನಾಡುವರಲ್ಲದೆ ಕಾಯದ ಹಣಿದವನಾಡುವರೆ ?
ಮೇಲೊಡ್ಡವಾಯಿತ್ತೆಂದು, ಕೂಡಲ ಸಂಗಮದೇವಾ,
ನೀನಿಕ್ಕಿದ ಜೂಜಿಂಗೆ ಹೊಯಿದು ಗೆದ್ದ ಸಿರಿಯಾಳ ! || ೬೭೯

೧೫೫

ಅರ್ಥಪ್ರಾಣಾಭಿಮಾನವ ಕೊಟ್ಟೆನೆಂಬವರಲ್ಲದೆ
ಕೊಟ್ಟ ಭಕ್ತರನಾರನೂ ಕಂಡುದಿಲ್ಲ.
ದಾಸ ತನ್ನ ವಸ್ತ್ರವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ;
ಬಲ್ಲಾಳ ತನ್ನ ವಧುವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ;
ಸಿರಿಯಾಳ ತನ್ನ ಮಗನ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ !
ಇವೆಲ್ಲ ಹೊಱಗಣ ಮಾತು :
ಕೂಡಲ ಸಂಗಮದೇವರಲ್ಲಿ ತನ್ನ ಕೊಟ್ಟ ಸಿಂಧುಮರಾಳ ! || ೬೮೦

೧೫೬

ಒಂದು ಮಾತೆನ್ನಬಹುದೆ ಶಬ್ದಸಾರಾಯವನು ?
ಒಂದು ಮಾತೆನ್ನಬಹುದೆ ಶರಣಸಂಬಂಧವನು ?
ಕೂಡಲ ಸಂಗಮದೇವಾ
ನಂಬಿಗೆ 'ಓ' ಎಂದುದನೊಂದು ಮಾತೆನ್ನಬಹುದೆ ? || ೬೮೧

೧೫೭

ಭಕ್ತರೆ ಸಮರ್ಥರು; ಅಸಮರ್ಥರೆನಲುಂಟೆ ?
ಚೆನ್ನನೆತ್ತ, ಚೋಳನೆತ್ತ ?
ಚೆನ್ನನೊಡನುಂಡ ಶಿವ, ಅಹಾ ! ಅಯ್ಯಾ !
  ಚೆನ್ನ ಚೋಳನ ಮನೆಯ ಕಂಪಣಿಗನಯ್ಯಾ !
  ಕೂಡಲ ಸಂಗಮದೇವ ಭಕ್ತಲಂಪಟನಯ್ಯಾ ! || ೭೮೨ ||

೧೫೮

ನಿಸ್ಸೀಮುಗುಗ್ಗುಳವನಿಕ್ಕಿದನೊಬ್ಬ ಶರಣ :
  ' ಉಘೇ, ಚಾಂಗು ಭಲಾ ' ಎಂಬ ಹೊಗೆ ಗಗನವ ತೀವೆ
  ಓಹಿಲನ ಮೆಱೆದ ಸೌರಾಷ್ಟ್ರವೆಂಬ ಮಂಡಲದಲ್ಲಿ
  ಕೂಡಲ ಸಂಗಮದೇವ ಭಕ್ತವತ್ಸಲನಾಗಿ. || ೭೮೩ ||

೧೫೯

ಲಿಂಗವಶದಿಂದ ಬಂದ ನಡೆಗಳು, ಲಿಂಗವಶದಿಂದ ಬಂದ ನುಡಿಗಳು :
  ಲಿಂಗವಂತರು ತಾವು ಅಂಜಲೇಕೆ,
  ಲಿಂಗವಿರಿಸಿದಂತಿಪ್ಪುದಲ್ಲದೆ—
  ಕೂಡಲ ಸಂಗಮದೇವ ಭಕ್ತರಭಿಮಾನ ತನ್ನದೆಂಬನಾಗಿ ! || ೭೮೪ ||

೧೬೦

ಶಿವಭಕ್ತನಾಗಿ ತನ್ನ ಹಿಡಿದಹೆನೆಂದು ಹೋದರೆ
  ನುಗ್ಗುಮಾಡುವ, ನುಸಿಯ ಮಾಡುವ,
  ಮಣ್ಣು ಮಾಡುವ, ಮುಸಿಯ ಮಾಡುವ :
  ಕೂಡಲ ಸಂಗಮದೇವರ ನೆಱೆನಂಬಿದನಾದರೆ
  ಕಡೆಗೆ ತನ್ನಂತೆ ಮಾಡುವ. || ೭೮೫ ||

೧೬೧

ಅರೆವನಯ್ಯಾ ಸಣ್ಣವಹನ್ನಕ್ಕ, ಒರೆವನಯ್ಯಾ ಬಣ್ಣಗಾಣ್ಬನ್ನಕ್ಕ.
ಅರೆದರೆ ಸಣ್ಣವಾಗಿ ಒರೆದರೆ ಬಣ್ಣವಾದರೆ
  ಕೂಡಲ ಸಂಗಮದೇವನೊಲಿದು ಸಲಹುವನು. || ೭೮೬ ||

೧೬೨

ಅಂಜಿದರಾಗದು, ಅಳುಕಿದರಾಗದು, ವಜ್ರಪಂಜರದೊಳಗಿದ್ದರಾಗದು :
   ತಪ್ಪದುವೋ ಲಲಾಟಲಿಖಿತ !
   ಕಕ್ಕುಲತೆಗೆ ಬಂದರೆ ಆಗದು, ನೋಡಾ !
ಧೃತಿಗೆಟ್ಟು ಮನ ಧಾತುಗೆಟ್ಟರೆ ಅಪ್ಪುದು ತಪ್ಪದು,
   ಕೂಡಲ ಸಂಗಮದೇವಾ. || ೬೮೭ ||

೬೧೩

ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದರೆ
   ತಪ್ಪದು ನೋಡಯ್ಯಾ.
' ಎನಗಿನ್ನೆಂತೊ, ಎನಗಿನ್ನೆಂತೊ, ಎನಗಿನ್ನೆಂತೋ ' ಎಂದೆನಬೇಡ.
" ನಾಭೋಕ್ತಾ ಕ್ರಿಯತೇ ಕರ್ಮ " ಎಂಬ ಶ್ರುತಿ ತಪ್ಪದು,
   ಕೂಡಲ ಸಂಗಮದೇವಾ. || ೬೮೮ ||

೧೬೪

ಆಯುಷ್ಯ ತೀರಿದಲ್ಲದೆ ಮರಣವಿಲ್ಲ :
   ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ.
ಅಂಜಲದೇಕೊ ಲೋಕ ವಿಗುರ್ಬಣೆಗೆ,
   ಅಂಜಲದೇಕೊ, ಕೂಡಲ ಸಂಗಮದೇವಾ, ನಿಮ್ಮಾಳಾಗಿ ? || ೬೮೯ ||

೧೬೫

ಮನಕ್ಕೆ ಮನವೊಂದಾಗಿ, ಧನಕ್ಕೆ ಧನವೊಂದಾಗಿ
   ನಚ್ಚಿದ ಮಚ್ಚು ಅಚ್ಚೊತ್ತಿದಂತಿರಬೇಕು.
ಪ್ರಾಣಕ್ಕೆ ಪ್ರಾಣವೊಂದಾಗಿ, ಶುಭಸೂಚನೆಯೊಂದಾಗಿರದ
   ನಚ್ಚು ಮಚ್ಚು ಪಾರವೈದುವುದೆ ?
ಸಿರ ಹರಿದರೇನು, ಕರುಳು ಕುಪ್ಪಳಿಸಿದರೇನು ?
ಇಂತಪ್ಪ ಸಮಸ್ತವಸ್ತುವೆಲ್ಲವೂ ಹೋದರೇನು ?
ಚಿತ್ತ ಮನ ಬುದ್ಧಿಯೊಂದಾದ ಮಚ್ಚು ಬಿಚ್ಚಿ ಬೇಱಾಗದಿದ್ದರೆ
   ಮಚ್ಚುವ ನಮ್ಮ ಕೂಡಲ ಸಂಗಮದೇವ. || ೬೯೦ ||

## (೧೭) ಮಾಹೇಶ್ವರನ ಮಾಹೇಶ್ವರ ಸ್ಥಳ

೧

ಎನಿಸೆನಿಸೆಂದೊಡೆ ನಾ ಧೃತಿಗೆಡೆನಯ್ಯಾ;
ಎಲುದೋಱಿದರೆ ನರ ಹಱಿದರೆ ಕರುಳು ಕುಪ್ಪಳಿಸಿದರೆ
  ನಾ ಧೃತಿಗೆಡೆನಯ್ಯಾ.
ಸಿರ ಹಱಿದು ಅಟ್ಟೆ ನೆಲಕ್ಕೆ ಬಿದ್ದರೆ
  ನಾಲಗೆ 'ಕೂಡಲ ಸಂಗಾ, ಶರಣೆ' ನ್ನುತ್ತಿದ್ದೀತಯ್ಯಾ ! ||೬೯೧||

೨

ಒಣಗಿಸಿ ಎನ್ನ ಘಣಘಣಲನೆ ಮಾಡಿದರೆಯೂ
  ಹರಣವುಳ್ಳನ್ನಕ್ಕ ನಿಮ್ಮ ಚರಣವ ನೆನೆವುದ ಮಾಣೆ, ಮಾಣೆ;
  ಶರಣೆಂಬುದ ಮಾಣೆ, ಮಾಣೆ.
ಕೂಡಲ ಸಂಗಮದೇವಯ್ಯಾ, ಎನ್ನ ಹೆಣನ ಮೇಲೆ
  ಕಂಚಿಟ್ಟುಂಡರೆಯೂ ಮಾಣೆ, ಮಾಣೆ. ||೬೯೨||

೩

ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದ ನೆನೆದೊಡೆ ತಲೆದಂಡ, ತಲೆದಂಡ!
  ಹುಸಿಯಾದರೆ, ದೇವ, ತಲೆದಂಡ, ತಲೆದಂಡ !
ಕೂಡಲ ಸಂಗಮದೇವಾ, ನೀವಲ್ಲದೆ ಅನ್ಯವ ನೆನೆದೊಡೆ
  ತಲೆದಂಡ, ತಲೆದಂಡ ! ||೬೯೩||

೪

ಸುಖ ಬಂದರೆ ಪುಣ್ಯದ ಫಲವೆನ್ನೆನು,
  ದುಃಖ ಬಂದರೆ ಪಾಪದ ಫಲವೆನ್ನೆನು;
  ನೀ ಮಾಡಿದೊಡಾಯಿತ್ತೆಂದೆನ್ನೆನು,
  ಕರ್ಮಕ್ಕೆ ಕರ್ತನವೆ ಕಡೆಯೆಂದೆನ್ನೆನು,
  ಉದಾಸೀನವಿಡಿದು ಶರಣೆನ್ನೆನು.
ಕೂಡಲ ಸಂಗಮದೇವಾ, ನೀ ಮಾಡಿದುಪದೇಶವು ಎನಗೀ ಪರಿಯಲಿ :
  ಸಂಸಾರದ ಸವೆಯ ಬಳಸುವೆನು. ||೬೯೪||

೫

ಕಾಯದ ಕಳವಳಕ್ಕಂಜಿ ' ಕಾಯಯ್ಯಾ ' ಎನ್ನೆನು;
ಜೀವನೋಪಾಯಕ್ಕಂಜಿ, ' ಈಯಯ್ಯಾ ' ಎನ್ನೆನು.
" ಯದ್‌ಭಾವಂ ತದ್‌ಭವತಿ " : ಉರಿ ಬರಲಿ, ಸಿರಿ ಬರಲಿ—
' ಬೇಕು, ಬೇಡೆ ' ನ್ನೆನಯ್ಯಾ.
ಆ ನಿಮ್ಮ ಹಾರೆನು, ಮಾನವರ ಬೇಡೆನು;
ಆಣೆ, ನಿಮ್ಮಾಣೆ, ಕೂಡಲ ಸಂಗಮದೇವಾ. || ೬೯೫ ||

೬

ನಾಳೆ ಬಪ್ಪುದು ನಮಗಿಂದೆ ಬರಲಿ;
ಇಂದು ಬಪ್ಪುದು ನಮಗೀಗಲೆ ಬರಲಿ;
ಇದಕಾರಂಜುವರು, ಇದಕಾರಳುಕುವರು ?
" ಜಾತಸ್ಯ ಮರಣಂ ಧ್ರುವಂ " ಎಂದುದಾಗಿ,
ನಮ್ಮ ಕೂಡಲ ಸಂಗಮದೇವರು ಬರೆದ ಬರೆಹವ ತಪ್ಪಿಸುವರೆ
ಹರಿಬ್ರಹ್ಮಾದಿಗಳಿಗಳವಲ್ಲಾ ! || ೬೯೬ ||

೭

ಕಳಹೋದರೆ ಕನ್ನದುಳಿಯ ಹಿಡಿವೆ :
ಬಂದಿವಿಡಿದರೆ ನಿಮ್ಮಿಂದ ಮುಂದೆ ನಡೆವೆ;
ಮನಭೀತಿ–ಮನಶಂಕೆಗೊಂಡೆನಾದರೆ
ನಿಮ್ಮಾಣೆ, ನಿಮ್ಮ ಪುರಾತರಾಣೆ !
ಆಳ್ದರ ನಡೆ ಸದಾಚಾರವೆನ್ನದಿದ್ದರೆ,
ಕಟ್ಟಾಳು ಶಿಷ್ಟತನಕ್ಕೆ ಹೋಹ ಕಷ್ಟವ ನೋಡಾ,
ಕೂಡಲ ಸಂಗಮದೇವಾ. || ೬೯೭ ||

೮

ಜೋಳವಾಳಿಯಾನಲ್ಲ, ವೇಳೆವಾಳಿಯವ ನಾನಯ್ಯಾ :
ಹಾಳುಗೆಟ್ಟೋಡುವ ಆಳು ನಾನಲ್ಲಯ್ಯಾ;
ಕೇಳು, ಕೂಡಲ ಸಂಗಮದೇವಾ,
ಮರಣವೆ ಮಹಾನವಮಿ ! || ೬೯೮ ||

೯

ಕರ್ಮವೆಂಬ ಅಂಕದೊಡನೆ ತೊಡರಿದೆ;
ಬಿನ್ನಪವನವಧಾರು, ನಿಮ್ಮಾಳಿನ ಭಾಷೆಯು :
' ಕಡೆಗಳಕ್ಕೆ ನೂಂಕುವೆ, ಕೆಡಹುವೆನ್ನಂಕವ,
ಕರೆದರೋ ಎನಿಸಿದರೆ ನಿಮ್ಮಾಳಲ್ಲಾ '.
' ಶಿವಶರಣೆ 'ಂಬ ದಂಡೆಯ ಹೂಡಿ
ಗಣಮೇಳಾಪವೆಂಬಲಗಿನಿಂದಿಱುವೆ,
ಕೂಡಲ ಸಂಗಮದೇವಾ. || ೯೯ ||

೧೦

ಕಟ್ಟಿದೆ ಒಱೆಯು, ಬಿಟ್ಟೆ ಜನ್ನಿಗೆಯರ,
ಮುಟ್ಟೆ ಬಂದಿಱಿದರೆ ಓಸರಿಸುವನಲ್ಲ :
ಓಡದಿರು, ಓಡದಿರು !—
ನಿಮ್ಮ ಶರಣರ ಮನೆಯ ಬಿದುರಿನ ಅಂಕಕಾಱ—
ಓಡದಿರು ಓಡದಿರು, ಎಲೆ ಎಲೆ ದೇವಾ,
ಎಲೆ ಎಲೆ ಸ್ವಾಮೀ, ಎಲೆ ಎಲೆ ಹಂದೇ !
ಕೂಡಲ ಸಂಗಮದೇವಾ ! || ೨೦೦ ||

೧೧

ಗರುಡಿಯ ಕಟ್ಟಿ, ಅಱುವತ್ತುನಾಲ್ಕು ಕೋಲ ಭ್ಯಾಸವ ಮಾಡಿದೆನಯ್ಯಾ :
ಇಱಿವ ಘಾಯ, ಕಂಡೆಯ ಭೇದವಿನ್ನೂ ತಿಳಿಯದು !
ಪ್ರತಿಗರುಡಿಕಾಱ ಬಿರುದ ಪಾಡಿಂಗೆ ಒದಗಲು
ವೀರಪಟ್ಟೆಯ ಕಟ್ಟಿ ತಿಗುರನೇಱಿಸಿಕೊಂಬೆ.
ಗುರುಕಳನೇಱಿ ಕಠಾರಿಯು ಕೋಂಡಲ್ಲಿ ' ಹೋಯಿತ್ತು ಗಳೆ ' ಯೆಂದರೆ–
ಎನ್ನ ನಿನ್ನಲ್ಲಿ ನೋಡು, ಕೂಡಲ ಸಂಗಮದೇವಾ ! || ೨೦೧ ||

೧೨

ಶರಣರೊಡನೆ ಶ್ರವವ ಮಾಡಿ ಮಾಱುಗೋಲ ಬಿಡುವೆನಯ್ಯಾ :
ತಾಗಲಿ, ತಪ್ಪಲಿ ' ಗೆಲವೆನ್ನದೆ 'ಂಬೆನಯ್ಯಾ.
ಕಳನಿಂದ ಕಡೆಗಳಕ್ಕೆ ಓಡುವೆ, ಕೂಡಲ ಸಂಗಯ್ಯಾ || ೨೦೨ ||

೧೩

ಎಲೆ ಗಂಡುಗೂಸೆ ನೀ ಕೇಳಾ, ನಿನಗೊಬ್ಬಗಂಡುಟ್ಟಿ ಗಂಡುಡುಗೆಯ.
ಮತ್ತೊಮ್ಮೆಯಾನು ಗಂಡಪ್ಪೆನಯ್ಯಾ,
ಮತ್ತೊಮ್ಮೆಯಾನು ಹೆಣ್ಣಪ್ಪೆನಯ್ಯಾ :
ಕೂಡಲ ಸಂಗಮದೇವಾ, ನಿನಗೆ ವೀರನಪ್ಪೆ,
ನಿಮ್ಮ ಶರಣರಿಗೆ ವಧುವಪ್ಪೆ ! || ೨೦೩ ||

---

## (೧೮) ಮಾಹೇಶ್ವರನ ಭಕ್ತಸ್ಥಳ

೧

ಕಟ್ಟುವೆನುಪ್ಪರಗುಡಿಯ ಜಗವಱಿಯೆ;
ಮಾಡುವೆನೆನ್ನ ಕಾಯ ಕೆಡೆವನ್ನಕ್ಕ.
ಬೇಡುವುದೆನ್ನ ತನುಮನಧನವ,
ಬೇಡಲಾಱದ ಹಂದೇ, ನೀ, ಕೇಳಾ :
ಈ ಬಿರುದು ಸಂದಿತ್ತು, ಕೂಡಲ ಸಂಗಮದೇವಾ. ||೨೦೪ ||

೨

ಹುಟ್ಟುತ ದ್ರವ್ಯವನಱಿಯದವಂಗೆ ಐಶ್ವರ್ಯವಂತ ಮಗನಾದರೆ
ಲಕ್ಷಸಂಖ್ಯೆಯ ಹಿರಣ್ಯವ ತಂದು ಸಂತೋಷ ಪಡಿಸುವಂತೆ,
ಕಾಳಗದ ಮುಖವಾವುದೆಂದಱಿಯದ ಹಂದೆನೃಪಂಗೆ
ಒಬ್ಬ ಕ್ಷತ್ರಿಯ ಕುಮಾರ ಹುಟ್ಟಿ ಕಿಗ್ಗಡಲ ರಕ್ತದ ಹೊನಲಲಿ
ಕಡಿದು ಮುಳುಗಾಡುವ ಕೊಳಗುಳವ ಕಂಡು ಪರಿಣಾಮಿಸುವಂತೆ,
ಆನು ಪರಿಣಾಮಿಸುವೆನಯ್ಯಾ, ಕೂಡಲ ಸಂಗಮದೇವಾ,
ನೀವು ಬಂದೆನ್ನ ಬೇಡಿದರೆ ! || ೨೦೫ ||

೩

ಅರ್ಥವನರ್ಥವ ಮಾಡಿ ಕೋಳಾಹಳಂಗೆಯ್ಯುತ್ತಿರಲಿ,
ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿಯುತ್ತಿರಲಿ,
ಮುಟ್ಟುವ ಸ್ತ್ರೀಯ ಕಣ್ಣಮುಂದೆ ಅಭಿಮಾನಗೊಂಡು ನೆರೆಯುತ್ತಿರಲಿ.
—ಇಂತೀ ತ್ರಿವಿಧವು ಹೊರಗಣವು—
ಇನ್ನೆನ್ನಂಗದ ಮೇಲೆ ಬರಲಿ, ಹಿಡಿಖಂಡಂಗೊಯ್ಯಲಿ,
ಇಕ್ಕುವ ಸೂಲ ಪ್ರಾಪ್ತಿಸಲಿ,
ಹಾಕೊಂದೆಸೆ ಹನ್ನೊಂದೆಸೆಯಾಗಿ ಮಾಡುತ್ತಿರಲಿ;
ಮತ್ತೆಯೂ ಲಿಂಗಾರಾಧನೆಯ ಮಾಡುವೆ,
ಜಂಗಮಾರಾಧನೆಯ ಮಾಡುವೆ, ಪ್ರಸಾದಕ್ಕೆ ತಪ್ಪೆನು !
ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದರೆ
ನೀನಂದೆ ಮೂಗಕೊಯಿ, ಕೂಡಲ ಸಂಗಮದೇವಾ ! || ೭೦೬ ||

೪

ತನುವ ಬೇಡಿದಡೀವೆ, ಮನವ ಬೇಡಿದಡೀವೆ,
ಧನವ ಬೇಡಿದಡೀವೆ, ಬೇಡು, ಬೇಡೆಲೆ ಹಂದೇ !
ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ;
ಕೂಡಲ ಸಂಗಮದೇವಾ, ನಿಮಗಿತ್ತು ಶುದ್ಧನಾಗಿಪ್ಪೆ
ನಿಮ್ಮ ಪುರಾತರ ಮನೆಯಲ್ಲಿ. || ೭೦೭ ||

೫

ನಾನು ಆರಂಬವ ಮಾಡುವೆನಯ್ಯಾ ಗುರುಪೂಜೆಗೆಂದು,
ನಾನು ಬೆವಹಾರ ಮಾಡುವೆನಯ್ಯಾ ಲಿಂಗಾರ್ಚನೆಗೆಂದು,
ನಾನು ಪರಸೇವೆಯ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು;
ನಾನಾವಾವ ಕರ್ಮಂಗಳ ಮಾಡಿದರೆಯೂ
ಆ ಕರ್ಮಫಲಭೋಗವ ನೀ ಕೊಡುವೆಯೆಂಬುದ ನಾನು ಬಲ್ಲೆನು.
ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರೀಯ ಮಾಡೆನು;
ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ,
ಕೂಡಲ ಸಂಗಮದೇವಾ. || ೭೦೮ ||

೬

ಹೊತ್ತಾಱಿ ಎದ್ದು ಕಣ್ಣ ಹೊಸೆಯುತ್ತ
‘ ಎನ್ನೊಡಲಿಂಗೆ, ಎನ್ನೊಡವೆಗೆ, ಎನ್ನ ಮಡದಿ-ಮಕ್ಕಳಿಗೆ ’ಂದು
ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ !
‘ ಆಸನೇ ಶಯನೇ ಯಾನೇ । ಸಂಪರ್ಕೇ ಸಹಭೋಜನೇ
ಸಂಚರಂತಿ ಮಹಾಘೋರೇ । ನರಕೇ ಕಾಲಮಕ್ಷಯಂ
ಎಂಬ ಶ್ರುತಿಯ ‘ ಬಸವಣ್ಣನೋದುವನು ’ ಎಂಬರು.
‘ ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳಿರ್ದು
ಓಲೈಸಿಹನೆ ’ಂದು ನುಡಿವರಯ್ಯಾ ಪ್ರಮಥರು.
ಕೊಡುವೆನುತ್ತರವನವರಿಗೆ, ಕೊಡಲ [ವ್ಮುವೆ] :
ಹೊಲೆಯ ಹೊಲೆಯರ ಮನೆಯ ಹೊಕ್ಕು,
ಸಲೆ ಕೈಕೂಲಿಯ ಮಾಡಿಯಾದರೆಯೂ
ನಿಮ್ಮ ನಿಲವಿಂಗೆ ಕುದಿವೆನಲ್ಲದೆ,
ಎನ್ನೊಡಲವಸರಕ್ಕೆ ಕುದಿದೆನಾದರೆ
ತಲೆ ದಂಡ ! ಕೂಡಲ ಸಂಗಮದೇವಾ. ॥ ೭೦೯ ॥

೭

ದೇವ, ದೇವಾ, ಬಿನ್ನಪವನವಧಾರು :
ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರಾದವರನೆಲ್ಲರನೊಂದೇ ಎಂಬೆ :
ಹಾರುವ ಮೊದಲು ಶ್ವಪಚ ಕಡೆಯಾಗಿ
ಭವಿಯಾದವರನೊಂದೇ ಎಂಬೆ;
ಈ ಹೀಗೆಂದು ನಂಬುವುದೆನ್ನ ಮನವು.
ಈ ನುಡಿದ ನುಡಿಯೊಳಗೆ ಎಳ್ಳ ಮೊನೆಯಷ್ಟು ಸಂದೇಹವುಳ್ಳರೆ,
ಹಲುದೋಱಿ ಮೂಗ ಕೊಯಿ, ಕೂಡಲ ಸಂಗಮದೇವಾ. ॥ ೭೧೦ ॥

೮

ಒಲ್ಲೆನಯ್ಯಾ, ಒಲ್ಲೆನಯ್ಯಾ, ನಿಮ್ಮವರಲ್ಲದವರ,
ಒಲ್ಲೆನಯ್ಯಾ, ಒಲ್ಲೆನಯ್ಯಾ, ಜಗವೆಲ್ಲವಱಿಯಲಿಕೆ,

ಒಲ್ಲೆನಯ್ಯಾ, ಒಲ್ಲೆನಯ್ಯಾ, ನೀ ಮುನಿದರೆ ಮುನಿ,
ಕೂಡಲ ಸಂಗಮದೇವಾ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ ! ||೨೧೧||

೯

ಆದಿಯಲಾಗಲಿ, ವೇದದಲಾಗಲಿ, ಶಾಸ್ತ್ರದಲಾಗಲಿ, ಸಮಯದಲಾಗಲಿ :
'ಎನ್ನವರೆನ್ನವರೆನ್ನವರೆ' ನ್ನೆನು !
'ಎನ್ನವರೆ'ಂದರೆ, ಸಂಗಾ, ನಿಮ್ಮಲ್ಲಿಗೆ ದೂರ !
ಎನ್ನವರಾದರೆ ಜನ್ನಕ್ಕೆ ನಡೆವರೆ ?
ಎನ್ನವರಲ್ಲ, ಕೂಡಲ ಸಂಗಾ, ನಿಮ್ಮಾಣೆ ! || ೨೧೨ ||

೧೦

ಅಣ್ಣ, ತಮ್ಮ, ಹೆತ್ತಣ್ಣ, ಗೋತ್ರವಾದರೇನು,
ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯಾ.
ನಂಟು-ಭಕ್ತಿ ನಾಯಕನರಕ, ಕೂಡಲ ಸಂಗಮದೇವಾ ! || ೨೧೩ ||

೧೧

ಒಡೆಯರಿಲ್ಲದ ಮನೆಯ ತುಡುಗುಣಿ ನಾಯಿ ಹೊಗುವಂತೆ
ನೀವಿಲ್ಲದವರ ಮನೆಯ ಹೊಗೆನು, ಸಂಗಯ್ಯಾ.
ಶ್ವಪಚೋಪಿಗಳಾಗಲಿ, ಕೂಡಲ ಸಂಗಯ್ಯಾ,
ನೀವಿದ್ದವನೇ ಕುಲಜನು. || ೨೧೪ ||

೧೨

ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ
ವೃಥಾಯು ಒಱೆದೋಱೆ ಹೋಹ ಕೆಡುಕ ಹಾರುವ ನಾನಲ್ಲ !
ಹಾರುವೆನಯ್ಯಾ ಭಕ್ತರ ಬರವ ಗುಡಿಗಟ್ಟಿ.
ಹಾರುವೆನಯ್ಯಾ ಶರಣರ ಬರವ ಗುಡಿಗಟ್ಟಿ,
ಕೂಡಲ ಸಂಗಮದೇವನು ವಿಪ್ರಕರ್ಮವ ಬಿಡಿಸಿ,
ಅಶುದ್ಧನ ಶುದ್ಧನ ಮಾಡಿದನಾಗಿ ! || ೨೧೫ ||

೧೩

ವೇದಕ್ಕೆ ಒಱೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ;
ತರ್ಕದ ಬೆನ್ನ ಬಾರನೆತ್ತುವೆ,

ಆಗಮದ ಮೂಗ ಕೊಯಿವೆ, ನೋಡಯ್ಯಾ.
ಮಹಾದಾನಿ, ಕೂಡಲ ಸಂಗಮದೇವಾ,
ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯಾ. || ೭೧೬ ||

೧೪

ಆವ ಕುಲವಾದರೇನು ? ಶಿವಲಿಂಗವಿದ್ದವನೆ ಕುಲಜನು.
ಕುಲವನರಸುವರೆ ಶರಣರಲ್ಲಿ ಜಾತಿಸಂಕರನಾದ ಬಳಿಕ ?
**ಶಿವೇ ಜಾತ ಕುಲೇ ಧರ್ಮ । ಪೂರ್ವಜನ್ಮವಿವರ್ಜಿತಃ**
**ಉಮಾ ಮಾತಾ ಪಿತಾ ರುದ್ರಃ । ಈಶ್ವರಃ ಕುಲಮೇವ ಚ**
ಎಂಬುದಾಗಿ, ಒಕ್ಕುದ ಕೊಂಬೆನವರಲ್ಲಿ, ಕೂಸ ಕೊಡುವೆ,
ಕೂಡಲ ಸಂಗಮದೇವಾ, ನಂಬುವೆ ನಿಮ್ಮ ಶರಣರನು. || ೭೧೭ ||

೧೫

ಕಳ್ಳ ಬಂದಿಕಾಱ, ಹಾವಡಿಗ, ಹಾದರಿಗ,
ಬಂಟನೋಲೆಯಕಾಱನೆಂದೆನಾದರೆ;—
ನೀ ಮುಂತಾಗಿ ಬಂದ ಭಕ್ತರ ನೀಯೆನ್ನದಿದ್ದರೆ,
ಅದೇ ದ್ರೋಹ.
ನಡೆ ನುಡಿ ಹುಸಿಯುಂಟಾದರೆ
ಕೂಡಲ ಸಂಗನ ತೋಱಿದ ಚೆನ್ನಬಸವಣ್ಣನಾಣೆ ! || ೭೧೮ ||

೧೬

ಎಡದ ಕೈಯಲ್ಲಿ ಕತ್ತಿ, ಒಲದ ಕೈಯಲಿ ಮಾಂಸ
ಬಾಯಲ್ಲಿ ಸುರೆಯ ಗಡಿಗೆ—
ಕೊರಳಲಿ ದೇವರಿರಲಿ, ಅವರ ಲಿಂಗನೆಂಬೆ, ಸಂಗನೆಂಬೆ,
ಕೂಡಲ ಸಂಗಮದೇವಾ, ಅವರ ಮುಖಲಿಂಗಿಗಳೆಂಬೆನು ! ||೭೧೯||

೧೭

ಗುಮ್ಮಡಿಯಂತಪ್ಪ ತಾಯಿ ನೋಡೆನಗೆ,
ಕಲಕೇತನಂತಪ್ಪ ತಂದೆ ನೋಡೆನಗೆ,
ಮೋಟನಂತಪ್ಪ ಗಂಡ ನೋಡೆನಗೆ !
ಮರಗಾಲಲಟ್ಟೆ ಸದೆದು ನೋಡಯ್ಯ :

ಇಂದೆನ್ನ ಒಳತನ ಹೋದರೆ ಹೋಗಲಿ
ಮರಗಾಲ ಬಿಟ್ಟೆನಾದರೆ, ಕೂಡಲ ಸಂಗಾ, ನಿಮ್ಮಾಣೆ ! ||೭೨೦||

೧೮

ತನುವ ಬಂದಲೆವರಯ್ಯಾ ಎನ್ನ, ಮನವ ಬಂದು ನೋಡುವರಯ್ಯಾ,
ಎನ್ನ ಧನವ ಬಂದು ಸೂಱೆಗೊಂಬರಯ್ಯಾ
ಜಂಗಮವನರತ !
ಕೂಡಲ ಸಂಗಮದೇವಾ,
ನಿಮ್ಮ ಬಯ್ಕೆಯ ಭಂಡಾರಕ್ಕೆ ನಾನು ಶುದ್ಧನಯ್ಯಾ. || ೭೨೧ ||

೧೯

'ಒಡೆಯರೊಡವೆಯ ಕೊಂಡರೆ ಕಳ್ಳಂಗಳಲಾಯಿತ್ತೆ'ಂಬ
ಗಾದೆ ಎನಗಿಲ್ಲಯ್ಯಾ.
ಇಂದೆನ್ನ ವಧುವ, ನಾಳೆನ್ನ ಧನವ, ನಾಳಿದ್ದೆನ್ನ ತನುವ ಬೇಡರೇಕಯ್ಯಾ?
ಕೂಡಲ ಸಂಗಮದೇವಾ, ಆನು ಮಾಡಿದುದಲ್ಲದೆ
ಬಯಸಿದ ಬಯಿಗ ಸಲುವುದೆ, ಅಯ್ಯಾ ? || ೭೨೨ ||

೨೦

ಕಲಿ ಕರುಳ ತಕ್ಕೈಗೈಸಿ ಹಱಿಯ ಬಲ್ಲನಲ್ಲದೆ---
ಸಾಯ ಕಾದಿಸುವರೆ, ಎಡೆಗೊಂಡಸಿಕ್ಕುವರೆ
ದಾತಾರನಧೀನವಲ್ಲದೆ---
ಕೂಡಲ ಸಂಗಮದೇವಾ ನೀ ಮಾಡಿದಂತಹುದಯ್ಯಾ.
ತನುಮನಧನದಲ್ಲಿ ನಾನು ವಂಚನೆಯ ಬಯಸಿದರೆಂತಹುದಯ್ಯಾ ?
|| ೭೨೩ ||

೨೧

ಬಾಲಾಭ್ಯಾಸವ ಮಾಡಹೋದರೆ ಎನ್ನ ಸುರಿಗೆ ಎನ್ನನಟ್ಟಿತ್ತು :
ಎಂತಯ್ಯಾ ಕಡಿಯೊಡನೆ ಶ್ರವವ ಮಾಡುವೆನು ?
ರಾಯ ರಾಜಗುರು ಜಗದ ಜನ್ನಾಣೆಯ ತೊಡಕ ಬಿಡಿಸಬಾರದು :
ಸರಿಸದ ಮೇಲೆ ಹಿಡಿಯ ಹೋದರೆ
ಚದುರಂಗದ ಮೇಲೆ ಮುಸಿಯ ತೋಱಿದ
ಕೂಡಲ ಸಂಗಮದೇವ. ||೭೨೪||

೨೨

ಸಮಚಿತ್ತವೆಂಬ ನೇಮದ ಹಲಗೆಯ ಹಿಡಿದು
ಶಿವಚಿತ್ತವೆಂಬ ಕೂರಲಗ ಕೊಂಡು
ಶರಣಾರ್ಥಿಯೆಂಬ ಶ್ರವವ ಕಲಿತರೆ
ಆಳುತನಕ್ಕೆ ದೇಸಿಯಪ್ಪೆ, ನೋಡಾ.
ಮಾಹಿಂಕ ಜಂಗಮ ಮನೆಗೆ ಬಂದಲ್ಲಿ ಇದಿರೆದ್ದು ನಡೆವುದು :
ಕೂಡಲ ಸಂಗಮದೇವನೊಲಿಸುವೊಡಿದು ಚಿಹ್ನ ! || ೭೨೫ ||

೨೩

ಅಟ್ಟಾಟಿಕೆಯ ಮಾತನಾಡಲದೇಕೋ ?
ಮುಟ್ಟಿ ಬಂದುದಕ್ಕಂಜಲದೇಕೊ ?
ಕಾದಿದಲ್ಲದೆ ಮಾಣೆನು : ಓಡಿದರೆ ಭಂಗ ಹಿಂಗದಾಗಿ,
ಕೂಡಲ ಸಂಗಮದೇವಾ, ಎನ್ನ ಭಂಗ ನಿಮ್ಮದಾಗಿ ! || ೭೨೬ ||

೨೪

ಲಿಂಗಕ್ಕಲ್ಲದೆ ಮಾಡೆನೀ ಮನವನು,
ಜಂಗಮಕ್ಕಲ್ಲದೆ ಮಾಡೆನೀ ಧನವನು,
ಪ್ರಸಾದಕ್ಕಲ್ಲದೆ ಮಾಡೆನೀ ತನುವನು.
'ಲಿಂಗ ಜಂಗಮದ ಪ್ರಸಾದಕ್ಕಲ್ಲದೆ ಬಾಯ್ದೆಱೆಯೆನೆ'ಂಬುದೆನ್ನ ಭಾಷೆ.
ಅನರ್ಪಿತವಾದರೆ ತಪ್ಪೆನ್ನದು,
ಮೂಗ ಕೊಯಿ, ಕೂಡಲ ಸಂಗಮದೇವಾ. || ೭೨೭ ||

———

## (೧೯) ಮಾಹೇಶ್ವರನ ಪ್ರಸಾದಿಸ್ಥಳ

೧

ಅಂಕ ಕಂಡಾ : ಕೋಲಾಸೆ ಮತ್ತೇಕಯ್ಯಾ ?
ಲೆಂಕ ಕಂಡಾ : ಪ್ರಾಣದಾಸೆ ಮತ್ತೇಕಯ್ಯಾ ?
ಭಕ್ತ ಕಂಡಾ : ತನುಮನಧನದಾಸೆ ಮತ್ತೇಕಯ್ಯಾ ?
ನಿಮ್ಮ ಅಂಕೆಗೆ ಝುಂಕೆಗೆ ಶಂಕಿಸಿದೆನಾದರೆ
ಎನ್ನ ಲೆಂಕತನಕ್ಕೆ ಹಾನಿ, ಕೂಡಲ ಸಂಗಮದೇವಾ ! ‖ ೭೨೮ ‖

೨

ನೀನಿರಿಸಿದ ಮನದಲ್ಲಿ ನಾನಂಜೆನಯ್ಯಾ :
ಮನವು ಮಹಾಘನಕ್ಕೆ ಶರಣಗತಿವೊಕ್ಕುದಾಗಿ.
ನೀಸಿರಿಸಿದ ಧನದಲ್ಲಿ ನಾನಂಜೆನಯ್ಯ :
ಧನವು ಸತಿ ಸುತ ಮಾತಾಪಿತರಿಗೆ ಹೋಗದಾಗಿ.
ನೀನಿರಿಸಿದ ತನುವಿನಲ್ಲಿ ನಾನಂಜೆನಯ್ಯಾ :
ತನುವು ಸರ್ವಾರ್ಪಿತದಲ್ಲಿ ನಿಯತಪ್ರಸಾದಭೋಗಿಯಾಗಿ.
ಇದು ಕಾರಣ, ವೀರಧೀರಸಮಗ್ರಾಹಕನಾಗಿ,
ನಿಮಗಾನಂಜೆ, ಕೂಡಲ ಸಂಗಮದೇವಾ ! ‖ ೭೨೯ ‖

೩

ಹಲ್ಲು ಹತ್ತಿ ನಾಲಗೆ ಹೊರಳದಿದ್ದಲ್ಲಿ
ಮನವೆರಡಾದರೆ ಆಣೆ, ನಿಮ್ಮಾಣೆ !
ಮಾಡುವ ನೇಮಕ್ಕೆ ಫಲವಿಲ್ಲದಿದ್ದರೆ ಆಣೆ, ನಿಮ್ಮಾಣೆ !
ಕೂಡಲ ಸಂಗಮದೇವ ಎನ್ನ ಮನವನೋಡಲೆಂದಟ್ಟದರೆ
ಪ್ರಸಾದವನಲ್ಲದೆ ಕೊಂಡರೆ ಆಣೆ, ನಿಮ್ಮಾಣೆ ! ‖೭೩೦‖

೪

ಹೊಕ್ಕಲ್ಲಿ ಹೊಕ್ಕು ನಿಮ್ಮೊಕ್ಕುದನುಂಬವನ ಕುಲವೇನೊ ?
ದೇವ, ನೀನೊಲಿದವನ, ಸ್ವಾಮೀ, ನೀ ಹಿಡಿದವನ ಕುಲವೇನೋ ?
ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ ನಿಮ್ಮಿಂದಧಿಕ !
ಕೂಡಲ ಸಂಗಮದೇವಾ ‖ ೭೩೧ ‖

೫

ಹುಟ್ಟಿದ ಮಕ್ಕಳಿಲ್ಲಾ ಅರ್ಥಪ್ರಾಣಾಭಿಮಾನಕ್ಕೆ
ಒಡೆಯರಾದ ಪರಿಯ ನೋಡಾ :
ಅಟ್ಟಡಿಗೆಯ ವಿಷವನು ನಿಮಗೆ ಕೊಟ್ಟಲ್ಲದೆ ಉಣ್ಣೆನೆಂಬ ಭಾಷೆ !
ಕೂಡಲ ಸಂಗಮದೇವಯ್ಯಾ, ನಿನಗೆಂದಟ್ಟಡಿಗೆಯ
ನೀಡ ಕಲಿಸಿದಾತ ಕೆಂಬಾವಿಯ ಭೋಗಯ್ಯಾ. || ೭೩೨ ||

೬

ಅಂಗದ ಮೇಲಣ ಲಿಂಗವ ಹಿಂಗಿ ಬಂದ ಸುಖವನಾರಿಗರ್ಪಿಸುವೆ ?
ಹಿಂಗಲಾಗದು ಭಕ್ತಿಪಥಕ್ಕೆ ಸಲ್ಲದಾಗಿ.
ಕೂಡಲ ಸಂಗಮದೇವರ ಹಿಂಗಿ ನುಂಗಿದುಗುಳು ಕಿಲ್ಬಿಷ ! || ೭೩೩ ||

೭

ಬತ್ತೀಸಾಯುಧದಲ್ಲಿ ಅಭ್ಯಾಸವ ಮಾಡಿದರೇನು,
ಹಗೆಯ ಕೊಲುವರೆ ಒಂದಲಗು ಸಾಲದೆ ?
ಲಿಂಗವ ಗೆಲುವರೆ ‘ ಶರಣಸತಿ ಲಿಂಗಪತಿ ’ ಎಂಬುದೊಂದಲಗು ಸಾಲದೆ?
ಎನಗೆ ನಿನಗೆ ಜಂಗಮಪ್ರಸಾದವೆಂಬಲಗು ಸಾಲದೆ
ಕೂಡಲ ಸಂಗಮದೇವಾ ?

---

## (೨೦) ಮಾಹೇಶ್ವರನ ಪ್ರಾಣಲಿಂಗಸ್ಥಳ

೧

ಕೊಲ್ಲೆನಯ್ಯಾ ಪ್ರಾಣಿಗಳ, ಮೆಲ್ಲೆನಯ್ಯಾ ಬಾಯಿಚ್ಛೆಗೆ,
ಒಲ್ಲೆನಯ್ಯಾ ಪರಸತಿಯರ ಸಂಗವ :
ಬಲ್ಲೆನಯ್ಯಾ ಮುಂದೆ ತೊಡಕುಂಟೆಂಬುದ !
ಬಳ್ಳದ ಬಾಯಂತೆ ಒಂದೇ ಮನವ ಮಾಡಿ
ನಿಲ್ಲೆಂದು ನಿಲ್ಲಿಸಯ್ಯಾ, ಕೂಡಲ ಸಂಗಮದೇವಾ. || ೭೩೪ ||

೨

ಆನೆ ಅಂಕುಶಕ್ಕಂಜುವುದೆ, ಅಯ್ಯಾ,
ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೆ ?
ಆನೀ ಬಿಜ್ಜಳಂಗಂಜುವೆನೆ, ಅಯ್ಯಾ,
ಕೂಡಲ ಸಂಗಮದೇವಾ,
ನೀನು ಸರ್ವಜೀವ ದಯಾಪಾರಿಯಾದ ಕಾರಣ
ನಿನಗಂಜುವೆನಲ್ಲದೆ ? || ೭೩೬ ||

೩

ಬಂದಹೆನೆಂದು ಬಾರದೆಯಿದ್ದರೆ, ಬಟ್ಟೆಗಳ ನೋಡುತ್ತ ಇದ್ದೇನಯ್ಯಾ.
ಇನ್ನಾರನಟ್ಟುವೆ, ಇನ್ನಾರ ಪಾದವ ಹಿಡಿವೆನಯ್ಯಾ ?
ಕೂಡಲ ಸಂಗಮನ ಶರಣರು ಬಾರದಿದ್ದರೆ
ಅಟ್ಟುವೆನೆನ್ನ ಪ್ರಾಣವನು ! || ೭೩೭ ||

---

## (೨೧) ಮಾಹೇಶ್ವರನ ಶರಣಸ್ಥಳ

೧

ಅರಸನು ಮಂಚಕ್ಕೆ ಬರಿಸಿ ಎನ್ನ ಬೆರಸಿದ ಬಳಿಕ
ಆನಂಜುವಳೆ ? ಆನು ಸಿರಿಯಕ್ಕನೇ :
ಪರುಷ ಮುಟ್ಟಿದ ಬಳಿಕ ಲೋಹವೇ ?
ಕೂಡಲ ಸಂಗಮದೇವ ಎನ್ನನೊಲ್ಲದೊಡಾನು ಬದುಕುವೆನೆ ? || ೭೩೮ ||

೨

ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಮಾಣೆ : ಗರುವತನವೆ ?
ದಾಸನ ವಸ್ತ್ರವನುಡುವುದೊಂದು ಗರುವತನವೆ !
ಸಿರಿಯಾಳನ ಮಗನ ಬೇಡುವುದೊಂದು ಗರುವತನವೆ !
ಕೋಡಗನ ಹುಲ್ಲಲಿ ಮುಸುಕಿದಂತೆ
ಕೂಡಲ ಸಂಗಮದೇವಾ, ನಿಮ್ಮ ಪರಿ ! || ೭೩೯ ||

೩

ಸಿರಿಯಾಳನ ಮಗನ ಬಾಣಸವ ಮಾಡಿಸಿ ಉಣಲೊಲ್ಲದೆ ಕಾಡಿದೆ,
ಚೋಳನ ಮನೆಯಲ್ಲುಣಲೊಲ್ಲದೆ, ಚೆನ್ನನ ಮನೆಯಲುಂಡೆ :
ಒಬ್ಬರಿಗೊಂದು ಪರಿಯ ಮಾಡಿದೆ, ಕೂಡಲ ಸಂಗಮದೇವಾ !

|| ೭೪೦ ||

೪

ಒಬ್ಬನ ಮನೆಯಲ್ಲುಂಡು ಹೊತ್ತುಗಳೆವೆ,
ಒಬ್ಬನ ಮನೆಯಲುಡಲೊಂದು ಗಳಿಸಿದೆ :
ಗರ್ವ ಬೇಡ, ಬೇಡ ನಿನಗೆ !
ಚೆನ್ನಯ್ಯನ ಮನೆಯಲ್ಲಂಬಲಿಯನುಂಡು ಬದುಕಿದೆ,
ಗರ್ವ ಬೇಡ, ಬೇಡ !
ಕೂಡಲ ಸಂಗಯ್ಯಾ, ಸಿರಿಯಾಳನಿಂದ ಮಾನಿಸಲೋಕಗಂಡೆ ! ||೭೪೧||

೫

ಹರಿಯಜಮುನಿಗಳೆಲ್ಲರೂ ನಿಜ, ನಿಮ್ಮ ಬಾಗಿಲ ಕಾಯ್ದಿಹರು :
ಏನು ಕಾರಣ ನೀವು ಬಾಣನ ಬಾಗಿಲ ಕಾಯ್ದಿರಿ ?
ಡಿಂಗರಿಗನ ಮನೆಗೆ ಅಂಗಜಾವಹಕ್ಕೆ ಹೋಗಿದ್ದರೊಳರೆ
ಕೂಡಲ ಸಂಗಮದೇವಾ ? || ೭೪೨ ||

೬

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ :
ಪಾತಳದಿಂದತ್ತತ್ತ ನಿಮ್ಮ ಶ್ರೀಚರಣ,
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ !
ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ,
ಕೂಡಲ ಸಂಗಮದೇವಯ್ಯಾ,
ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ !! || ೭೪೩ ||

೭

ಗೋತ್ರನಾಮವ ಬೆಸಗೊಂಡರೆ
ಮಾತುನೂಂಕದೆ ಸುಮ್ಮನಿದ್ದಿರಿದೇನಯ್ಯಾ ?
ತಲೆಯ ಕುತ್ತಿ ನೆಲನ ಬರೆಯುತ್ತಿದ್ದಿರಿದೇನಯ್ಯಾ ?
ಗೋತ್ರ ಮಾದಾರ ಚೆನ್ನಯ್ಯ,
ಡೋಹಾರ ಕಕ್ಕಯ್ಯನೆಂಬುದೇನು,
ಕೂಡಲ ಸಂಗಯ್ಯಾ ? || ೭೪೪ ||

೮

ನಿಷ್ಠೆಯಿಂದ ಲಿಂಗವ ಪೂಜಿಸಿ
ಮತ್ತೊಂದು ಪಥವನಱಿಯದ ಶರಣರು
ಸರ್ಪನ ಹೆಡೆಯ ಮಾಣಿಕದಂತಿಪ್ಪರು ಭೂಷಣರಾಗಿ !
ದರ್ಪಣದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು,
ಕೂಡಲ ಸಂಗಮದೇವಾ, ನಿಮ್ಮ ಶರಣರು. || ೭೪೫ ||

೯

ಶಿವಲೋಕಕ್ಕೆ ಸರಿ ಬೇಱೆ ಲೋಕವಿಲ್ಲ;
ಜಗಕ್ಕೆ ಇಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ :
‘ ಕೂಡಲ ಸಂಗಯ್ಯನೊಬ್ಬನೇ ದೈವ ’ ವೆಂದು. || ೭೪೬ ||

೧೦

‘ ಈಶ್ವರಸದ್ಭಾವೇ ಕಿಂ ಪ್ರಮಾಣಂ ’
ಎಂಬ ಮೀಮಾಂಸಕನ ಮೂಗಿನ ಕೊನೆಯನು

ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ
ವಿಶ್ವತಸ್ಪಾತ್ । ಸ ಬಾಹುಭ್ಯಾಂ ಧಮತಿ ಸಂ ಪತತ್ರೈರ್
ದ್ಯಾವಾಭೂಮೀ ಜನಯನ್ ದೇವ ಏಕಃ

ಎಂಬ ಸುರಗಿಯಲಿಱಿದು,
ವೈಶೇಷಿಕ ಎಂಬ ಇಟ್ಟಿಗೆಯಲೊರಸಿ,
ಕೂಡಲ ಸಂಗಯ್ಯನೆಂಬ ಕನ್ನಡಿಯ ತೋಱುವೆನು ! || ೭೪೭ ||

೧೧

ಪಂಚಬ್ರಹ್ಮವ ಕೆಡಿಸಿತ್ತು; ಪ್ರಣವಮಂತ್ರವನೀಡಾಡಿತ್ತಲ್ಲಾ;
ಕರ್ಮಂಗಳನೆ ಕಳೆಯಿತ್ತು; ಕ್ರೀಗಳನೆ ಮೀಱಿತ್ತಲ್ಲಾ;
ಆಗಮದ ಹಲ್ಲನೆ ಕಳೆಯಿತ್ತು
ಕೂಡಲ ಸಂಗಯ್ಯನ ಭಕ್ತಿಗಜ, ಹೋ ! || ೨೪೮ ||

೧೨

ವೇದ ನಡನಡುಗಿತ್ತು, ಶಾಸ್ತ್ರವಗಲಿ ಕೆಲಕ್ಕೆ ಸಾರಿದ್ದಿತ್ತಯ್ಯಾ;
ತರ್ಕ ತರ್ಕಿಸಲಱಿಯದೆ ಮೂಗುವಟ್ಟಿದ್ದಿತ್ತಯ್ಯಾ;
ಆಗಮ ಹೆಱತೊಲಗಿ ಅಗಲಿ ಇದ್ದಿತ್ತಯ್ಯಾ,
ನಮ್ಮ ಕೂಡಲ ಸಂಗಯ್ಯನು
ಚೆನ್ನಯ್ಯನ ಮನೆಯಲುಂಡ ಕಾರಣ ! || ೨೪೯ ||

೧೩

ಚಿಕ್ಕದೊಂದು ಹೊತ್ತಗೆ, ಬೆನಕನ ಕರಡಗೆಯಯ್ಯಾ,
ನೀಡುಂಡುಟಿಗೆ (?) ಗೊರವನಯ್ಯಾ.
ಪುಣ್ಯವೇನಾದರಾಗಲಿ, ಡಕ್ಕೆಯ ಮೇಲೆ ಅಕ್ಕಿಯ ತಳಿದೆನು :
ನಮ್ಮ ಕೂಡಲ ಸಂಗಮದೇವರಲ್ಲದೆ
ಅನ್ಯದೈವವುಂಟೆನ್ನದಿರು, ಕಂಡಾ ! || ೨೫೦ ||

೧೪

ನೀನಲ್ಲದನ್ಯದೈವವುಂಟೆಂಬವನ ಬಾಯ
ಕೆನ್ನೆವಾರೆ ಸೀಳಿದಲ್ಲದೆ ಎನ್ನ ಮುನಿಸು ಹೋಗದಯ್ಯಾ,
ಎನ್ನ ಕೋಪವಡಗದಯ್ಯಾ !
ಎನ್ನ ಬಿನ್ನಪವನವಧರಿಸು, ಕೂಡಲ ಸಂಗಮದೇವಾ. || ೨೫೧ ||

೧೫

ಆರು ಮುನಿದು ನಮ್ಮನೇನ ಮಾಡುವರು ?
ಊರು ಮುನಿದು ನಮ್ಮನೆಂತು ಮಾಡುವರು ?

ನಮ್ಮ ಕುನ್ನಿಗೆ ಕೂಸ ಕೊಡಬೇಡ;
ನಮ್ಮ ಸೊಣಕಂಗೆ ತಳಿಗೆಯನಿಕ್ಕಬೇಡ !
ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ,
ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನ್ನಕ್ಕ ? || ೭೫೨ ||

೧೬

ನ್ಯಾಯನಿಷ್ಠುರಿ, ದಾಕ್ಷಿಣ್ಯಪರನು ನಾನಲ್ಲ :
ಲೋಕವಿರೋಧಿ, ಶರಣನಾರಿಗಂಜುವನಲ್ಲ
ಕೂಡಲ ಸಂಗಮದೇವರ ರಾಜತೇಜದಲ್ಲಿಪ್ಪನಾಗಿ. || ೭೫೩ ||

೧೭

ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು,
ಓರೆಯಾವಿನ ಬೆನ್ನಲ್ಲಿ ಹರಿಯಲದೇಕಯ್ಯಾ ?
ಲಜ್ಜೆಗೆಡಲೇಕೆ ? ನಾಣುಗೆಡಲೇಕೆ ?
ಕೂಡಲ ಸಂಗಮದೇವಯ್ಯನುಳ್ಳನ್ನಕ್ಕ
ಬಿಜ್ಜಳನ ಭಂಡಾರವೆನಗೇಕಯ್ಯಾ ? || ೭೫೪ ||

೧೮

ಹೋಗಬಿಟ್ಟು, ಮರಳಿ ಹಿಂದ ನೋಡಿ
ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ
ಆದೆ ಪಾರದ್ವಾರ ನಾಯಕನರಕ, ತಪ್ಪದು !
ಅನ್ಯವಧುವೆಂಬುದು ನಿಮ್ಮ ರಾಣಿವಾಸ :
ಇದೆ ದಿಬ್ಯ, ಕೂಡಲ ಸಂಗಮದೇವಾ. || ೭೫೫ ||

೧೯

ಕಂಡುದಕ್ಕೆಳಸೆನೆನ್ನ ಮನದಲ್ಲಿ, ನೋಡಿ ಸೋಲೆನೆನ್ನ ಕಣ್ಗಳಲ್ಲಿ,
ಆಡಿ ಹುಸಿಯೆನೆನ್ನ ಜಿಹ್ವೆಯಲ್ಲಿ.
ಕೂಡಲ ಸಂಗಮದೇವಾ,
ನಿಮ್ಮ ಶರಣನ ಪರಿ ಇಂತುಟಯ್ಯಾ. || ೭೫೬

೨೦

ಆಪ್ಯಾಯನಕ್ಕೆ ನೀಡುವೆ, ಲಾಂಛನಕ್ಕೆ ಶರಣೆಂಬೆ :
ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ
ಕೂಡಲ ಸಂಗಮದೇವಾ,
ನೀ ಸಾಕ್ಷಿಯಾಗಿ 'ಛೀ' ಎಂಬೆ ! || ೭೫೭ ||

೨೧

ಮಾಡುವ ನೀಡುವ ಭಕ್ತನ ಕಂಡರೆ
ನಿಧಿನಿಧಾನವ ಕಂಡಂತಾಯಿತ್ತು.
ಪಾದೋದಕ-ಪ್ರಸಾದಜೀವಿಯ ಕಂಡರೆ
ಹೋದ ಪ್ರಾಣ ಬಂದಂತಾಯಿತ್ತು.
ಅನ್ಯರ ಮನೆಗೆ ಹೋಗಿ ತನ್ನುದರವ ಹೊರೆಯದ
ಅಚ್ಚ ಶರಣರ ಕಂಡರೆ
ನಿಶ್ಚಯವಾಗಿ ಕೂಡಲ ಸಂಗಯ್ಯನೆಂಬೆನು. || ೭೫೮ ||

೨೨

ಗುರುಭಕ್ತಿಯ ಮಾಡಬಹುದಲ್ಲದೆ
ಲಿಂಗಭಕ್ತಿಯ ಮಾಡಬಾರದು.
ಲಿಂಗಭಕ್ತಿಯ ಮಾಡಬಹುದಲ್ಲದೆ
ಜಂಗಮಭಕ್ತಿಯ ಮಾಡಬಾರದು.
ಜಂಗಮಭಕ್ತಿಯ ಮಾಡಬಹುದಲ್ಲದೆ
ಸಮಯಭಕ್ತಿಯ ಮಾಡಬಾರದು.
ಸಮಯಭಕ್ತಿಯ ಮಾಡಬಹುದಲ್ಲದೆ
ಸಮಯಸಂತೋಷವ ಮಾಡಬಾರದು.
ಇವೆಲ್ಲವ ಮಾಡಬಹುದಲ್ಲದೆ ತನ್ನ ತಾನಱಿಯಬಾರದು !
ತನ್ನ ತಾನಱಿದೆನೆಂಬಹಂಕಾರವುಳ್ಳರೆ ನಿಮ್ಮವರಿಗೆ ದೂರ, ಎಲೆ ದೇವ.
ಅನ್ಯಕ್ಕೆ ಆಸೆಮಾಡಿದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ !
ಕೂಡಲ ಸಂಗಮದೇವಾ. || ೭೫೯ ||

೨೩

ದಾಸನಂತೆ ತವನಿಧಿಯ ಬೇಡುವನಲ್ಲ;
ಚೋಳನಂತೆ ಹೊನ್ನಮಳೆಯ ಕಱೆಸೆಂಬವನಲ್ಲ;
ಅಂಜದಿರು ! ಅಂಜದಿರು ! ಅವರಂದದವ ನಾನಲ್ಲ !
ಎನ್ನ ತಂದೆ, ಕೂಡಲ ಸಂಗಮದೇವಾ,
ಸದ್‌ಭಕ್ತಿಯನೆ ಕರುಣಿಸೆನಗೆ. || ೭೬೦ ||

೨೪

ಲಿಂಗದಲ್ಲಿ ಸಮ್ಯಕ್ಕರು, ಲಿಂಗದಲ್ಲಿ ಸಮರ್ಥರು,
ಲಿಂಗದಲ್ಲಿ ಸೊಮ್ಮು-ಸಂಬಂಧವಱೆಂತ ಸ್ವಾಮಿಭೃತ್ಯರೆಲ್ಲರೂ,
ನಿಮ್ಮ ಬೇಡೆ, ಅಂಜದಿರಿ !
ಎನಗೆ ಮರ್ತ್ಯಲೋಕದ ಮಹಾಗಣಂಗಳುಂಟು,
ಇದು ಕಾರಣ, ಕೂಡಲ ಸಂಗಮದೇವರ ಲೋಕವ
ಹಂಚಿಕೊಳ್ಳಿ ನಿಮನಿಮಗೆ ! || ೭೬೧ ||

---

## (೨೨) ಮಾಹೇಶ್ವರನ ಐಕ್ಯಸ್ಥಳ

೧

ಅಂದಂದಿನ ಹೊಂದಿಗೆಯ ಬಿಂದುಮಾತ್ರದಲಾದ
ಅಂದವ ಕೆಡಿಸಲಱೆಯದ ಅಂಧಕರ ನೋಡಾ.
ಸಮರಸವಿಲ್ಲದೆ ನೆರಹಿ ಮಾಡಿ ಭಕ್ತರಾದರೆಂಬವರನೇನೆಂಬೆ ?
ಆಚಾರವಂಚಕರ ಎನಗೆ ತೋಱದಿರು,
ಕೂಡಲ ಸಂಗಮದೇವಾ, ನಿಮ್ಮ ಧರ್ಮ ! || ೭೬೨ ||

೨

ಕಲಿಯ ಕೈಯ ಕೈದುವಿನಂತಿರಬೇಕು, ಅಯ್ಯಾ;
ಎಲುದೋಱ ಸರಸವಾಡಿದರೆ ಸೈರಿಸಬೇಕಯ್ಯಾ.
ರಣದಲ್ಲಿ ತಲೆಹಱೆದು ಅಟ್ಟೆ ನೆಲಕ್ಕೆ ಬಿದ್ದು
ಬೊಬ್ಬಿಡಲದಕ್ಕೆ ಒಲಿವ ಕೂಡಲ ಸಂಗಮದೇವ. || ೭೬೩ ||

೩

ಆಸೆರೋಷಹರುಷಾದಿಗಳೆಂಬ ಕರಣೇಂದ್ರಿಯವ ಮುಟ್ಟಲೀಯದೆ
  ಆಚಾರವ ಶಿವಾಚಾರವ ಮಾಡುವೆ;
  ಭಯ ಭಕ್ತಿಯಿಂದ ತೋಱುವೆ ಮನದಲ್ಲಿ ವಂಚನೆಯಿಲ್ಲದೆ;
  ಭಾವಶುದ್ಧ ಪೂಜೆಯ ಮಾಡುವೆ,
  ಎನ್ನ ಪ್ರಾಣಶಕ್ತಿಯಿಂದ ಕೂಡಲ ಸಂಗಮದೇವರ. || ೭೬೪ ||

೪

ಪೂರ್ವಬೀಜವಾಯುಪ್ರಾಣಿಯಲ್ಲ,
  ಲಿಂಗಪ್ರಾಣಿಯಾ ಶರಣನು.
ಏಕಗ್ರಾಹಿ, ಭಾವಭೇದವಿಲ್ಲವಾಗಿ
  ಮನಃಪ್ರವೇಶಿಯಾ ಶರಣನು.
ನಿಮ್ಮವ ಪೂಜಿಸಿ ತನುಧರ್ಮವ ಮಱೆದು
  ನಿಮ್ಮ ಪ್ರತಿಬಿಂಬದಂತಿಪ್ಪ,
  ಕೂಡಲ ಸಂಗಮದೇವಾ, ನಿಮ್ಮ ಶರಣನು. || ೭೬೫ ||

———

# ಪ್ರಸಾದಿ ಸ್ಥಲ

## (೨೩) ಪ್ರಸಾದಿಯ ಜ್ಞಾನಿಸ್ಥಳ

೧

ಹಸಿವಾಯಿತ್ತೆಂದು ಅರ್ಪಿತವ ಮಾಡುವರಯ್ಯಾ :
  ತೃಷೆಯಾಯಿತ್ತೆಂದು ಮಜ್ಜನಕ್ಕೆಱೆವರಯ್ಯಾ :
  ಹಸಿವು–ತೃಷೆ–ವಿಷಯಕ್ಕೆ ಬಳಲುವರಯ್ಯಾ !
ಹಸಿವೆಯಾಯಿತ್ತೆಂದು ಅರ್ಪಿತವ ಮಾಡಲಿಲ್ಲ;
ತೃಷೆಯಾಯಿತ್ತೆಂದು ಮಜ್ಜನಕ್ಕೆಱೆಯಲಿಲ್ಲ :
  ಇದು ಕಾರಣ, ಕೂಡಲ ಸಂಗನ ಪೂಜಿಸಿ
  ಪ್ರಸಾದವ ಹಡೆವರೊಬ್ಬರೂ ಇಲ್ಲಾ ! || ೭೬೬ ||

೨

ಮುತ್ತು ನೀರಲಿ ಹುಟ್ಟಿ ಮತ್ತೆ ನೀರಪ್ಪುದೆ ?
ಗುರುಕಾರುಣ್ಯವ ಹಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬೆರಸಿದರೆ,
  ಗುರುದ್ರೋಹ, ಲಿಂಗದ್ರೋಹ, ಜಂಗಮದ್ರೋಹ,
  ಆಚಾರದ್ರೋಹ, ಪ್ರಸಾದದ್ರೋಹ !—
  ಇಂತೀ ಪಂಚಮಹಾಪಾತಕಂಗಳು
  ಭಕ್ತಂಗಲ್ಲದೆ ಭವಿಗಲ್ಲಿಯದೊ ?
ಗುರುವಿದು, ಲಿಂಗವಿದು, ಜಂಗಮವಿದು,
  ಆಚಾರವಿದು, ಪ್ರಸಾದವಿದೆಂದಱಿಯದಿದ್ದರೆ
  ಕುಂಭೀಪಾತಕ ನಾಯಕನರಕ !
  ಕೂಡಲ ಸಂಗಮದೇವಾ. || ೭೬೭ ||

೩

ಸೂಳೆಗೆ ಮೆಚ್ಚಿ ಸೂಳೆಯ ಬಂಟರೆಂಜಲ ತಿಂಬುದೀ ಲೋಕ,
  ಅಡಗ ಮೆಚ್ಚಿ ಸೊಣಗನ ಎಂಜಲ ತಿಂಬುದೀ ಲೋಕವೆಲ್ಲ !

ಲಿಂಗವ ಮೆಚ್ಚಿ ಜಂಗಮಪ್ರಸಾದವ ಕೊಂಬವರ
ನೋಡಿ ನಗುವವರ ಕುಂಭೀಪಾತಕ ನಾಯಕನರಕದಲ್ಲಿಕ್ಕುವ
ಕೂಡಲ ಸಂಗಮದೇವ || ೭೬೮ ||

೪

ಹೊಲೆಯುಂಟೆ ಲಿಂಗವಿದ್ದೆಡೆಯಲ್ಲಿ ?
ಕುಲವುಂಟೆ ಜಂಗಮವಿದ್ದೆಡೆಯಲ್ಲಿ ?
ಎಂಜಲುಂಟೆ ಪ್ರಸಾದವಿದ್ದೆಡೆಯಲ್ಲಿ ?
ಅಪವಿತ್ರನುಡಿಯು ನುಡಿವ ಸೂತಕವೇ ಪಾತಕ !
ನಿಷ್ಕಳ, ನಿಜೈಕ್ಯ, ತ್ರಿವಿಧ ನಿರ್ಣಯ,
ಕೂಡಲ ಸಂಗಮದೇವಾ, ನಿಮ್ಮ ಶರಣರಿಗಲ್ಲದಿಲ್ಲಾ. || ೭೬೯ ||

೫

ಬಾರದು, ಬಾರದು ಭಕ್ತಂಗೆ ಪರಧನ ಪರಸ್ತ್ರೀ.
ಬಾರದು, ಬಾರದು ವಿಷಯಿಗೆ ಪಶುಪತಿಯ ಬ್ರತವು.
ಬಾರದು, ಬಾರದು ಭವಭಾರಿಗೆ
ಕೂಡಲ ಸಂಗಮದೇವನ ಒಕ್ಕುದ ಕೊಳ್ಳಬಾರದು ! || ೭೭೦ ||

೬

ಹುತ್ತದ ಮೇಲಣ ರಜ್ಜು ಮುಟ್ಟಿದರೆಯೂ
ಸಾವರು ಶಂಕಿತರಾದವರು.
ಸರ್ಪದಷ್ಟವಾದರೆಯೂ
ಸಾಯರು ನಿಶ್ಶಂಕಿತರಾದವರು :
ಕೂಡಲ ಸಂಗಮದೇವಯ್ಯಾ,
ಶಂಕಿತಂಗೆ ಪ್ರಸಾದ ಸಿಂಗಿ, ಕಾಳಕೂಟ ವಿಷವು ! || ೭೭೧ ||

೭

ನಂಬಿದರೆ ಪ್ರಸಾದ : ನಂಬದಿದ್ದರೆ ವಿಷವು.
ತುಡುಕಬಾರದು, ನೋಡಾ, ಲಿಂಗನ ಪ್ರಸಾದ, ಸಂಗನ ಪ್ರಸಾದ !
ಕೂಡಲ ಸಂಗನ ಪ್ರಸಾದ : ಸಿಂಗಿ, ಕಾಳಕೂಟ ವಿಷವು ! ||೭೭೨||

೮

ಪಂಡಿತನಾಗಲಿ, ಮೂರ್ಖನಾಗಲಿ, ಸಂಚಿತಕರ್ಮ ಉಂಡಲ್ಲದೆ ಬಿಡದು.
ಪ್ರಾರಬ್ಧಕರ್ಮ ಭೋಗಿಸಿದಲ್ಲದೆ ಹೋಗದೆಂದು
ಶ್ರುತಿ ಸಾಱುತ್ತೈದಾವೆ, ನೋಡಾ,
ತಾನಾವ ಲೋಕದೊಳಗಿದ್ದರೆಯೂ ಬಿಡದು.
ಕರ್ಮಫಲಗೂಡಿ ಕೂಡಲ ಸಂಗಮದೇವಂಗೆ
ಆತ್ಮನೈವೇದ್ಯವ ಮಾಡಿದವನೆ ಧನ್ಯ. || ೭೭೩ ||

೯

ಒಲ್ಲೆಂಬುದು ವೈರಾಗ್ಯ : ಒಲಿವೆನೆಂಬುದು ಕಾಯಗುಣ.
ಆವ ಪದಾರ್ಥವಾದರೇನು ? ತಾನಿದ್ದೆಡೆಗೆ ಬಂದುದ
ಲಿಂಗಾರ್ಪಿತವ ಮಾಡಿ ಭೋಗಿಸುವುದೆ ಆಚಾರ,
ಕೂಡಲ ಸಂಗಮದೇವನನೊಲಿಸ ಬಂದ
ಪ್ರಸಾದಕಾಯವ ಕೆಡಿಸಲಾಗದು. || ೭೭೪ ||

೧೦

ಒಪ್ಪವ ನುಡಿವರಯ್ಯಾ ತುಪ್ಪವ ತೊಡೆದಂತೆ !
ಶರಣ ತನ್ನ ಮೆಱೆವನೆ ಬಿನ್ನಾಣಿಯಂತೆ ?
ಕೂಡಲ ಸಂಗನ ಪ್ರಸಾದದಿಂದ ಬದುಕುವನಲ್ಲದೆ ತನ್ನ ಮೆಱೆವನೆ ?
|| ೭೭೫ ||

೧೧

ಅರ್ಪಿತ ಅರ್ಪಿತವೆಂದೆನುತಿಹಿರಿ :
ಗುರುವಿಂಗೆ ಕೊಡುವುದು ಅರ್ಪಿತವೆ
ಸವಿಸವಿದು ಕೊಡಬೇಕಲ್ಲದೆ ?
ಅರ್ಪಿತ ಅರ್ಪಿತವೆನುತಿಹಿರಿ :
ಲಿಂಗಕ್ಕೆ ಕೊಡುವುದು ಅರ್ಪಿತವೆ
ಸವಿಸವಿದು ಕೊಡಬೇಕಲ್ಲದೆ ?
ಅರ್ಪಿತ, ಅರ್ಪಿತವೆನುತಿಹರೆಲ್ಲರೂ
ಅರ್ಪಿತದ ಮುಖವನಱಿಯರು, ನೋಡಾ.
ಜಂಗಮಕ್ಕೆ ನೀಡಿ ಜಂಗಮಪ್ರಸಾದವ ಕೊಂಡರೆ
ನಿನಗರ್ಪಿತ, ಕಾಣಾ, ಕೂಡಲ ಸಂಗಮದೇವಾ ! || ೭೭೬ ||

## (೨೪) ಪ್ರಸಾದಿಯ ಪ್ರಸಾದಿಸ್ಥಳ

೧

ಗುರುಲಿಂಗಜಂಗಮದಿಂದೆ ಪಾದೋದಕ ಪ್ರಸಾದವಾಯಿತ್ತು.
ಆ ಭಾವನೆ ಮಹಾನುಭಾವವಾಗಿ
ಎನಗೆ ಮತ್ತೆ ಬೇಱೆ ಪ್ರಸಾದವೆಂಬುದಿಲ್ಲ,
ಕೂಡಲ ಸಂಗಮದೇವಾ. || ೭೭೭ ||

೨

ದಾಸೋಹವೆಂಬ ಸೋಹೆಗೊಂಡು ಹೋಗಿ
ಗುರುವ ಕಂಡೆ, ಲಿಂಗವ ಕಂಡೆ, ಜಂಗಮವ ಕಂಡೆ, ಪ್ರಸಾದವ ಕಂಡೆ.
ಇಂತೀ ಚತುರ್ವಿಧಸಂಪನ್ನನಾದೆ, ಕಾಣಾ,
ಕೂಡಲ ಸಂಗಮದೇವಾ. || ೭೭೮ ||

## (೨೫) ಪ್ರಸಾದಿಯ ಭಕ್ತಸ್ಥಳ

೧

ಸಜ್ಜನಶರಣರ ಕಂಡು ಎನ್ನ ಮನ ಉಬ್ಬಿತ್ತು ನೋಡಿರಯ್ಯಾ !
ಶ್ರೀಗುರುಪಾದವ ಹಿಡಿದು ಪಾವನವಾದೆನಯ್ಯಾ.
ಪಾದೋದಕಪ್ರಸಾದದಿಂದ ಭವಗೆಟ್ಟೆನು,
ಕೂಡಲ ಸಂಗಮದೇವಾ. || ೭೭೯ ||

೨

ಕಿವಿಯ ಸೂತಕ ಹೋಯಿತ್ತು ಸದ್‌ಗುರುವಚನದಿಂದೆ.
ಕಣ್ಗಳ ಸೂತಕ ಹೋಯಿತ್ತು ಸದ್‌ಭಕ್ತರ ಕಂಡೆನಾಗಿ.
ಕಾಯದ ಸೂತಕ ಹೋಯಿತ್ತು ನಿಮ್ಮ ಚರಣವ ಮುಟ್ಟಿದೆನಾಗಿ.
ಬಾಯ ಸೂತಕ ಹೋಯಿತ್ತು ನಿಮ್ಮೊಕ್ಕುದ ಕೊಂಡೆನಾಗಿ.
ನಾನಾಸೂತಕ ಹೋಯಿತ್ತು ನಿಮ್ಮ ಶರಣರನುಭಾವಿಯಾಗಿ.
ಕೂಡಲ ಸಂಗಮದೇವ, ಕೇಳಯ್ಯಾ,
ಎನ್ನ ಮನದ ಸೂತಕ ಹೋಯಿತ್ತು
ನೀವಿಲ್ಲದಿಲ್ಲೆಂದಱಿದೆನಾಗಿ. || ೭೮೦ ||

೩

ಲಿಂಗಪ್ರಸಾದಿಗಳಲ್ಲದವರ ಸಂಗ
ಭಂಗವೆಂಬುದು ಗುರುವಚನ.
ಲಿಂಗಪ್ರಸಾದಿಗಳಲ್ಲದವರ ಸಂಗ
ಪಂಚಮಹಾಪಾತಕವೆಂದುದು ಲಿಂಗವಚನ :
ಆಸನೇ ಶಯನೇ ಯಾನೇ। ಸಂಪರ್ಕೇ ಸಹಭೋಜನೇ
ಸಂಚರಂತಿ ಮಹಾಘೋರೇ । ನರಕೇ ಕಾಲಮಕ್ಷಯಂ
ಇಂತೆಂದುದಾಗಿ, ಕೂಡಲ ಸಂಗಮದೇವಾ,
ನಿಮ್ಮ ಶರಣರಿಗೆ ಶರಣೆಂದು ಶುದ್ಧನಯ್ಯಾ. ॥ ೭೮೧ ॥

೪

ಸಯಿದಾನವ ತಂದು ನೀಡುವೆನಲ್ಲದೆ
ಸಂಬಂಧಿ ನಾನಲ್ಲಯ್ಯಾ.
ಕರ್ತಂಗೆ ಭೃತ್ಯಾಚಾರವ ಮಾಡಿ,
ಒಕ್ಕುದ ಕೊಂಡಿಪ್ಪೆನಯ್ಯಾ.
ಭೋಗಾದಿಭೋಗವ ಸಮವಾಗಿ ಭೋಗಿಸಲು
ಅಘೋರನರಕದಲ್ಲಿಕ್ಕುವ
ಕೂಡಲ ಸಂಗಮದೇವ. ॥ ೭೮೨ ॥

೫

ಶುದ್ಧವ ಗುರುವಿಂಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯಾ.
ಸಿದ್ಧವ ಲಿಂಗಕ್ಕೆ ಕೊಟ್ಟು ಸಿದ್ಧವಾಯಿತ್ತೆಂಬೆನಯ್ಯಾ.
ಪ್ರಸಿದ್ಧವ ಜಂಗಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬೆನಯ್ಯಾ.
ಗುರುಲಿಂಗಜಂಗಮವ ಏಕತ್ರಯವಾಗಿ ಕಾಣಲಱಿಯದಿದ್ದರೆ
ಶುದ್ಧಸಿದ್ಧಪ್ರಸಿದ್ಧ ಒಡನೆ ನಗುತ್ತಿದಾವೆ !
ತನುಮನಧನವ ನಿವೇದಿಸಲಱಿಯೆನಾಗಿ
ಕೂಡಲ ಸಂಗಮದೇವ ಒಲಿಯೆಂದೊಡೆಂತೊಲಿವ ? ॥೭೮೩॥

## (೨೬) ಪ್ರಸಾದಿಯ ಮಾಹೇಶ್ವರಸ್ಥಳ

೧

ಒಡಲ ಕಳವಳಕ್ಕೆ ಬಾಯ ಸವಿಗೆ
ಬಯಸಿ ಉಂಡೆನಾದರೆ ನಿಮ್ಮ ತೊತ್ತಿನ ಮಗನಲ್ಲಾ !
ಬೇಡೆ, ಬೇಡೆ, ನಿಮ್ಮ ನಂಬಿದ ಸದ್‌ಭಕ್ತರ;
ಅವರೊಕ್ಕುದ ಉಂಬೆ, ಅವರೆಂದಂತೆ ಎಂಬೆ.
ಎನ್ನೊಡೆಯ ಕೂಡಲ ಸಂಗಮದೇವನೊಲ್ಲದವರ ಹಿಡಿದೆನಾದಡೆ
ನಿಮ್ಮ ಪಾದದಾಣೆ ! || ೭೮೪ ||

೨

ಲಿಂಗಮುಖದಿಂದ ಬಂದ ಪ್ರಸಾದವಲ್ಲದೆ
ಕೊಂಡೆನಾದರೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ !
ಲಿಂಗಾರ್ಪಿತವಲ್ಲದೆ ಉದಕವ ಮುಕ್ಕುಳಿಸಿದೆನಾದರೆ
ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯಾ !
ಲಿಂಗಾರ್ಪಿತವಲ್ಲದೆ ಹಲ್ಲುಕಡ್ಡಿಯ ಕೊಂಡರೆ
ಬಲ್ಲೆ ಮುಂದೆ ಭವಘೋರನರಕವೆಂಬುದ !
ನಿಮಗೆತ್ತಿದ ಕರದಲ್ಲಿ ಮತ್ತೊಂದಕ್ಕೆ ಕೈಯಾನೆನು :
ಆಳವಱಿಯದೆ ನುಡಿದೆನು—
ಕಡೆಮುಟ್ಟಿ ಸಲಿಸದಿದ್ದರೆ, ತಲೆದಂಡ !
ಕೂಡಲ ಸಂಗಮದೇವಾ. || ೭೮೫ ||

## (೨೭) ಪ್ರಸಾದಿಯ ಪ್ರಾಣಲಿಂಗಸ್ಥಳ

೧

ಮೌನದಲುಂಬುದು ಆಚಾರವಲ್ಲ; ಲಿಂಗಾರ್ಪಿತವ ಮಾಡಿದ ಬಳಿಕ,
ತುತ್ತಿಗೊಮ್ಮೆ ‘ ಶಿವಶರಣೆ ’ ನ್ನುತ್ತಿರಬೇಕು.
ಕರಣವೃತ್ತಿಗಳಡಗುವುವು, ಕೂಡಲ ಸಂಗನ ನೆನೆಯುತ್ತ ಉಂಡರೆ.
|| ೭೮೬ ||

೨

ಕಾಯದ ಕರಣದ ಕೈಯಲ್ಲಿ ಪದಾರ್ಥವ ಹಿಡಿವಲ್ಲಿ
ನಿಮಗೆ ಕೊಡುವ ಭರದ ಭೀತಿಯಿಂದಾನಱಿಯದಿಪ್ಪೆನಾಗಿ
ಎನ್ನ ನೀನಱಿದು ಸಲಹುತ್ತಿಪ್ಪೆಯಯ್ಯಾ.
ಕೂಡಲ ಸಂಗಮದೇವಾ. || ೭೮೭ ||

೩

ಆಳಿಕಾಱನೆನಗೊಬ್ಬ ಮಗ ಹುಟ್ಟಿದನೆಂದು
ಆಳಿಯ ಕೆಡಲೀಸದೆ ನಡೆಸುವ ನಮ್ಮಯ್ಯ.
ಪಂಚಭೂತಕಾಯವ ಭವಿಯೆಂದೆನಲೀಯದೆ
ಪ್ರಸಾದಕಾಯಮಾಡಿ ಸಲಹುವ ನಮ್ಮಯ್ಯ.
ಆಳಿ ಸಾವಲ್ಲಿ ಅವಧಾನಿಯಾಗಿರ್ದರೆ
ಆಳ್ದನು ನಮ್ಮ ಕೂಡಲ ಸಂಗಮದೇವ. || ೭೮೮ ||

೪

ಶಿವಾಚಾರವೆಂಬುದೊಂದು ಬಾಳ ಬಾಯ ಧಾರೆ :
ಲಿಂಗ ಮೆಚ್ಚಬೇಕು, ಜಂಗಮ ಮೆಚ್ಚಬೇಕು,
ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಿರಬೇಕು !
ಬಿಚ್ಚಿ ಬೇಱಾವರೆ ಮೆಚ್ಚುವನೆ ನಮ್ಮ ಕೂಡಲ ಸಂಗಮದೇವ ? ||೭೮೯||

## (೨೮) ಪ್ರಸಾದಿಯ ಶರಣಸ್ಥಳ

೧

ತ್ರಿವಿಧಪ್ರಸಾದವೆಂದೆಂಬರು : ಅದೆಂತಹುದೊ ?
ಶುದ್ಧಪ್ರಸಾದ ಲಿಂಗದದು, ಸಿದ್ಧಪ್ರಸಾದ ಜಂಗಮದದು,
ಪ್ರಸಿದ್ಧ ಪ್ರಸಾದ ಗುರುವಿನದದು.
ಇಂತೀ ತ್ರಿವಿಧವೊಂದಾದವರ ತೋಱಾ,
ಕೂಡಲ ಸಂಗಮದೇವಾ. || ೭೯೦ ||

೨

ಆವಾವ ಭಾವದಲ್ಲಿ ಶಿವನ ನಂಬಿದ ಶರಣರು ಎಂತಿದ್ದರೇನಯ್ಯಾ ?
ಆವಾವ ಭಾವದಲ್ಲಿ ಶಿವನ ನಂಬಿದ ಮಹಿಮರು ಎಂತಿದ್ದರೇನಯ್ಯಾ ?
ಸುಚರಿತ್ರರು ಎಂತಿದ್ದರೇನಯ್ಯಾ ?
ಕೂಡಲ ಸಂಗನ ಶರಣರು, ರಸದ ವಾರುಧಿಗಳು. ಎಂತಿರ್ದರೇನಯ್ಯಾ ?
|| ೭೯೧ ||

೩

ಉಱಿ ತಾಗಿದ ಮೃಗವು ಒಂದಡಿಯನಿಡುವುದೆ, ಅಯ್ಯಾ ?
ತನುವ ತಾಗಿದ ಸುಖವು ಅಗಲುವುದೆ ?
ಕೂಡಲ ಸಂಗನ ಶರಣರ ಅನುಭಾವವಱಿದವರ
ಮರಳಿ ಮರ್ತ್ಯರೆನ್ನಬಹುದೆ ? || ೭೯೨ ||

೪

ನಿಮ್ಮ ಶ್ರೀಪಾದವ ಮುಟ್ಟಿ, ಎನ್ನ ಕರ್ಮ ಹಱಿಯಿತ್ತು.
ನಿಮ್ಮ ಪ್ರಸಾದದಿಂದ ನಾನು ಭವಗೆಟ್ಟೆ, ನೋಡಯ್ಯಾ !
ಮನ ಪರುಷ, ದೃಷ್ಟಿ ಪರುಷ, ಭಾವ ಪರುಷ :
ಲಿಂಗಗಣಂಗಳು.
ಕೂಡಲ ಸಂಗಮದೇವಾ, ನಿಮ್ಮ ಶರಣರನುಭಾವದಿಂದ
ನಾನು ಸುಖಿಯಾದೆನು ! || ೭೯೩ ||

## (೨೯) ಪ್ರಸಾದಿಯ ಐಕ್ಯಸ್ಥಳ

೧

ನಡೆ ಚೆನ್ನ, ನುಡಿ ಚೆನ್ನ, ಎಲ್ಲಿ ನೋಡಿದಡೆ ಚೆನ್ನ !
ಪ್ರಮಥರೊಳಗೆ ಚೆನ್ನ, ಪುರಾತರೊಳಗೆ ಚೆನ್ನ !
ಸವಿನೋಡಿ ಅಂಬಲಿಯ, ರುಚಿಯಾಯಿತ್ತೆಂದು,
ಕೂಡಲ ಸಂಗಮದೇವಂಗೆ ಬೇಕೆಂದು ಕೈದೆಗೆದ ನಮ್ಮ ಚೆನ್ನ !!
|| ೭೯೪ ||

೨

ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ,
ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ;
ಪ್ರಸಾದವಿಕಾರಿಗೆ ಮನವಿಕಾರವೆಂಬುದಿಲ್ಲ.
ಇಂತೀ ತ್ರಿವಿಧಗುಣವನಱಿಯದಾತನು
ಅಚ್ಚಲಿಂಗೈಕ್ಯನು, ಕೂಡಲ ಸಂಗಮದೇವಾ. || ೭೯೫ ||

# ಪ್ರಾಣಲಿಂಗಿಸ್ಥಳ

## (೩೦) ಪ್ರಾಣಲಿಂಗಿಯ ಜ್ಞಾನಿಸ್ಥಳ

೧

ಪ್ರಾಣಲಿಂಗಪ್ರತಿಗ್ರಾಹಕನಾದ ಬಳಿಕ
ಲಿಂಗವಿರಹಿತವಾಗಿ ನಡೆವ ಪರಿಯಿನ್ನೆಂತೊ ?
ಲಿಂಗವಿರಹಿತವಾಗಿ ನುಡಿವ ಪರಿಯಿನ್ನೆಂತೊ ?
ಪಂಚೇಂದ್ರಿಯಸುಖವನು ಲಿಂಗವಿರಹಿತವಾಗಿ ಭುಂಜಿಸಲಾಗದು;
ಲಿಂಗವಿರಹಿತವಾಗಿ ಉಗುಳ ನುಂಗಲಾಗದು :
ಇಂತೆಂದುದು ಕೂಡಲ ಸಂಗನ ವಚನ. || ೭೯೬ ||

೨

ಹತ್ತು ಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು,
ಮುಟ್ಟುವ ತೆಱನನಱಿಯದನ್ನಕ್ಕ ?
ಕಟ್ಟಿವರೇನು, ಬಿಟ್ಟರೇನು
ಮನವು ಲಿಂಗದಲ್ಲಿ ಮುಟ್ಟದನ್ನಕ್ಕ ?
ಮಾತಿನ ಮಾತಿನಲೆ ಒಲಿಸಿ ಮಹತ್ತಪ್ಪ ಲಿಂಗವ ಕಂಡಹೆನೆಂಬ
ಪಾತಕರ ಮೆಚ್ಚ ನಮ್ಮ ಕೂಡಲ ಸಂಗಮದೇವ. || ೭೯೭ ||

೩

ಶ್ವಾನಜ್ಞಾನ ಗಜಜ್ಞಾನ ಕುಕ್ಕುಟಜ್ಞಾನವೆಂಬ
ಜ್ಞಾನತ್ರಯಂಗಳೇನಾದುವು ?
ಕೂಡಲ ಸಂಗಮದೇವಾ, ನಿಮ್ಮನಱಿಯದ ಜ್ಞಾನವೆಲ್ಲಾ ಅಜ್ಞಾನ !
|| ೭೯೮ ||

೪

ಗುರು ತೋಱಿದ ಲಿಂಗವು ಮನಸ್ಥಲವಾಗಿರಲು
ಪವನಭೇದದಿಂದ ಅಱಿದಹೆನೆಂದರೆ, ಅದೆ ದ್ರೋಹ !
ಇಡಾ ಪಿಂಗಳಾ ಸುಷುಮ್ನಾನಾಳವಿಡಿದು ಅಱಿದಹೆನೆಂದರೆ
ಕೂಡಲ ಸಂಗಮದೇವ ಮೂಗ ಕೊಯ್ಯದೆ ಮಾಣ್ಬನೆ ? || ೭೯೯ ||

೫

ಕಬ್ಬುನ ಪರುಷವೇದಿಯಾದರೇನು,
  ಕಬ್ಬುನ ಹೊನ್ನಾಗದೊಡಾ ಪರುಷವದೇಕೊ ?
ಮನೆಯೊಳಗೆ ಕತ್ತಲೆ ಹಱಿಯದೊಡಾ ಜ್ಯೋತಿಯದೇಕೊ ?
ಕೂಡಲ ಸಂಗಮದೇವರ ಮನಮುಟ್ಟಿ ಪೂಜಿಸಿ
  ಕರ್ಮ ಹಱಿಯದೊಡಾ ಪೂಜೆಯದೇಕೊ ? ‖ ೮೦೦ ‖

೬

ಅಹಂಕಾರ ಮನವನಿಂಬುಗೊಂಡಲ್ಲಿ
  ಲಿಂಗ ತಾನೆಲ್ಲಿ ಬಪ್ಪುದೊ ?
ಅಹಂಕಾರಕ್ಕೆ ಎಡೆಗುಡದೆ ಲಿಂಗತನುವಾಗಿರಬೇಕು.
ಅಹಂಕಾರರಹಿತವಾದಲ್ಲಿ ಸನ್ನಿಹಿತ, ಕಾಣಾ,
  ಕೂಡಲ ಸಂಗಮದೇವ. ‖ ೮೦೧ ‖

೭

ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು.
ನುಡಿದರೆ ಲಿಂಗ ಮೆಚ್ಚಿ ' ಅಹುದಹುದೆ ' ನಬೇಕು.
ನುಡಿಯೊಳಗಾಗಿ ನಡೆಯದಿದ್ದರೆ
  ಕೂಡಲ ಸಂಗಮದೇವನೆಂತೊಲಿವನಯ್ಯಾ ? ‖ ೮೦೨ ‖

೮

ಮನದ ಕೊನೆಯ ಮೊನೆಯ ಮೇಲೆ
  ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಂ.
ಆದಿವಿಡಿದು ಬಂದಾತನೆ ಭಕ್ತ :
  ಅನಾದಿವಿಡಿದು ಬಂದಾತನೆ ಜಂಗಮ !
ಆದಿ ಗುರು : ಅನಾದಿ ಶಿಷ್ಯ !
ಈ ಉಭಯ ಕುಳಸ್ಥಳವ ಬಲ್ಲರೆ ಆತ ಲಿಂಗಸಂಬಂಧಿ,
  ಕೂಡಲ ಸಂಗಮದೇವಾ. ‖ ೮೦೩ ‖

೯

ಅರಿದರಿದು ! ಸಮಗಾಣಿಸಬಾರದು :
ತ್ರಾಸಿನ ಕಟ್ಟಳೆಯಂತಿನಿತು ವೆಗ್ಗಳವಾದರೆ
ಈಶ್ವರನೊಡೆಯಿಕ್ಕದೆ ಮಾಣುವನೆ ?
ಪಾತ್ರ ಅಪಾತ್ರವೆಂದು ಕಂಡರೆ ಶಿವನೆಂತು ಮೆಚ್ಚುವನು ?
ಜೀವ ಜೀವಾತ್ಮನ ಸರಿಯೆಂದು ಕಂಡರೆ
ಸಮವೇದಿಸದಿಪ್ಪನೆ ಶಿವನು ?
ತನ್ನ ಮನದಲ್ಲಿ ' ಯತ್ರ ಜೀವಸ್ತತ್ರ ಶಿವ ' ನೆಂದು
ಸರ್ವಜೀವದಯಾಪಾರಿಯಾದಲ್ಲಿ ಕೂಡಲ ಸಂಗಮದೇವನು
ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೆ ? ‖ ೮೦೪ ‖

೧೦

ಸ್ಥಾವರ ಜಂಗಮವೆಂಬುಭಯಪಕ್ಷ ಒಂದೇ :
ಆವ ಮುಖದಲಿ ಬಂದರೂ ತೃಪ್ತಿಯೊಂದೇ;
ಕೂಡಲ ಸಂಗಮದೇವರ ಆಪ್ಯಾಯನವೊಂದೇ. ‖ ೮೦೫ ‖

೧೧

ಮುತ್ತು ಉದಕದಲಾಗದು, ಉದಕ ಮುತ್ತಿನಲಾಗದು :
ತತ್ತ್ವಘಟಿಸಿದ ಸುಮುಹೂರ್ತದಲ್ಲಲ್ಲದೆ,
ಚಿತ್ತವೇದ್ಯವಾಗದು ಸದ್ಗುರುವಿನ ಕರಣಕ್ಕಲ್ಲದೆ.
ಕರ್ತೃ ಕೂಡಲ ಸಂಗಮದೇವರ ಒಲವಿನ ದಯದ
ಚಿತ್ತವಿಡಿದಂಗಲ್ಲದೆ ಶಿವತತ್ತ್ವ ಸಾಹಿತ್ಯವಾಗದು. ‖ ೮೦೬ ‖

೧೨

ಕಾಯದ ಗಡಣೆ ಕೆಲಬರಿಗುಂಟು,
ಜೀವದ ಗಡಣೆ ಕೆಲಬರಿಗುಂಟು,
ಭಾವದ ಗಡಣೆ ಕೆಲಬರಿಗುಂಟು,
ವಚನದ ಗಡಣೆ ಕೆಲಬರಿಗುಂಟು :
ಪ್ರಾಣಲಿಂಗದ ಗಡಣೆ ಆರಿಗೂ ಇಲ್ಲ,
ಕೂಡಲ ಸಂಗನ ಶರಣರಲ್ಲಿ, ತಂಗಟೂರ ಮಾರಯ್ಯಂಗಲ್ಲದೆ. ‖೮೦೭‖

೧೩

ಚಂದ್ರಕಾಂತದ ಶಿಲೆಯಲ್ಲಿ ಜಲವಿಲ್ಲದನ್ನಕ್ಕ
ಶೈತ್ಯವ ತೋಱುವ ಪರಿಯೆಂತೊ ?
ಸೂರ್ಯಕಾಂತದ ಶಿಲೆಯಲ್ಲಿ ಅಗ್ನಿಯಿಲ್ಲದನ್ನಕ್ಕ
ಉಷ್ಣವ ತೋಱುವ ಪರಿಯೆಂತೊ ?
ಶರಣಂಗೆ ಭಕ್ತಿಕಾಯವಿಲ್ಲದನ್ನಕ್ಕ
ಕೂಡಲ ಸಂಗಯ್ಯನನಱುವ ಪರಿಯೆಂತೊ ? || ೮೦೮ ||

೧೪

ಮುನ್ನೂಱಱುವತ್ತು ನಕ್ಷತ್ರಕ್ಕೆ ಬಾಯಿಬಿಟ್ಟುಕೊಂಡಿಪ್ಪುದೆ ಸಿಂಪು ?
ಅದು ಸ್ವಾತಿಗಲ್ಲದೆ ಬಾಯ್ದೆಱೆಯದು, ಕೇಳು, ಕೇಳಾ, ತಂದೇ :
ಎಲ್ಲವಕ್ಕೆ ಬಾಯ ಬಿಟ್ಟರೆ ತಾನೆಲ್ಲಿಯ ಮುತ್ತಪ್ಪುದೊ ?
ಪರಮಂಗಲ್ಲದೆ ಹರುಷತಿಕೆಯಿಲ್ಲೆಂದು
ಕರಣಾದಿಗುಣಂಗಳ ಮಱೆದರು;
ಇದು ಕಾರಣ, ಕೂಡಲ ಸಂಗನ ಶರಣರು ಸಪ್ತವ್ಯಸನಿಗಳಲ್ಲಾಗಿ.
|| ೮೦೯ ||

## (೩೧) ಪ್ರಾಣಲಿಂಗಿಯ ಪ್ರಾಣಲಿಂಗಿಸ್ಥಳ

೧

ಮೈಗೆ ಕಾಹ ಹೇಳುವರಲ್ಲದೆ ಮನಕ್ಕೆ ಕಾಹ ಹೇಳುವರೆ ?
ಅಣಕದ ಮಿಂಡನ ಹೊಸ ಪರಿಯ ನೋಡಾ :
ಕೂಡಲ ಸಂಗಮದೇವನೆನ್ನ ಮನವ ನಂಬದೆ
ತನ್ನಲ್ಲಿದ್ದ ಲೇಸ ಕಾಹ ಹೇಳಿದನು ! || ೮೧೦ ||

೨

ಮನವಂಚನೆಯೆ ಅನ್ಯಲಿಂಗಾರ್ಚನೆ;
ಅದು ನಿಜವಲ್ಲ, ನಿಜವಲ್ಲಾ;
ಕೂಡಲ ಸಂಗಮದೇವನು ಮನದಂತರ್ಯಾಮಿ ತಾನಾಗಿ. || ೮೧೧ ||

೩

ಸರ್ಪನ ಸಂಯೋಗ, ಜ್ಯೋತಿಯು ಪತಂಗನ ಬೆಸನದಂತೆ—
ಮನದ ಮದವಱಿಯದೆ, ನಿಮ್ಮ ಕೃಪೆಯಿಂದೆ ನಿಮ್ಮ ನೆನೆವೆ.
ಎನ್ನ ಭಾವದ ಕೊನೆಯ ಮೊನೆಯ ಮೇಲೆ
ಮನೆಯ ಮಾಡಿಕೊಂಡಿಪ್ಪೆಯಯ್ಯಾ, ಕೂಡಲ ಸಂಗಮದೇವಾ.
ನೀನೆನ್ನ ಪ್ರಾಣನಾಥನಾಗಿ. || ೮೧೨ ||

೪

ಪೃಥಿವಿಯಪ್ಪು ತೇಜ ವಾಯುವಾಕಾಶ ನಿರಂಜನದೇವಾ
ನಿಮ್ಮ ಮಹಿಮೆಯ ಪ್ರಣವಸ್ವರೂಪಂಗಲ್ಲದೆ
ಕಾಣಲಾರಿಗೆಯೂ ಬಾರದಯ್ಯಾ.
ಜ್ಞಾನಜ್ಯೋತಿಧ್ಯಾನದಿಂದ ನಾಳಶುದ್ಧದ್ವಾರನಾಗಿ
ಆರಾಧಿಸಿ ಕಂಡೆ ನಮ್ಮ ಕೂಡಲ ಸಂಗಮದೇವನ. || ೮೧೩ ||

೫

ಪಶ್ಚಿಮಪದ್ಮಾಸನದಲ್ಲಿ ಕುಳಿತು ನೆಟ್ಟೆಲುವ ಮುಱಿದು
ತುಟಿ ಮಿಡುಕದೆ ಅಟ್ಟಿಯಾಡಿತ್ತಲ್ಲಾ !
ಬಿಟ್ಟ ಕಣ್ಣು ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ,
ಕಟ್ಟುಗುಡಿಯ ಕೂಡಲ ಸಂಗಮದೇವ ಹಿಡಿವಡೆದ ! || ೮೧೪ ||

೬

ಸುನಾದಬಿಂದುಪ್ರಣವಮಂತ್ರ ಅಗ್ರದ ಕೊನೆಯಲ್ಲೈದುವುದೆ :
'ಸೋಹಂ ಸೋಹಂ' ಎಂಬೆನುತಿದ್ದಿತ್ತು,
'ಕೋಹಂ' ಎಂಬುದ ಕಳೆವು ಬ್ರಹ್ಮರಂಧ್ರದೊಳಗೆ;
ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ ॥
ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನ ॥
ಇಂತೆಂದುದಾಗಿ,
ಅಗಮ್ಯ ಕೂಡಲ ಸಂಗಮದೇವನಲ್ಲದೆ ಮತ್ತಾರೂ ಇಲ್ಲಾ ! ||೮೧೫||

೭

ಬೆಳಗಿನೊಳಗಣ ಬೆಳಗು, ಮಹಾಬೆಳಗು !
ಶಿವ ಶಿವಾ, ಪರಮಾಶ್ರಯವೇ ತಾನಾಗಿ
ಶತಪತ್ರಕಮಳಕರ್ಣಿಕಾಮಧ್ಯದಲ್ಲಿ
ಸ್ವತಃ ಸಿದ್ಧನಾಗಿರ್ಪ ನಮ್ಮ ಕೂಡಲ ಸಂಗಮದೇವ. || ೮೧೭ ||

೮

ಆಚಾರ ವಿಚಾರವೆಂದಱಿಯದ ಕಾರಣ
ಷಡುದರುಶನಂಗಳೆಲ್ಲಾ ತಮತಮಗೆ ಶರಣೆನ್ನುತ್ತಿದ್ದುವು;
ಮಹತ್ವದ ಸಮಯಾದಿ ಶೈವಂಗಳೆಂಬುವೆಲ್ಲಾ ಶರಣೆನ್ನುತ್ತಿದ್ದುವು !
ನಮ್ಮ ಕೂಡಲ ಸಂಗನ ಶರಣರು ಮಾಡಿದ ವಿನಿಯೋಗ
ಬಹಿರಂಗದಲ್ಲಿ ವರ್ತಿಸುವವರಿಗೆ ಎಲ್ಲಿಯದೊ ? || ೮೧೭ ||

೯

ತಮತಮಗೆಲ್ಲ ನೊಸಲ ಕಣ್ಣವರು, ತಮತಮಗೆಲ್ಲ ನಂದಿವಾಹನರು,
ತಮತಮಗೆಲ್ಲಾ ಖಟ್ವಾಂಗಕಪಾಲತ್ರಿಶೂಲಧರರು :
ದೇವರಾರು ಭಕ್ತರಾರು ಹೇಳಿರಯ್ಯಾ !
ಕೂಡಲ ಸಂಗಮದೇವಾ, ನಿಮ್ಮ ಶರಣರು ಸ್ವತಂತ್ರರು :
ಎನ್ನ ಬಚ್ಚಬಱಿಯ ಬಸವನೆನಿಸಯ್ಯಾ. || ೮೧೮ ||

೧೦

ಗುರುವಿನಲ್ಲಿ ಸದಾಚಾರ : ಲಿಂಗದಲ್ಲಿ ಅನುದಿನವೇಳೆ.
ಜಂಗಮದಲ್ಲನುಭಾವ, ಸಮಯಾಚಾರ : ಲಿಂಗದಲ್ಲಿ ಅನುದಿನವೇಳೆ.
ಈ ಉಭಯಾಚಾರದಿಂದ ತಿಳಿದ ತಿಳಿವು : ಲಿಂಗದಲ್ಲಿ ಅನುದಿನವೇಳೆ;
ಬೇಱೆ ತೋಱಲಿಲ್ಲಾ :
ಲಿಂಗಜಂಗಮದಲ್ಲಿ ಲೀಯವಾದಾಚಾರ ಸಮಯಾಚಾರ.
ಇದು ಕಾರಣ, ಕೂಡಲ ಸಂಗಮದೇವಾ, ಲಿಂಗದಲ್ಲಿ ಅನುದಿನವೇಳೆ !
|| ೮೧೯ ||

೧೧

ಉಳ್ಳವರು ಶಿವಾಲಯವ ಮಾಡುವರು :
ನಾನೇನ ಮಾಡುವೆ ? ಬಡವನಯ್ಯಾ.
ಎನ್ನ ಕಾಲೇ ಕಂಭ, ದೇಹವೇ ದೇಗುಲ,
ಸಿರ ಹೊನ್ನ ಕಳಸವಯ್ಯಾ.
ಕೂಡಲ ಸಂಗಮದೇವ, ಕೇಳಯ್ಯಾ :
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲಾ ! || ೮೨೦ ||

## (೩೨) ಪ್ರಾಣಲಿಂಗಿಯ ಭಕ್ತಸ್ಥಳ

೧

ಅಷ್ಟದಳ ಕಮಳಾತ್ಮದೊಳಗೆ ನೆಟ್ಟನೆ ಮನಃಪ್ರೇರಕನೆಂದು
ನಿಮ್ಮ ನಂಬಿದೆ, ಮತ್ತೊಂದನಱಿಯೆ.
ನಿತ್ಯಸ್ವತಂತ್ರನು ನೀನೇ ದೃಷ್ಟ : ಲಿಂಗಜಂಗಮ ಒಂದೆ ಎಂದಿಪ್ಪೆನು,
ಪರಮಪ್ರಭುವೆ, ಕೂಡಲ ಸಂಗಮದೇವಾ. || ೮೨೧ ||

೨

ನಿನ್ನ ನಾನಱಿಯದ ಮುನ್ನ ನೀನೆಲ್ಲಿದ್ದೆ ?
ಎನ್ನೊಳಗಿದ್ದು ನಿನ್ನ ತೋಱಲಿಕೆ ನೀನೇ ರೂಪಾದೆ.
ಇನ್ನು ಜಂಗಮವೆ ಲಿಂಗವೆಂದು ನಂಬಿದೆ,
ಕೂಡಲ ಸಂಗಮದೇವಾ. || ೮೨೨ ||

೩

ಗುರು ಮುನಿದರೆ ಒಂದು ದಿನ ತಾಳುವೆ,
ಲಿಂಗ ಮುನಿದರೆ ದಿನವರೆ ತಾಳುವೆ;
ಜಂಗಮ ಮುನಿದರೆ ಕ್ಷಣಮಾತ್ರ ತಾಳಿದೆನಾದರೆ
ಎನ್ನ ಪ್ರಾಣದ ಹೋಕು ! ಕೂಡಲ ಸಂಗಮದೇವಾ. || ೮೨೩ ||

೪

ಅರಸು ಮುನಿದರೆ ನಾಡೊಳಗಿರಬಾರದಯ್ಯಾ;
ಗಂಡ ಮುನಿದರೆ ಹೆಂಡತಿಗೆ ಇರಬಾರದಯ್ಯಾ.

ಕೂಡಲ ಸಂಗಮದೇವಯ್ಯಾ,
ಜಂಗಮ ಮುನಿದರೆ ನಾನೆಂತು ಬದುಕುವೆ? || ೮೨೪ ||

೫

ರಚ್ಚೆಯ ನೆರವಿಗೆ ನಾಣುನುಡಿಯಿಲ್ಲದಿಹುದೆ ?
ಅದಱಿಂತೆ ಎನಬಹುದೆ ಸಜ್ಜನಸ್ತ್ರೀಯ ?
ಅದಱಿಂತೆ ಎನಬಹುದೆ ಭಕ್ತಿಯ ರತಿಯ ?
ಕರುಳ ಕಲೆ ಪ್ರಕಟಿತವುಂಟೆ, ಕೂಡಲ ಸಂಗಮದೇವಾ ? || ೮೨೫ ||

೬

ಭೂತವೊಲಿದು ಆತ್ಮನ ಸೋಂಕಿದ ಬಳಿಕ
ಭೂತದ ಗುಣವಲ್ಲದೆ ಆತ್ಮನ ಗುಣವುಂಟೆ ?
ಗುರುಕಾರುಣ್ಯವಾಗಿ ಹಸ್ತಮಸ್ತಕಸಂಯೋಗವಾದ ಬಳಿಕ
ಗುರುಲಿಂಗಜಂಗಮವೆ ಗತಿಯಾಗಿದ್ದೆ, ಕಾಣಾ,
ಕೂಡಲ ಸಂಗಮದೇವಾ. || ೮೨೬ ||

೭

ಹಸಿವು ತೃಷೆ ನಿದ್ರೆ ವಿಷಯಂಗಳ ಮಱೆದೆ : ನೀವು ಕಾರಣ.
ಕಾಮಕ್ರೋಧಲೋಭಮೋಹಮದಮತ್ಸರಂಗಳ ಮಱೆದೆ: ನೀವು ಕಾರಣ.
ಪಂಚೇಂದ್ರಿಯ, ಸಪ್ತಧಾತು, ಅಷ್ಟಮದಂಗಳ ಮಱೆದೆ: ನೀವು ಕಾರಣ.
ಕೂಡಲ ಸಂಗಮದೇವಯ್ಯಾ,
ನಿಮ್ಮ ಶರಣರಿಗೆ ಆಪ್ಯಾಯನವಾದರೆ ಎನಗೆ ತೃಪ್ತಿಯಾಯಿತ್ತು ! || ೮೨೭ ||

೮

ತನು ನಿಮ್ಮದೆಂದ ಬಳಿಕ ಎನಗೆ ಬೇಱೆ ಮನವಿಲ್ಲ;
ಧನ ನಿಮ್ಮದೆಂದ ಬಳಿಕ ಎನಗೆ ಬೇಱೆ ಧನವಿಲ್ಲ.
ಇಂತೀ ತ್ರಿವಿಧವೂ ನಿಮ್ಮದೆಂದಱಿದ ಬಳಿಕ
ಎನಗೆ ಬೇಱೆ ವಿಚಾರವುಂಟೆ, ಕೂಡಲ ಸಂಗಮದೇವಾ ? ||೮೨೮||

## (೩೩) ಪ್ರಾಣಲಿಂಗಿಯ ಮಾಹೇಶ್ವರಸ್ಥಳ

೧

ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ ನಿಮ್ಮ ಧರ್ಮ !
ಬೊಬ್ಬಿಡದಿರಿಂ ಭೋ, ನಿಮ್ಮ ಧರ್ಮ !
ಆಱಡದಿರಿಂ ಭೋ, ನಿಮ್ಮ ಧರ್ಮ !
ಅಲ್ಲಿ ಉಂಬರೆ ಸಂಗ, ಇಲ್ಲಿ ಉಂಬರೆ ಸಂಗ !
ಕೂಡಲ ಸಂಗಮದೇವ ಏಕೋಭಾವ. || ೮೨೯ ||

೨

ಅರ್ಥಪ್ರಾಣಾಭಿಮಾನವನೊಪ್ಪಿಸಿದಲ್ಲಿ ಭಕ್ತನಪ್ಪನೆ ? ಅಲ್ಲ.
ಆದಿರುದ್ರನ ಮಗಳು ಆದಿಶಕ್ತಿ; ಆದಿಶಕ್ತಿಯ ಮಗ ವಿಷ್ಣು;
ವಿಷ್ಣುವಿನ ಅರ್ಧಾಂಗಿ ಲಕ್ಷ್ಮಿ;
ಈ ತೊತ್ತಿನ ತೊತ್ತಿನ ಪಡಿದೊತ್ತನೊಪ್ಪಿಸಿದಲ್ಲಿ ಭಕ್ತನಪ್ಪನೆ ? ಅಲ್ಲ.
ಎನ್ನ ಮನದೊಡೆಯ ಮಹಾದೇವಾ,
ನಿಮ್ಮ ಮನವ ನಿಮಗೊಪ್ಪಿಸಿ ನಾ ಶುದ್ಧ, ಕಾಣಾ !
ಕೂಡಲ ಸಂಗಮದೇವಾ. || ೮೩೦ ||

೩

ಮಾಡುವಾತ ನಾನಲ್ಲಯ್ಯಾ; ನೀಡುವಾತ ನಾನಲ್ಲಯ್ಯಾ.
ಬೇಡುವಾತ ನಾನಲ್ಲಯ್ಯಾ, ನಿಮ್ಮ ಕಾರುಣ್ಯವಲ್ಲದೆ, ಎಲೆ ದೇವಾ !
ಮನೆಯ ತೊತ್ತಲಿಸಿದರೆ ಒಡತಿ ಮಾಡಿಕೊಂಬಂತೆ
ನಿನಗೆ ನೀ ಮಾಡಿಕೊ, ಕೂಡಲ ಸಂಗಮದೇವಾ. || ೮೩೧ ||

೪

ಮುನ್ನಿನ ಜನ್ಮದಲ್ಲಿ ಗುರುಲಿಂಗಜಂಗಮವ ಪೂಜಿಸಲಱಿಯದ ಕಾರಣ
ಬಹುಜನ್ಮಕ್ಕೆ ತಂದಿಕ್ಕಿದೆಯಯ್ಯಾ ಎನ್ನನು.
ಎನಗೆ ಗುರುಪಥವ ತೋಱಿದವರಾರು ?
ಲಿಂಗಪಥವ ತೋಱಿದವರಾರು ?
ಜಂಗಮಪಥವ ತೋಱಿದವರಾರು ?
ಪಾದೋದಕಪ್ರಸಾದವ ತೋಱಿದವರಾರು ?

ತೋಱುವ ಮನವೆ ನೀವೆಂದಱಿದೆ :
ಎನಗಿನ್ನಾವ ಭಯವಿಲ್ಲಾ, ಕೂಡಲ ಸಂಗಮದೇವಾ. || ೮೩೨ ||

## (೩೪) ಪ್ರಾಣಲಿಂಗಿಯ ಪ್ರಸಾದಿಸ್ಥಳ

೧

ಜನ್ಮಜನ್ಮಕ್ಕೆ ಹೋಗಲೀಯದೆ, ' ಸೋಹಂ ' ಎಂದೆನಿಸದೆ
' ದಾಸೋಹಂ ' ಎಂದೆನಿಸಯ್ಯಾ.
ಲಿಂಗಜಂಗಮದ ಪ್ರಸಾದದ ನಿಲವ ತೋಱಿ ಬದುಕಿಸಯ್ಯಾ,
ಕೂಡಲ ಸಂಗಮದೇವಾ, ನಿಮ್ಮ ಧರ್ಮ ! || ೮೩೩ ||

೨

ಆಶೆಯಾಮಿಷ ತಾಮಸದಿಂದ ಭವಬಂಧನವಾದುದನಱಿಯಾ;
ತ್ರಿವಿಧ ತ್ರಿವಿಧಾವಸ್ಥೆಯ ಮಱೆಯಾ !
' ಓಂ ನಮಃ ಶಿವಾಯ, ಶರಣೆ 'ಂಬುದ ಬಿಡದೆ ನೆನೆಯಾ, ಮನವೆ !
' ಮಹಂತ ಶಿವಲಿಂಗಸ್ಯ ಮಹಂತೋ ಜಂಗಮಸ್ತಥಾ '
ಕೂಡಲ ಸಂಗನ ಪ್ರಸಾದಸಾನ್ನಿಧ್ಯದಿಂದ
ಭವಜನ್ಮ ಕರ್ಮ ಪಂಚಭೂತಪೂರ್ವನಾಸ್ತಿ. || ೮೩೪ ||

೩

ಬೆಟ್ಟಕ್ಕೆ ಬೆಳ್ವಾರ ಸುತ್ತಿತ್ತಯ್ಯಾ :
ಪಾಪದ ಒಲೆಯ ತಂದು ಮುಂದೊಡ್ಡಿದರಯ್ಯಾ.
ಬೇಟೆಕಾಱನು ಮೃಗವನಟ್ಟೆ, ಮೃಗ ಗೋರಿಗೊಳಗಾಗದಯ್ಯಾ !
ಹರನೊಡ್ಡಿದ ಬಲೆಯಲ್ಲಿ ಸಿಲುಕಿದ ಮೃಗವು
ಕೂಡಲ ಸಂಗಮಂಗೆ ಓಗರವಾಯಿತ್ತಯ್ಯಾ ! || ೮೩೫ ||

೪

ಪರಿಯಾಣವೆ ಭಾಜನವೆಂಬರು : ಪರಿಯಣ ಭಾಜನವಲ್ಲ :
ಲಿಂಗಕ್ಕೆ ತನ್ನ ಮನವೆ ಭಾಜನ.
ಪ್ರಾಣವನು ಬೀಸರವೋಗದೆ ಮೀಸಲಾಗರ್ಪಿಸ ಬಲ್ಲರೆ
ಕೂಡಿಕೊಂಡಿರ್ಪ ನಮ್ಮ ಕೂಡಲ ಸಂಗಮದೇವ. || ೮೩೬ ||

೫

ಆತ್ಮ ಲಿಂಗ, ಪರಮಾತ್ಮ ಜಂಗಮ;
ತನು ಮಧ್ಯೆ ಪ್ರಸಾದವಾಯಿತ್ತು,
ನಿಶ್ಚಿಂತ ನಿವಾಸವಾಯಿತ್ತು—
ಕೂಡಲ ಸಂಗನ ಶರಣರ ಸಂಗದಿಂದ
ನಿಶ್ಚಿಂತ ನಿವಾಸವಾಯಿತ್ತು ! ‖ ೮೩೭ ‖

೬

ಲೋಹ ಪರುಷವ ಮುಟ್ಟುವುದಲ್ಲದೆ,
ಪರುಷ ಪರುಷವ ಮುಟ್ಟುವುದೆ, ಅಯ್ಯಾ ?
ಅಂಗವಿಡಿದಂಗೆ ಪ್ರಸಾದವಲ್ಲದೆ, ಲಿಂಗವಿಡಿದಂಗೆ ಪ್ರಸಾದವೆಲ್ಲಿಯದೊ ?
‘ ಅಣೋರಣೀಯಾನ್ ಮಹತೋ ಮಹೀಯಾನ್, ’
ಹಿರಿದಕ್ಕೆ ಹಿರಿದು ಕಿಱಿದಕ್ಕೆ ಕಿಱಿದು
ವಾಗ್ಮನಕ್ಕಗೋಚರ—
ಕೂಡಲ ಸಂಗಮದೇವ ಸ್ವರೂಪು :
ಪ್ರಸಾದ ನಿರೂಪು, ಲಿಂಗೈಕ್ಯ ! ‖ ೮೩೮ ‖

೭

ಜಂಗಮವೆ ಲಿಂಗವೆನಗೆ, ಜಂಗಮವೆ ಪ್ರಾಣವೆನಗೆ.
ಕೂಡಲ ಸಂಗಮದೇವಯ್ಯಾ, ಎನಗೆಯೂ ನಿನಗೆಯೂ
ಜಂಗಮಪ್ರಸಾದವೇ ಪ್ರಾಣ. ‖ ೮೩೯ ‖

೮

ಅಯ್ಯಾ, ನೀನೆಂದರೆ ಎಂಬೆನು :
“ ನಿನ್ನ ಹಂಗೇನು ಹರಿಯೇನು ?
ನಿನ್ನ ಮುಖದಲ್ಲಿ ಒಂದಗುಳು ಸವೆಯದು;
ನಿನ್ನ ಪ್ರಸಾದವ ಕೊಂಡೆನ್ನ ಭವಕ್ಕೆ ಬೀಜವಾಯಿತ್ತು !
ಜಂಗಮವೆ ಲಿಂಗವೆಂದು ಒಕ್ಕುದ ಕೊಂಡರೆ
ಎನ್ನ ‘ಭವಂ ನಾಸ್ತಿ’ಯಾಯಿತ್ತು ! ಕೂಡಲ ಸಂಗಮದೇವಾ ” ‖ ೮೪೦ ‖

೯

ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯಾ;
ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯಾ;
ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯಾ;
ಪರುಷದ ಬಲದಿಂದ ಅವಲೋಹದ ಕೇಡ ನೋಡಯ್ಯಾ !
ಕೂಡಲ ಸಂಗನ ಶರಣರ ಅನುಭಾವದಿಂದ
ಎನ್ನ ಮನದ ಕೇಡ ನೋಡಯ್ಯಾ ! ‖ ೮೪೧ ‖

೧೦

ಆದ್ಯರ ವಚನ ಆದ್ಯರಿಗಾಯಿತ್ತು :
ವೇದ್ಯರಿಗಲ್ಲದೆ ಸಾಧ್ಯವಾಗದು.
ಕೂಡಲ ಸಂಗಮದೇವಾ, ನಿಮ್ಮ ಅನುಭಾವದಿಂದ
ಎನ್ನ ' ಭವಂ ನಾಸ್ತಿ ' ಯಾಯಿತ್ತು. ‖ ೮೪೨ ‖

೧೧

ಅಸಂಬಂಧೆ ಸಂಬಂಧವಾಯಿತ್ತು
ಲಿಂಗಸಾರಾಯರ ಸನುಮತದಿಂದ;
ಉತ್ತಮ ಮಧ್ಯಮವ ಕೆಡಿಸಿತ್ತು
ಏಕೋ ಸತಿಪತಿ ಗುಣದಿಂದ—
ಗರುವರ ಗರುವತನವ ಕೂಡಲ ಸಂಗಯ್ಯನನುಭಾವದಿಂದ ‖ ೮೪೩ ‖

## (೩೫) ಪ್ರಾಣಲಿಂಗಿಯ ಶರಣಸ್ಥಳ

೧

ಶರಣಸನ್ನಿಹಿತನೈಕ್ಯವಹಲ್ಲಿ ಹರಿ ಬ್ರಹ್ಮಾದಿಗಳು ಮೊದಲಾದ
ತೆತ್ತೀಸಾದಿ ದೇವರ್ಕಳು ' ಉಘೆ, ಉಘೆ ' ಎನುತಿರಲು
' ಐಕ್ಯ ಬಸವಣ್ಣಂಗೆ ಠಾವಾವುದಯ್ಯಾ ? ' ಎಂದೊಡೆ:—
ಅಂಗದ ಕಳೆಯಲ್ಲಿ ಬಲದಲ್ಲಿ ಬ್ರಹ್ಮನ ಸ್ಥಾನ,
ಎಡದಲ್ಲಿ ನಾರಾಯಣನ ಸ್ಥಾನ, ಒಲ್ಲೆನಯ್ಯಾ !

ಕೊರಳು ಗರಳಸ್ಥಾನ, ಬಾಯಿ ಅಪ್ಪುವಿನ ಸ್ಥಾನ,
ನಾಸಿಕ ವಾಯುವಿನ ಸ್ಥಾನ, ಕಣ್ಗಳು ಅಗ್ನಿಸ್ಥಾನ,
ಜೆಡೆ ಗಂಗೆಯ ಸ್ಥಾನ, ನೊಸಲು ಚಂದ್ರನ ಸ್ಥಾನ,
ಹಿಂದು ಸೂರ್ಯನ ಸ್ಥಾನ,
ಚರಣಂಗಳು ಅಷ್ಟದಿಕ್ಪಾಲಕರ ಸ್ಥಾನಂಗಳು,
ಗುಹ್ಯ ಕಾಮನ ಸ್ಥಾನ,
ಹಸ್ತಂಗಳು ಕಪಾಲ ಖಟ್ವಾಂಗ ತ್ರಿಶೂಲ ಡಮರುಗಸ್ಥಾನ,
ದೇಹ ರುಂಡಮಾಲೆಯ ಸ್ಥಾನ, ಕರ್ಣ ನಾಗೇಂದ್ರನ ಸ್ಥಾನ—
ಇಂತೀ ಸ್ಥಾನಂಗಳ ನಾನೊಲ್ಲೆನಯ್ಯಾ !
ಹೃದಯಕಮಳಮಧ್ಯದ ಅಂತರಾಳದ
ಏಕಪೀಠದ ಸಿಂಹಾಸನದ ತೆಱಹ ಕೊಡು,
**ಕೂಡಲ ಸಂಗಮದೇವಾ !** ॥ ೮೪೪ ॥

೨

ನೀನೊಲಿದರೆ ಒಲಿ; ಒಲ್ಲದಿದ್ದರೆ ಸಮವೇದಿಸಿಕೊಳ್ಳಯ್ಯಾ;
ಲಿಂಗದ ಬೆಳಗನೊಳಕೊಂಡು ಸಮವೇದಿಸಿಕೊಳ್ಳಯ್ಯಾ.
ಕೂಡಲ ಸಂಗಮದೇವನಲ್ಲಿ ತದ್ಗತವಾದೆನಯ್ಯಾ ! ॥ ೮೪೫ ॥

೩

ಮಾಡುವರಿಲ್ಲ, ನೀ ಮಾಡದೆ ನಿಲ ಸಾಲೆ;
ಬೇಡುವರಿಲ್ಲ, ನೀ ಬೇಡದೆ ನಿಲ ಸಾಲೆ;
ಕೂಡುವರಿಲ್ಲ, ನೀ ಕೂಡದೆ ನಿಲ ಸಾಲೆ;
ಕೂಡಲ ಸಂಗಮದೇವ
ತಾನು ತಾನಾಗಿ ನೋಡದೆ ನಿಲ ಸಾಲೆ ! ॥ ೮೪೬ ॥

೪

ಆಲಿಕಲ್ಲ ಹರಳಿನಂತೆ, ಅರಗಿನ ಪುತ್ತಳಿಯಂತೆ
ತನು ಕರಗಿ ನೆರೆವ ಸುಖವ ನಾನೇನೆಂಬೆ ?
ಕಡೆಗೋಡಿವರಿದುವೆನಗಯ್ಯಾ ನಯನದ ಸುಖಜಲಂಗಳು !

ನಮ್ಮ ಕೂಡಲ ಸಂಗಮದೇವರ ಮುಟ್ಟಿ
  ನೆರೆವ ಸುಖವ ನಾನಾರಿಗೇನೆಂಬೆ ? || ೮೪೭ ||

೫

ನಾಲಗೆ ತಾಗಿದ ರುಚಿಗೆ ಮನವೇ ಸಾಕ್ಷಿ, ಸಾಲದೆ, ಅಯ್ಯಾ ?
ಮೂಲೆಗಾಱಿನ ಕೇಳಿ ನನೆ ಅರಳುವುದೆ ?
ಆಗಮವನಿದಿರಿಂಗೆ ತೋಱುವುದು ಆಚಾರವೆ, ಅಯ್ಯಾ ?
ನಮ್ಮ ಕೂಡಲ ಸಂಗನ ಕೂಡಿದ ಕೂಟದ ಕರುಳ ಕಲೆಯನು
  ಇದಿರಿಂಗೆ ತೋಱುವುದು ಆಚಾರವೆ, ಅಯ್ಯಾ ? || ೮೪೮ ||

## (೩೫) ಪ್ರಾಣಲಿಂಗಿಯ ಐಕ್ಯಸ್ಥಳ

೧

ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ :
  ನಮ್ಮ ನಲ್ಲ ಸುಳಿಯಲಿಲ್ಲ; ಸುಳಿದು ಸಿಂಗಾರವ ಮಾಡಲಿಲ್ಲ !
  ಕೂಡಲ ಸಂಗಮದೇವನು ತನ್ನೊಳಗೆ ಬೈಚಿಟ್ಟನಾಗಿ. || ೮೪೯ ||

೨

ಜ್ಞಾನದ ಗಮನದ ಸಹಜದ ಉದಯದಲ್ಲಿ ಏನೆಂದಱಿಯೆನು;
  ಲಿಂಗದ ಬೆಳಗು ಒಳಕೊಂಡುದಾಗಿ ಏನೆಂದಱಿಯೆನು;
  ಕೂಡಲ ಸಂಗನ ಧ್ಯಾನದಿಂದ ನಾನೇನೆಂದಱಿಯೆನು ! || ೮೫೦ ||

೩

ಕಾಯವೆಂಬ ಘಟಕ್ಕೆ ಚೈತನ್ಯವೆ ಸುಯಿದಾನ,
  ಸಮತೆಯೆಂಬ ಜಲ, ಕರಣಾದಿಗಳೆ ಶ್ರವಣ;
  ಜ್ಞಾನವೆಂಬಗ್ನಿಯನಿಕ್ಕಿ,
  ಮತಿಯೆಂಬ ಸಟ್ಟುಗದಲ್ಲಿ ಘಟ್ಟಿಸಿ ಪಾಕಕ್ಕೆ ತಂದು,
  ಭಾವದಲ್ಲಿ ಕುಳ್ಳಿರಿಸಿ, ಪರಿಣಾಮದೋಗರವ ನೀಡಿದರೆ
  ಕೂಡಲ ಸಂಗಮದೇವಂಗೆ ಆರೋಗಣೆಯಾಯಿತ್ತು. || ೮೫೧ ||

೪

ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ,
ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ,
ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ,
ಮನ ತುಂಬಿದ ಬಳಿಕ ನೆನೆಯಲಿಲ್ಲ
ಮಹಂತ ಕೂಡಲ ಸಂಗಮದೇವನ ! || ೮೫೨ ||

೫

ಅಡಿಗಡಿಗೆ ಸ್ಥಾನನಿಧಿ, ಅಡಿಗಡಿಗೆ ದಿವ್ಯಕ್ಷೇತ್ರ,
ಅಡಿಗಡಿಗೆ ನಿಧಿಯೂ ನಿಧಾನ, ನೋಡಾ !
ಆತನ ಇರವೆ ವಾರಣಾಸಿ, ಅವಿಮುಕ್ತಿಕ್ಷೇತ್ರ :
ಕೂಡಲ ಸಂಗನ ಶರಣ ಸ್ವತಂತ್ರನಾಗಿ. || ೮೫೩ ||

---

# ಶರಣ ಸ್ಥಳ

## (೩೬) ಶರಣನ ಜ್ಞಾನಿಸ್ಥಳ

೧

ಧನದಲ್ಲ ಶುಚಿ, ಪ್ರಾಣದಲ್ಲಿ ನಿರ್ಭಯು :
ಇದಾವಂಗಳವಡುವುದಯ್ಯಾ ?
ನಿಧಾನ ತಪ್ಪಿ ಬಂದರೆ ಒಲ್ಲೆನೆಂಬವರಿಲ್ಲ;
ಪ್ರಮಾದವಶದಿಂ ಬಂದರೆ ಹುಸಿಯೆನೆಂಬವರಿಲ್ಲ.
ನಿರಾಶೆ-ನಿರ್ಭಯು, ಕೂಡಲ ಸಂಗಮದೇವಾ,
ನೀನೊಲಿದ ಶರಣಂಗಲ್ಲದಿಲ್ಲ ! || ೮೨೪ ||

೨

ಶರಣಸನ್ಮತವಪ್ಪ ನಿಜಗುಣಭರಿತನಪ್ಪಡೆ
ಸತ್ತ್ವರಜ ತಮ ಕ್ರೋಧ ಬಿಡದನ್ನಕ್ಕ,
ಅನುಭಾವವೆಲ್ಲಿಯದೊ—
ಆತ್ಮಸ್ತುತಿ ಪರನಿಂದೆಯು ಬಿಡದನ್ನಕ್ಕ,
ಅರಿಷಡ್ವರ್ಗ ದಶವಾಯು ಬೆರಸಿರ್ಪ
ಕಳಂಕವಪ್ಪ ತನು ಬಿಡದನ್ನಕ್ಕ ?
ಸಂಸಾರ ಮಾಣ್ದಲ್ಲದೆ
ಶರಣ ಸಜ್ಜನಿಕೆ, ಸಮಯಾಚಾರ ನಿಜವ್ರತವು
ದುರಾಚಾರಿಗಳಿಗಳವಡದು
ನಮ್ಮ ಕೂಡಲ ಸಂಗನ ಶರಣರಿಗಲ್ಲದೆ. || ೮೨೫ ||

೩

ಹಲಬರ ನುಂಗಿದ ಹಾವಿಂಗೆ ತಲೆ ಬಾಲವಿಲ್ಲ, ನೋಡಾ :
ಕೊಲುವುದು ತ್ರೈಜಗವೆಲ್ಲವ : ತನಗೆ ಬೇರೆ ಪ್ರಳಯವಿಲ್ಲ;
ನಾಕಡಿಯನ್ನೈದುವುದು : ಲೋಕದ ಕಡೆಯನೆ ಕಾಣ್ಬುದು;
ಸೂಕ್ಷ್ಮಪಥದಲ್ಲಿ ನಡೆವುದು : ತನಗೆ ಬೇರೆ ಓಡಲಿಲ್ಲ;
ಅಹಮ್ಮೆಂಬ ಗಾರುಡಿಗನ ನುಂಗಿತ್ತು,
ಕೂಡಲ ಸಂಗನ ಶರಣರಲ್ಲದುಳಿದವರ ! || ೮೨೬ ||

೪

ಆದಿತ್ಯಸೋಮರು ಆಗಿಹೋಗುತ್ತಿದ್ದಹರು;
ಬ್ರಹ್ಮ ಪ್ರಳಯಕ್ಕೊಳಗಾದ, ಹರಿಸಿಂಹಾಸನವಡಗಿತ್ತು :
ಅಂತೊ ನಾಸ್ತಿ, ಇಂತೊ ನಾಸ್ತಿ !
ಇಂತು ರೋಮಜರೆಂಬರು ಸಿಟ್ಟುಗುಟ್ಟಿ ತರುಮರನಡಿಯಲಿದ್ದರು.
ಮಾರ್ಕಂಡೇಯ ಮಹಾಮುನಿ ಸ್ವೇಚ್ಛಾಮರಣಿಯೆನಿಸಿಕೊಂಡನಲ್ಲದೆ,
ಲಿಂಗದ ನಿಜವನಱಿಯನು,
ಇದು ಕಾರಣ, ಕೂಡಲ ಸಂಗಮದೇವಾ,
ನೀವು ಮಾಡಿದ ಬಯಲು ಭಕ್ಷಿಸಿತ್ತು ಅನಂತ ಹಿರಿಯರನು !
|| ೮೫೭ ||

೫

ಆದಿಯಲ್ಲಿ ಶಿವಬೀಜವಲ್ಲದವರಿಗೆ ವೇದ್ಯವಾಗದು ಶಿವಜ್ಞಾನ;
ಶಿವಭಕ್ತಿ, ಲಿಂಗಸ್ಥಳವಳವಡದು; ಜಂಗಮಸ್ಥಳವಳವಡದು;
ಪಾದೋದಕ ಪ್ರಸಾದಸ್ಥಳವಳವಡದು;
ನರಕದಲ್ಲಿ ಬೀಳುವ ಕರ್ಮಿಗಳಿಗೆ
ಕೂಡಲ ಸಂಗನ ಶರಣರನುಭಾವ ನೆಲೆಗೊಳ್ಳದು. || ೮೫೮ ||

೬

ಮರುಳು ಕಂಡ ಕನಸಿನ ಪರಿಯಂತೆ ಶಿವಾಚಾರ,
ಕರಿಯು ಕನ್ನಡಿಯೊಳಗಡಗಿದಂತಯ್ಯಾ !
ಗುಣಿಯವಗುಣಿಯೊಡನಾಡಿದರೆ
ಅದೆ ಆತನ ಕರ್ಮಫಲ, ನೋಡಾ !
ಕೂಡಲ ಸಂಗನ ಶರಣರ ಅನುಭಾವ
ಭವದುಃಖಿಗಳಿಗೆ ವೇದ್ಯವಾಗದಯ್ಯಾ. || ೮೫೯ ||

೭

ಉಂಬ ಬಟ್ಟಲು ಬೇಱೆ ಕಂಚಲ್ಲ : ನೋಡುವ ದರ್ಪಣ ಬೇಱೆ ಕಂಚಲ್ಲ;
ಭಾಂಡ ಒಂದೆ, ಭಾಜನ ಒಂದೆ : ಬೆಳಗೆ ಕನ್ನಡಿಯೆನಿಸಿತ್ತಯ್ಯಾ !

# ಬಸವಣ್ಣನವರ
# ಷಟ್‌ಸ್ಥಳ ವಚನಗಳಲ್ಲಿಯ
# ಕಠಿನ ಶಬ್ದಗಳ ಕೋಶ



ಸೂಚನೆ: ಈ ಕೋಶದಲ್ಲಿ ಕೊಟ್ಟ ಸಂಖ್ಯೆಗಳು ಆಯಾ ಶಬ್ದಗಳು ಬಳಿಕೆಯಾಗಿರುವ ವಚನಗಳ ಸಂಖ್ಯೆಯನ್ನು ಸೂಚಿಸುತ್ತಿವೆ; ಆದರೆ ಅಂತಹ ಎಲ್ಲ ವಚನಗಳ ಸಂಖ್ಯೆಗಳನ್ನು ಇಲ್ಲಿ ನಿರ್ದೇಶಿಸಿಲ್ಲ. ದ್ವಂದ್ವಾರ್ಥ ವಿದ್ದಂತೆ ತೋರಿದಲ್ಲಿ (೧) ಮತ್ತು (೨) ಹೀಗೆ ಅಂಕೆಗಳನ್ನು ಬಳಸಿ ಆಯಾ ಅರ್ಥಗಳನ್ನು ಸೂಚಿಸಲಾಗಿದೆ. ಒಂದೇ ಶಬ್ದದ (ಬೇರೆ ಬೇರೆ ರೂಪಗಳು ಸಿಕ್ಕುತ್ತಿದ್ದಲ್ಲಿ ಅವುಗಳನ್ನು ಬೇರೆ ಬೇರೆಯಾಗಿ ಬರೆಯದೆ ಸಂಗ್ರಹವಾಗಿ ( ) ಮತ್ತು [ ] ಈ ಕಂಸಗಳನ್ನು ಉಪಯೋಗಿಸಿ ಸೂಚಿಸಿದೆ. ಉದಾ: 'ವೃಥಾ (ಯ)' ಎಂಬಲ್ಲಿ ( ) ಈ ಕಂಸದಲ್ಲಿದ್ದ ಅಕ್ಷರವನ್ನು ಇಟ್ಟುಕೊಂಡಾಗಲಿ ಬಿಟ್ಟಾಗಲಿ ಓದಿಕೊಳ್ಳಬಹುದೆಂಬ ಅರ್ಥ; 'ಗಳ [ಪು] ಹು' ಎಂದಿದ್ದಾಗ ಈ ಶಬ್ದವು 'ಗಳಪು' ಎಂದಾಗಲಿ 'ಗಳಹು' ಎಂದಾಗಲಿ ಬಳಿಕೆಯಾಗಿದೆ ಎಂಬ ಸೂಚನೆ. ಈ ಕೋಶದಲ್ಲಿ ಮುಂದೆ ಕಾಣಿಸಿದ ಕೆಲ ಸಂಕ್ಷಿಪ್ತ ರೂಪಗಳು ಬಳಕೆಯಾಗಿವೆ: ಸ= ಸಂಸ್ಕೃತ ರೂಪ; = ಹಳಗನ್ನಡ ರೂಪ; ತೆ = ತೆಲುಗು ರೂಪ; ಕ್ರಿ = ಕ್ರಿಯಾರೂಪ; ನಾ = ನಾಮರೂಪ; ಹೋ = ಹೋಲಿಸು.



**ಅಕ್ಕನೆ** (೧) ಜೀರ್ಣವಾಗುವಿಕೆ; ಪ್ರಯೋಜನ (೨) ಅಜೀರ್ಣ ೨೯೮

**ಅಕ್ಕು** ( ಹ: ಅಟ್ಟು ) ಅರಗು, ಜೀರ್ಣವಾಗು ೩೨,೫೮೫,೬೫೦

**ಅಕ್ಕೆ** (ಹ: ಅಟ್ಟಿ ) ದುಃಖ ೧೬೭

**ಅಗಮ್ಯ** ತಿಳಿಯಲಿಕ್ಕೆಬಾರದ ೫೨೯

**ಅಗಲ** ತಳಿಗೆ ೪೩೯; ವಿಸ್ತಾರ ೭೪೯

**ಅಗ್ಘವಣಿ** ( ಸ: ಅರ್ಘ್ಯ ಪಾನೀಯ) ಪೂಜೆ–ಅಭಿಷೇಕಕ್ಕಾಗಿ ಉಪಯೋಗಿಸುವ ನೀರು ೧೭೭

**ಅಘಟಿತ** ಇನ್ನೂ ಸಂಭವಿಸದೆ ಇದ್ದ, ಭವಿಷ್ಯ ೫೧೫

**ಅಘಟಿತಘಟಿತ** ಎಂದೂ ಉಂಟಾಗದೆ ಇದ್ದುದನ್ನು ಉಂಟುಮಾಡುವವನು ೧೪೭

**ಅಘೋರ** ಘೋರ, ನಿಷ್ಠುರ, ಭಯಂಕರ ೧೧೭,೭೮೭

**ಅಂಕ** ಸೈನಿಕ, ಭಟ ೧೭೮,೭೨೮; ಯುದ್ಧ, ಕಾಳಗ ೪೩೬,೬೯೯

**ಅಂಕಕಾಱ** ವೀರ, ಭಟ ೭೦೦

**ಅಂಕೆ** ಅಧಿಕಾರ, ಅಪ್ಪಣೆ ೭೨೮

**ಅಂಗ** (೧) ದೇಹ, (೨) (ವೀರಶೈವರ ಪರಿಭಾಷೆಯಲ್ಲಿ) ಭಕ್ತ ೪೦೩

**ಅಂಗತ** ( ಸ: ಅಂಗತಃ ) ಮೈಗೂಡಿದ, ಅಳವಟ್ಟ ೪೫೫

**ಅಂಗೈಸು** ಕೈಕೊಳ್ಳು; ಪೂರೈಸು ೪೩೮

**ಅಂಗವಣೆ** ಧೈರ್ಯ, ಪರಾಕ್ರಮ ೪೨೪

**ಅಚ್ಚಿಗ** ವಿಹ್ವಲತೆ, ಕಳವಳ ೧೭೩

**ಅಚ್ಚುಗ** ಪ್ರೀತಿ, ವ್ಯಾಮೋಹ ೯೩

**ಅಜಪೆ** ,ಹಂಸವೆಂಬ ಮಂತ್ರ (ಇದು ಸಾಮಾನ್ಯವಾಗಿ ಮನುಷ್ಯನು ಉಸುರಾಡಿಸುವುದರಿಂದಲೆ ಹುಟ್ಟುತ್ತದೆ; ಅಂತೆಯೆ ಈ ಹೆಸರು) ೬೧೨

**ಅಜಾತ** ಹುಟ್ಟು ಇಲ್ಲದ ಭವವಳಿದ, ಶರಣ ೯೦೧

**ಅಂಜನ** ದೋಷ; ಅಂಟಿಕೊಳ್ಳುವುದು ೯೦೪

**ಅಟ್ಟಾಟಿಕೆ** ಜಂಬ, ಪೌರುಷದ ಮಾತು, ಅತಿಶಯೋಕ್ತಿ ೭೨೬

**ಅಟ್ಟೆ** ತಲೆಯಿಲ್ಲ ದೇಹ, ಮುಂಡ ೭೨,೭೬೩

**ಅಡಕು** ಕೂಡಿಕೊಳ್ಳು ೨೦೧

**ಅಡಗು** ಮಾಂಸ, ಬಾಡ ೭೬೮

**ಅಡಸು** ಬಲತ್ಕಾರಮಾಡು ೬೭೫

**ಅಡಾಯುಧ** ಮಂಡಲಾಕಾರದ ತುದಿಯುಳ್ಳ ಕತ್ತಿ ೬೫೧

**ಅಡಿಯ** ದಾಸ, ಸೇವಕ; ಶರಣ ೬೦೬

**ಅಡೆ** ಗೊಬ್ಬರ ೫೪೯

**ಅಣಕ** ಅಣಕಿಸುವುದು, ತೆಗಳುವುದು ೮೧೦

**ಅಣಚಿ** ತಾಳಿ (?) ೬೨೨

**ಅಣಲು** (ಬಾಯ) ಅಂಗಳು ೬೩೬

**ಅಣೆ** ಹೊಡೆ, ಅಪ್ಪಳಿಸು ೩೩೯

**ಅಂಡಲೆ** ಪೀಡಿಸು, ತೊಂದರೆಯುಂಟುಮಾಡು ೧೭೮

**ಅತಿಗಳೆ** ಪೂರ್ಣವಾಗಿ ಕಳೆ; ದಾಂಟು ೯೮೧

**ಅದ್ದಗಾಣಿ** ಕಾಣಿಯ ಅರ್ಧ ೧೧೫

**ಅದ್ದು** ಎದ್ದು, ಮುಳಿಗಿಸು ೨೨೦

**ಅನಂಗಸಂಗಿ** ಕಾಮವಿಕಾರವುಳ್ಳವ ೧೨೫

**ಅನವರತ** ಯಾವಾಗಲೂ ೨೨೬

**ಅನಾಮಿಕ** ಹೆಸರಿಲ್ಲದ; ೯೪ ೫೭೮,೯೩೩

**ಅನಾಯುತ** ಅಕ್ರಮ ಕೃತ್ಯ, ತಪ್ಪುಕೆಲಸ ೨ ೩

**ಅನಿಮಿಷ** (೧) ಯಾವಾಗಲು ಕಣ್ಣು ತೆರೆದಿರುವವ, ದೇವತೆ; (೨) ಒಬ್ಬ ಶಿವಶರಣ ೧೪೫

**ಅನು** ಲೇಸು; ಯೋಗ್ಯತೆ; ಒಳ್ಳೆಯ ರೀತಿ; ಸಿದ್ಧತೆ ೮೯೭,೯೧೦

**ಅನುಭಾವ** ನಿಜದ ಅಥವಾ ಪರಮಾತ್ಮನ ಅನುಭವ ಅಥವಾ ಸಾಕ್ಷಾತ್ಕಾರ ೮೧೯

**ಅನುವಾಗು** ಯೋಗ್ಯವಾಗಿ ಉಪಯೋಗವಾಗು ೨೧೬

**ಅನುಶ್ರುತ** (೧) ಪ್ರಖ್ಯಾತ (೨) ನಿರಂತರ ೫೦೭

**ಅಂತಃಬೆಂತರ** ಒಂದು ಬಗೆಯ ಪಿಶಾಚಿ ೨೫೮

**ಅಂತರಾಳ** ಒಳಗಿನ ಸ್ಥಾನ ೮೪೪

**ಅಂತರಿಸು** ಬಿಡು, ತ್ಯಾಗಮಾಡು ೬೩೨

**ಅಂತು** (ಸಂ: ಅಂತ, ಅಂತಸ್) ಒಳಗಣದು, ಗುಟ್ಟು, ರಹಸ್ಯ; ಪಾರ, ಕೊನೆ; ಸಾಮೀಪ್ಯ, ಸಾನ್ನಿಧ್ಯ ೮೧,೭೩೬

**ಅಂದ** ತೆರ, ರೀತಿ, ಪ್ರಕಾರ; ಚೆಲುವು ೭೬೦

**ಅಂದಣ** ಪಲ್ಲಕ್ಕಿ, ದಂಡಿಗೆ ೩೪, ೨೨೧

**ಅಂದಣಗಿತ್ತಿ** ಜೋಯಿತಿ; ತನ್ನಶೃಂಗಾರವನ್ನೆ ಲಕ್ಷಿಸುವವಳು ಅಂಪಗಾರ್ತಿ (?) ೨೨೬

**ಅನ್ನಕ** ತನಕ, ವರೆಗೆ ೮೯೬

**ಅನ್ನಬರ** ತನಕ, ವರೆಗೆ ೮೯೬

**ಅಪಾತ್ರ** ಅಯೋಗ್ಯ ೮೦೪

**ಅಪ್ಯಯ** ಜೀರ್ಣವಾಗುವಿಕೆ, ಬೆರೆಯುವಿಕೆ ೨೦೦

**ಅಭಿಮಾನ** ಹೆಂಡಿರು-ಮಕ್ಕಳಲ್ಲಿ ಇರುವ ಮಮತೆ ೨೧೭,೩೪೦

**ಅಭಿಮಾನಿ** ಆತ್ಮಗೌರವವುಳ್ಳ ೬೬

**ಅವೃತಗಣ** ಛಂದಸ್ಸಿನ ಗಣಗಳಲ್ಲಿಯ ಒಂದು ಭೇಧ ೪೯೪

**ಅಮ್ಮು** (ತ: ಅಣ್ಮು) ಶಕ್ತನಾಗು ೮೧

**ಅಂಬರ** ಆಕಾಶ ೯೪೯

**ಅಯಿದೆ** ಗಂಡಸುಳ್ಳಾಕೆ ೬೩೨

**ಅಯ್ಯ** ತಂದೆ; ಅಜ್ಜ ೩೫೦

**ಅಯ್ಯತನ** ತಾನು ಶ್ರೇಷ್ಠನೆಂಬ ಭಾವನೆ; ಅಹಂಕಾರ ೨೫

**ಅರಸು** ರಾಜ್ಯ, 'ಅರಸೊತ್ತಿಗೆ' ೧೬೦,೬೨೭

**ಅರಳಂಬು** ಹೂವಿನಬಾಣ, ಕಾಮನ ಬಾಣ ೭೫

**ಅರಳೆ** (ಗಾಣದ ನಡುವಿನ) ಕಂಬ; ಸ್ಥಾಣು ೫೮೧

**ಅರಿದು** ಕಠಿಣ, ಅಸಾಧ್ಯ ೨೧೫

**ಅರುಹ** ಬುದ್ಧ; ಜಿನ ೫೪೬

**ಅಱ್** ಒಣಗು, ಬತ್ತು ೮೬೩,೩೧೫

**ಅಱಸು** ಹುಡುಕು ೧೮೦

**ಅರ್ತಿ** (ಸ: ಆರ್ತಿ) ಪ್ರೀತಿ, ಸಂತೋಷ; ಆಸೆ ೧೭೭

**ಅರ್ಥಿ** ಬೇಡುವವ

**ಅರ್ಪಣೆ** ನಿವೇದನೆ ೩೯೨

**ಅರ್ಪಿತ** ನಿವೇದನೆ ಮಾಡಿದ, ನೀಡಿದ ೮೮೪

**ಅಲಸು** ದಣಿ; ಆಲಸ್ಯಹೊಂದು ೧೯,೮೩೧

**ಅಲೆ** ಅಲುಗಾಡಿಸು, ನಡುಗಿಸು ಕಾಡು ೭೨೧

**ಅವಧರಿಸು** ಲಕ್ಷ್ಯಕೊಡು ೭೫೧

**ಅವಧಾನಿ** ಎಚ್ಚರಿಕೆಯುಳ್ಳ ೭೮೮ ೮೮೬

**ಅವಧಾರು** ಲಕ್ಷ್ಯಕೊಡು ೬೮,೬೯೯

**ಅವಲೋಹ** (ಬಂಗಾರದಕಿಂತ) ಕೀಳುತರದ ಲೋಹ ೭೮೧

**ಅವಸರ** ಸಮಯ; ತವಕ ೭೦೯

**ಅವಸಾನ** ಕಡೆ, ಕೊನೆ; ಮರಣ ೯೪೯

**ಅವಸ್ಥೆ** ದುಃಖ, ಸಂಕಟ ೩೭೦

**ಅವಿಮುಕ್ತಕ್ಷೇತ್ರ** ಕಾಶಿಯ ನೆರೆಯಲ್ಲಿರುವ ಒಂದು ಕ್ಷೇತ್ರದ ಹೆಸರು ೮೫೩

**ಅವುಟು** ಮೂರೂವರೆ ೪೯೧

**ಅವುಡು** ಮೆಲುಕು, ದವಡೆ ೬೪೭

**ಅಸ** ಪರಾಕ್ರಮ, ಶಕ್ತಿ ೬೩೯

**ಅಸುಗತಿ** ಕೆಟ್ಟಗತಿ, ದುರ್ಗತಿ ೬೩೦

**ಅಳಲು** ದುಃಖ, ಸಂಕಟ ೪೫೫

**ಅಶ್ವಮೇಧಯಾಗ** ಕುದುರೆಯನ್ನು ಆಹುತಿಕೊಡುವ ಯಜ್ಞ (ಈಯಾಗವನ್ನು ಸಾಮ್ರಾಟರಾದ ಅರಸರು ಮಾಡುತ್ತಿದ್ದರು) ೬೧೨

**ಅಳವಡು** ಹೊಂದಿಕೊಳ್ಳು, ಸರಿಯಾಗು ೧೦೦,೬೬೭

**ಅಳವು** ಸಾಮರ್ಥ್ಯ ೧೫

**ಅಳಿ** ಕೆಟ್ಟ ೯೨,೧೬೫;೬೬೫

**ಅಳುಕು** ಅಂಜು, ಹೆದರು ೬೪೬

**ಅಳುಪು** (೧) ಲೋಲನಾಗು, ಆಸೆಮಾಡು (೨) ನಾಶಿಸು ೨೭೮

**ಅಹಮ್ಮು** 'ನಾನು' ಎಂಬ ಮದ ೨೫೨

**ಆ** ಆನು, ನಾನು ೩೬೫,೫೫೨,೬೯೫

**ಅಗಡ** ಅಲ್ಲದ ಅಥವಾ ಹೊಲ್ಲದ ಕೆಲಸ ೬೪೫

**ಆಗಮ** ತಂತ್ರಶಾಸ್ತ್ರ; ವೇದ ೮೪೮

**ಆಗಳೂ** ಯಾವಾಗಲೂ ೫೬,೩೨೮

**ಆಗು** ಆಗುವಿಕೆ, ಪರಿಣಾಮ ೨೪೮

**ಆಚಮನ** ಬಾಯಿತೊಳೆದುಕೊಳ್ಳುವುದು ೭೭೮

**ಆಣಕ** ಆಣಕ, ಅಣಕಿಸುವಿಕೆ ೯೦೮

**ಆದ್ಯರು** ಮುಂಚಿನ ಶರಣರು, ಪುರಾತನರು ೧೭೧,೬೩೫

**ಆಧಿ** ಚಿಂತೆ, ವ್ಯಾಕುಲತೆ ೫೨೧

**ಆನು** ಚಾಚು, ಒಡ್ಡು ೩೬೬,೭೮೫

**ಆಪೋಶನ** ಬೊಗಸೆಯಲ್ಲಿ ನೀರು ಕುಡಿಯುವುದು ೨೫

**ಆಪ್ಯಾಯನ** ತೃಪ್ತಿ, ಸಂತುಷ್ಟಿ ೧೯೫,೮೭೭

**ಆಮಿಷ** ಮಧ್ಯ–ಮಾಂಸ ಮುಂತಾದ ಮನಸೆಳೆಯುವ ಪದಾರ್ಥ; ಮೋಹ; ಲಂಚ ೪೬,೫೯೧

**ಆಯ** ಉತ್ಪನ್ನ; ಪಾಲು ೪೩೯

**ಆಯುತ** (೧)ಯೋಗ್ಯವಾದು, ಕ್ರಮವಾದುದು, ಸರಿಯಾದುದು (೨) ವೀರಶೈವರಲ್ಲಿ ಗುರುವು ಭಕ್ತನಿಗೆ ಇಷ್ಟಲಿಂಗವನ್ನು ಕೊಡುವ ದೀಕ್ಷೆ ೩೬೩,೬೭೪

**ಆರತ** (ಸಂ: ಆರ್ತ?)ಆಶೆ, ತೃಷ್ಣೆ ೧೩೧,೨೫೯

**ಆರಯ್** ಎಚ್ಚರದಿಂದಿರು; ರಕ್ಷಿಸು ೪೫,೫೨

**ಆರಂಭ** ಒಕ್ಕಲುತನ ೭೦೮

**ಆರಾಧ್ಯ** ಸನ್ಮಾನ್ಯ, ಪೂಜ್ಯ ೮೯

**ಆರೂಢ** ಎಲ್ಲವನ್ನೂ ಮೀರಿದ; ವಿರಕ್ತ ೯೫೮

**ಆರೋಗಣೆ** ಊಟ ೮೫೧

**ಆರಿಡು** ಬೊಬ್ಬಿಡು, ಒದರು ೮೨೯

**ಆಲಿಕಲ್ಲು** ಮಂಜಿನಗಡ್ಡೆ, ಆಣಿಕಲ್ಲು ೪೯೩

**ಆಲು** ಕೂಗು, ಗರ್ಜಿಸು ೪೩೬

**ಆವಹ** ಕರೆಯುವುದು, ದೂತನಾಗುವುದು ೭೪೨

**ಆಸರು** ಬೇಸರಪಡು, ದಣಿ ೧೦,೧೯

**ಆಸುರ** ಸೊಕ್ಕು, ಪರಾಕ್ರಮ ಆವೇಶ; ಕಂಟಕ ೪೩೨

**ಆಳವರಿ** ಆಳವನ್ನು ತಿಳಿ, ತನ್ನ ಶಕ್ತಿಯನ್ನು ಕಂಡುಕೊಳ್ಳು ೭೮೫

**ಆಳವಾಡು** ತನ್ನ ಬಗೆಗೆ ಕೀಳು ನುಡಿಗಳನಾಡು ೩೭೦

**ಆಳಿ** (೧) ಸೇವಕ, ದಾಸಿ (೨) (ಸಂ: ಆಲಿ) ವಂಶ, ಮನೆತನ ೭೪೮

**ಆಳಿಕಾರ** ಮೋಸಗಾರ; ನಿಂದಕ ೭೮೮

**ಆಳಿಗೊಳ್** ತಿರಸ್ಕರಿಸು, ಧಿಕ್ಕರಿಸು

**ಆಳ್ದ** ಒಡೆಯ ೨೫೬

**ಇಟ್ಟೆ** ಕಾಸರಕನ ಮರ (ಇದರ ಹಣ್ಣು ಅತ್ಯಂತ ವಿಷವಾದುದು)

**ಇದಿರು** ಎರಡನೆಯ, ಇತರ; ಪರಕೀಯ; ಮುಂದಿನದು, ಎದುರಿನ ೬೬

**ಇನಿದು** ರುಚಿಕರ, ಸೀ ೬೦೮

**ಇಮ್ಮನ** (೧) ಎರಡು 'ಮಾನ' ಅಥವಾ ಅಳತೆ; (೨) ಎರಡುಮನಸ್ಸು, ಸಂದೇಹ ೧೧೫

**ಇಮ್ಮೆಯ್** ಎರಡೂ ಮಗ್ಗಲು; ಒಳಗೂ ಹೊರಗೂ ೩೮೭

**ಇಂಬು** ಅವಕಾಶ, ದೂರ ೯೩೩

**ಇಲ್ಲನೆ** ಇಲ್ಲದಿರುವಿಕೆ, ಅಭಾವ ೨೫೭

**ಈಂಟು** ಕುಡಿ, ಪಾನಮಾಡು

**ಈಸು** ಕೊಡಿಸು, ೬೨೨

**ಉಡುಹ** (=ಉಡುಪ?) ಒಟ್ಟಿ ಬರೆಗಳನ್ನು ಉಡುವುದುರಲ್ಲಿ ಪ್ರೀತಿಯುಳ್ಳವ; ವೇಷಧಾರಿ (?) ೪೦

**ಉಂಡಲಿಗೆ** (ಅಕ್ಕಿಯ) ಕಡಬು ೬೬೧

**ಉಂಡಿಗೆ** ಮುದ್ರೆ ೮೪,೪೯೯

**ಉತ್ತು** (ಹ: ಉಬ್ಬು) ಹೊಲಸನ ಮಾಡಿ ೫೯೫

**ಉದರಪೋಷಕ** ಹೇಗಾದರೂಮಾಡಿ ಹೊಟ್ಟೆ ಹೊರೆದುಕೊಳ್ಳುವವ ೮೫

**ಉದರಿ** (ಸಂ: ಉದ್ಧಾರ) ಉದ್ಧಾರ ೯೩೮

**ಉದಾಸೀನ** ಬೇಸರ; ಅಲಕ್ಷ ೬೯೪

**ಉದುಮುದ** ಬೆಳೆಯುತ್ತಿರುವ ಸೊಕ್ಕು ೫೮೫

**ಉಪಜೀವಿತ** (ಸಂ: ಉಪಜೀವಕ) ಇತರರ ಮನೆಯಲ್ಲಿ ಹೊಟ್ಟೆ ಹೊರಕೊಳ್ಳುವವ ೮೬೪

**ಉಪಮಿಸು** ಅಳೆ; ಸರಿಹಚ್ಚು; ಹೋಲಿಸು ೮ ೭೪೭

**ಉಪ್ಪರಗುಡಿ** ಎತ್ತರಕ್ಕೆ ಕಾಣುವಂತೆ ಏರಿಸಿ ನಿಲ್ಲಿಸಿದ ಧ್ವಜ ೨೨೫ ೭೦೪

**ಉಜಿ** ಪಕ್ಷಿ=ಮೃಗಗಳನ್ನು ಹಿಡಿಯುವ ಬಲೆ ೭೯೨

**ಉಲಿ** ಧ್ವನಿಮಾಡು; ಕಳಕಳಿಸು ೫೯೮

**ಊಡು** ಉಣಿಸು; ಪೋಷಿಸು ೧೦೯

**ಊಜು** ಕೊಂಡೆಯಿಂದ ಚುಚ ೧೧೧

**ಊಸರವಳ್ಳಿ** ಬಣ್ಣ ಬದಲು ಮಾಡುವ ಓತಿಕಾಟದಂತಹ ಪ್ರಾಣಿ ಗೋಸುಂಬೆ ೨೯೩

**ಎಚ್ಚ** (ಬಾಣ) ಹೊಡೆದ ೬೫

**ಎಡಹು** ಎಡವುವ ಸ್ಥಳ ೮೯೨

ಎಡೆ ಸ್ಥಾನ, ಅವಕಾಶ; ತೆರಪು; ನಡುವೆ, ಅವಾಂತರವಾಗಿ ೬೭೫

**ಎಡೆಯೂಟ** ಸ್ಥಳದಿಂದ ಸಳಕ್ಕೆ ಓಡಾಡುವುದು ೮೮೭

**ಎನಿಸೆನಿಸು** ಎಷ್ಟೆಷ್ಟು ೬೯೧

**ಎನ್ನು** ಬಯ್ಯು, ೬೯೧

**ಎನ್ನುವನು** ನನ್ನನ್ನು ೨೪೩

**ಎಂತಕ್ಕೆ** ಏತಕ್ಕಾಗಿ; ಹೇಗೆ ೧೬೬- ೨೬೮

**ಎರೆ** ಬೋರೆಯ ಗಿಡು ೧೦೨

**ಎಱಗು** (೧) ಬಾಗು, ನಮಸ್ಕರಿಸು; (೨) ಒಲಿ ೬೧೫

**ಎಱೆಸು** ಸುರಿಸು, ಎರೆಯುವಂತೆ ಮಾಡು ೪೮೬

**ಎಲವ** ಬೂರಲ ಮರ ೧೨೧

**ಎಲುದೋ** [ಱ] ಱೆ ಎಲುಬು ಕಾಣುವವರೆಗೆ ೨೧೦

**ಎಳಸು** ಬಯಸು, ಆಶಿಸು ೭೫೬

**ಎಳೆಯ** ಚಿಕ್ಕವ, ತರುಣ; ನೂತನ, ಹೊಸಬ ೨

**ಎಸವೋದ** ಶಕ್ತಿಯಿಲ್ಲದ, ದುರ್ಬಲ (?) ೫೮೩

**ಏಗುವುದು** ಏನುಮಾಡಬೇಕು ೩೦೨

**ಏಡಿಸು** ಅಣಗಿಸು, ನಿಂದಿಸು ೨೩೪

**ಏತ** ಬಾವಿಯಿಂದ ನೀರೆತ್ತುವ ಗಳೆ ೧೨೫

**ಏಬೆಸನ** ಏನಪ್ಪಣೆ ೩೦೨ ೮೬೪

**ಏರಿ** ಕೆರೆಯ ದಂಡೆ, ಒಡ್ಡು ೨೬

**ಏವುದು** ಏನ ಮಾಡಬಲ್ಲದು ೨೪೭

**ಏವೆ** ಏನು ಮಾಡಬಲ್ಲೆನು ೮,೪೭೫

**ಐದಾರೆ** ಇರುವರು ೯೩೩

**ಐದೆ-ಅಣಚಿ** ಮುತ್ತೈದೆಯ ಲಕ್ಷಣ, ತಾಳಿಯ ಸರ(?) ೬೩೨

**ಐಸು** ಅಷ್ಟು ೧೬೮

**ಒಕ್ಕಲಿತಿ** ಶೂದ್ರಸ್ತ್ರೀ ೪೨೨

**ಒಕ್ಕುದು** ಭೋಗಿಸಿದುದು; ಜಂಗಮರ್ಗೆ ಕೊಟ್ಟದು ೭೭೦

**ಒ[ಗ]ಕತನ** ಗಂಡನ ಕೂಡ ಮಾಡುವ ಬಾಳುವೆ ೭೨೦

**ಒಟ್ಟೈಲು** ಒಟ್ಟಿದ ರಾಶಿ ೪೫೦

**ಒಡೆತಣ** (೧) ಒಡೆತನ, ಅಧಿಕಾರ; (೨) ಒಡನಾಟ ೧೬೦

**ಒಡನೆ** ತನ್ನ ಕೂಡ, ಜನ್ಮತಃ ೬೭೫

**ಒಡ್ಡ** ಜೂಜಿನಲ್ಲಿ ಹಚ್ಚುವ 'ಪಣ' ೬೭೯

**ಒಡ್ಡು** ಅಧೀನಮಾಡು ೨೧೬

**ಒತ್ತೆ** ಸೂಳೆತನಕ್ಕಾಗಿ ವಿಟರಿಂದ ಸ್ವೀಕರಿಸುವ ಧನ ೧೦೧, ೪೬೨

**ಒತ್ತೊತ್ತೆ** ಒಂದೊಂದು (?) ೧೫೯

**ಒದವು** ಒದಗು, ಉಂಟಾಗು

**ಒಪ್ಪ** ಕಾಂತಿ, ಚೆಲವು ೧೪೦ ೧೬೧ ಸರಿಯಾದ ಒಪ್ಪವಂತಹಮಾತು ೭೭೫

**ಒಪ್ಪ[ಚಿ]ಚ್ಚಿ** ಒಮ್ಮೆಯಾದರೂ ೨೮೧,೩೦೨

**ಒಮ್ಮನ** (೧) ಒಂದೇ ಅಳತೆ (೨) ಒಂದೇ ಮನಸ್ಸು ೧೧೫

**ಒಯ್ವರೆ** ಒಯ್ಯುವಾಗ ೪೫

**ಒರೆ** (ಬಂಗಾರದ) ಕಾಂತಿ, ಒಣ್ಣ ೨೫೧; (ಒರೆಗಲ್ಲಿಗೆ) ಒಮ್ಮೆ ತಿಕ್ಕಿದರೆ ಬರುವಷ್ಟು (ಚಿನ್ನ)೪೩೫

**ಒಱಲು** ಆಕ್ರಂದಿಸು, ಮೊರೆಯಿಡು ೫೪, ೨೨೭

**ಒಱೆ(ಯು) ಕಟ್ಟು** ಕತ್ತಿಯ ಒರೆಯನ್ನು ಟೊಂಕಕ್ಕೆ ಕಟ್ಟು, ಯುದ್ಧಕ್ಕೆ ಸನ್ನದ್ಧನಾಗು ೭೧೬

**ಒಲ್** ಪ್ರೀತಿಮಾಡು, ಒಲಿ ೩೧೪

**ಒಳಕೊಳ್** ಒಳಗೆ ಹಾಕಿಕೊಳ್ಳು, ಸಹಿಸು ೫೫

**ಒಳಬೊಳ್ಳೆತನ** ಒಳಗೆ ಪೊಳ್ಳಾಗಿರುವಿಕೆ; ಮೋಸಗಾರಿಕೆ ೩೦೫

**ಒಳರೆ** ಇರುವರೆ, ಉಂಟೆ ೭೪೨

**ಒಳಲೊಟ್ಟೆ** ಒಳಗೆ ಪೊಳ್ಳಾಗಿರುವುದು; ನಿರರ್ಥಕವಾದುದು ೨೦೨,೩೦೭

**ಒಳ್ಳಿದ** ಒಳ್ಳೆಯುವ ೧೪೮

**ಒಳ್ಳೆ** ನೀರ ಹಾವು ೬೬೮

**ಓಗರ** ಅನ್ನ, ಬೋನ ೬೦೩,೮೩೪

**ಓಜಕಟ್ಟಿಗೆ** (ಓಜ = ಉಪಧ್ಯಾಯರ) ಕೈಯೊಳಗಿನ ಬೆತ್ತ ಶಿಕ್ಷಣದ ಚಿಹ್ನೆ

**ಓ[ಜೆ]ಜ** ರೀತಿ, ಕ್ರಮ, ಆಧಾರ ೪೯೪

**ಓಡು** (ಹುರಿಯುವ) ಹಂಚು ೯೮,೫೯೨

**ಓಡುಬಲು** ಒಡೆದ ಕಂಚು (ಹೋ: ತೆ: ಓಡುಬಿಲ್ಲ) ೩೯೭

**ಓತ** ಒಲಿದ ೫೦೬

**ಓತು** ಒಲಿದು, ಪ್ರೀತಿಸಿ ೯೧೦

**ಓರೆ** ಅಡ್ಡದಾರಿಹೋಗುವ, ಎಡವಟ್ಟ "ವಾಳಿ" ೭೫೪

**ಓಲಾಡು** ತೇಲಾಡು ೩೭೭,೪೮೬

**ಓಲಿಸು** ಅವಲಂಬಿಸು, ಆಧರಿಸು ೭೭೮

**ಓಲು** ತಳೆ, ಹೊಂದು; ಆಶ್ರಯಿಸು ೨೭೪

**ಓಲೆ** ಸ್ತ್ರೀಯರ ಕಿವಿಯೊಳಗಿನ ಒಂದು ಆಭರಣ, (ಮಾಂಗಲ್ಯದ ಲಕ್ಷಣ ೨೯೬

**ಓಲೆ(ಯು)ಕಾಱ** ಸಶಸ್ತ್ರ ಸೈನಿಕ ೬೬೪

**ಓಲೈಸು** ಸೇವೆಮಾಡು ೪೭೮,೭೦೯

**ಓಸರಿಸು** ಹಿಂಜರಿ, ಹಿಂದೆಗೆ ೪೩೩, ೬೬೪

**ಕಕ್ಕುಲತೆ** ಪ್ರೀತಿ ೬೮೭

**ಕಚ್ಚುಟ** ಕೌಪೀನ

**ಕಂಚು** ಕಂಚಿನ ತಾಬಂಡಿ ೬೯೨

**ಕಟ್ಬಾಳ** ಕೇವಲ ಸೇವಕ ೬೯೭

**ಕಟ್ಟೆದಿರು** ಕಣ್ಣೆದುರಿಗೆ ೧೪೦

**ಕಟ್ಟುಗ್ರ** ಅತ್ಯಂತ ನಿಷ್ಠೆ ೪೮೧

**ಕಟ್ಟುವಡು** ಕಟ್ಟುಬೀಳು. ಬಂಧಿತನಾಗು ೪೭

**ಕಡವರ** ನಿಧಿ, ಹೂಳಿಟ್ಟ ದ್ರವ್ಯ ೨೬೭

**ಕಡಿಹ** ಕಡಿತ, ಚೂರು ಮಾಡುವಿಕೆ ೨೫೧

**ಕಡೆಗಳ** ರಣರಂಗದ ಕಡೆಯ ಮೂಲೆ ೬೯

**ಕಡುಗೂರ್ಪ** (ಕಡು+ಕೂರ್ಪ) ಬಹಳ ಪ್ರೀತಿಸುವ ೪೦

**ಕಡೆಗಣಿಸು** ತಿರಸ್ಕರಿಸು

**ಕಡೆಗೋಡಿವರಿ** ತುಂಬಿ ಹೊರ ಸೂಸು ೪೮೫,೮೬೭

**ಕಡೆಯಾಣಿ** ಶ್ರೇಷ್ಠವಾದ ಕಾಂತಿ; ಎಲ್ಲಕ್ಕೂ ಹೆಚ್ಚಿನ ಒರೆ ಅಥವಾ ಬಣ್ಣ; ಚೊಕ್ಕ (ಹೋ: ಕಟ್ಟಾಣಿ ೨೫೧

**ಕಂಡೆಯ** (ಸಂ: ಖಂಡೇಯ) ಕಡಿಯುವ ಆಯುಧ, ಕತ್ತಿ ೭೦೧

**ಕನ್ನಡ** (=ಕಣ್ಣಡ) ಕಣ್ಣು ಕಟ್ಟು, ಭ್ರಮೆ; ಮಾಯೆ ೮೯೫

**ಕನ್ನೆ** ಕುಮಾರಿಯಾಗಿರುವ ಸ್ಥಿತಿ ೧,೫೦೪

**ಕಂತೆ** ಸನ್ಯಾಸಿಯ ಬಟ್ಟೆ ಜೋಳಿಗೆ; ಕವುದಿ ೪೧೧

**ಕಂದಲು** ಸಣ್ಣಮಡಕೆ, ಚಟಿಗೆ ೪೧೬

**ಕಪಾಲ** ಶಿವನ ಕೈಯೊಳಗಿನ ತಲೆ ಬುರುಡೆ ೮೧೮

**ಕಪಿಲೆ** (ಕಂಪಿ ಬಣ್ಣದ) ಆಕಳು ೫೮೪

**ಕಪ್ಪಡಿ** ಹರಕು ಬಟ್ಟೆ; ಕಾವಿಯ ಬಟ್ಟೆ ೩೪೧

**ಕಂಪಣ** ಕೂಲಿ, ಸೇವೆ (?) ೩೫೧

**ಕಂಪಣಿಗ** ಸೇವಕ (?) ೬೮೨

**ಕಂಬಿ** ಕಬ್ಬಿಣದ ಸೆಳೆ ೩೦೩,೩೧೬

**ಕಬ್ಬಿಲ** ಬೇಡರವ; ಬೋಯಿ ೫೯೦

**ಕಮ್ಮಟ** ನಾಣ್ಯಮಾಡುವ ಸ್ಥಾನ, ಟಂಕಸಾಲೆ ೧೫೫

**ಕಮ್ಮನೆ** ಕಂಪುಳ್ಳದು ೪೧೬

**ಕರ[ಡ]ಡಿಗೆ** (ಸಂ: ಕರಂಡಕ) ಚಿಕ್ಕಬುಟ್ಟಿ; ಸಣ್ಣ ಸಂದೂಕ ೭೫೦

**ಕರಣವೃತ್ತಿ** ಇಂದ್ರಿಯಗಳ ಎಳೆತ ೭೮೬

**ಕರಲೇಸು** ಅತಿ ಸುಂದರ ೨೮೦

**ಕರಿಕ** ಕಪ್ಪುವರ್ಣದವ, ಇಲ್ಲಿ (ವಿಷ್ಣು) ೫೪೧

**ಕರೋಟಿ** ತಲೆಬುರುಡಿ ೫೩೯

**ಕಱಕಟೆ** ಅತ್ಯುಗ್ರವಾಗಿ ೧೯೮

**ಕಱಲು** ಊಸರ ಭೂಮಿ, ಸವುಳ ನೆಲ ೪೫೫

**ಕರ್ಣಿಕಾ** ಕಮಲದ ಬೀಜ ಕೋಶ ೮೧೬

**ಕರ್ತ, ಕರ್ತಾರ, ಕರ್ತೃ** ಸೃಷ್ಟಿಕರ್ತ, ದೇವರು ೧೫೩,೧೫೭, ೨೪೬

**ಕಲಕೇತ** ಒಂದು ಬಗೆಯ (ಗಂಡು) ಪಿಶಾಚಿ ೭೩೦

**ಕಲಿ** ವೀರ, ಶೂರ ೬೬೫
**ಕಲ್ಪಿತ** ಕೃತ್ರಿಮ; ಅಸ್ವಾಭಾವಿಕ ೬೨೦
**ಕಲ್ಮಷ** ಕುಂದು, ದೋಷ ೪೧,೪೩೯
**ಕಲ್ಯಾಣ** ಮದುವೆ ೨
**ಕವಳಿಗೆ** (ಸಂ: ಕಪಾಲಿಕಾ) ಶಿವನ ಕೈಯೊಳಗಿನ ತಲೆಬುರುಡೆ ೬೬೬
**ಕವಿಲೆ** (ಸಂ: ಕಪಿಲಾ) ಆಕಳು ೮೫,೩೫೭
**ಕಳ** ಕಣ; ರಣರಂಗ ೧೭೮,೩೪೭
**ಕಳೆ** ಶುಕ್ಲಪಕ್ಷದಲ್ಲಿ ಚಂದ್ರನು ಪ್ರತಿ ದಿನ ಬೆಳೆಯುವ ಅಂಶ; ಕಾಂತಿ, ಚೆಲ್ವು; ರತಿಕಳೆ ४,४೯೧
**ಕಳೆ** (ಒರೆಯಿಂದ ಕತ್ತಿಯನ್ನು) ಹೊರಗೆಳೆ ೬೭೭
ಕಳ್ಳದಮ್ಮ ಅಧರ್ಮ (?) ೧೧೧
**ಕಳ್ಳನಾಣ್ಯ** ಕಳುವಿನಿಂದ ಮಾಡಿದ ನಾಣ್ಯ ೧೯೮
**ಕಾಟುಗ** ಕಾಟ ಕೊಡುವವ, ಕಾಡುವವ ೩೩೫
**ಕಾಣಿ** ಒಂದು (ಅಲ್ಪಬೆಲೆಯ) ನಾಣ್ಯ ೧೧೫,೨೯೪
**ಕಾಯಕ** ಶರೀರ ಶ್ರಮದಿಂದ ಮಾಡುವ ಗಳಿಕೆ ೪೫೨
**ಕಾಳಕೂಟ** ತೀವ್ರವಾದ ವಿಷ ೧೧೯
**ಕಾಳಿಕೆ** ಕಪ್ಪು, ಕುಂದು, ದೋಷ ೨೫೧
**ಕಿಗ್ಗಡಲು** (ಕಿಳ್+ಕಡಲು) ಚಿಕ್ಕ ಸಮುದ್ರ ೭೦೫
**ಕಿಂಕಿಲ** (೧) ಸಂಕೀರ್ಣತೆ, ಸಮೂಹ, ಸಂದಣಿ ೨೭೪,೫೨೧; (೨) ಕಿಂಕರತೆ (?) ೮೬೮,೭೯೮
**ಕಿನ್ನರ** ದೇವತೆಗಳಲ್ಲಿಯ ಒಂದು ಭೇಧ ४೯೭
**ಕಿಂಪುರುಷ** ದೇವತೆಗಳಲ್ಲಿಯ ಒಂದು ಭೇಧ ४೯೭
**ಕಿಱುಕುಣಿಕೆ** ಕಿರು ಬೆರಳು ೮೭೬
**ಕಿಲ್ಬಿಷ** ಕುಂದು, ದೋಷ; ಪಾಪ ೩೯೯
**ಕೀಸು** ಬಗಟು; ಉಜ್ಜಿ ಅಗಲಮಾಡು ೩೧೬
**ಕೀಳ್** (೧) ಕೀಳಾದ,ಹೀನ; (೨) ಬಗ್ಗಿ ಕುಳಿತ; (೩) ಆಕಳಕರು ೩೫೯
**ಕುಕ್ಷಿ** ಹೊಟ್ಟೆ ೫೩೬
**ಕುಚಿತ್ತಾಚಾರ** ಕೆಟ್ಟ ಆಚಾರ, ಅನಾಚಾರ ೧೩೭
**ಕುಚ್ಚಿತ** (ಸಂ: ಕುತ್ಸಿತ) ಕೆಟ್ಟ, ಹೀನ ೬೧೬
**ಕುಟಿಲ** ಕೊಂಕುತನ; ಮೋಸ ४೬
**ಕುಟುಕು** ಗುಟುಕು, ತುತ್ತು ४೩೭
**ಕುಂಟಣಿ** (ಸಂ: ಕುಟ್ಟನಿ) ಕುಂಟಲಗಿತ್ತಿ ೫೦೩
**ಕುಂಡಲಿಗ** ಪಾತರಗಿತ್ತಿ (?) ೧४೧

**ಕುತ್ತು** ಕೆಳಗೆಮಾಡು; ಬಗ್ಗಿಸು ೭೪೪

**ಕುದುರು** ಗೋಡೆ ೨೬೦

**ಕುಪ್ಪಳಿಸು** ಹೊರಬೀಳು ೬೯೧

**ಕುಭಾಷ್ಯೆ** ಕೆಟ್ಟಮಾತು; ಮುರಿದ ವಚನ ೧೩೧

**ಕುಂಭಿ(ಯ)ಪಾತಕ** (ಸಂ: ಕುಂಭೀಪಾಕ) ಒಂದು ನರಕ ೫೬೯

**ಕುಱುಕು** ಕುರುಕುರು ತಿನ್ನುವ ಪದಾರ್ಥ ೫೫೬

**ಕುಱುಹು** ಚಿಹ್ನ, ಲಾಂಛನ, ಗುರುತು ೨೦೬,೯೪೮

**ಕುಲಿಶ** ಇಂದ್ರನ ವಜ್ರಾಯುಧ

**ಕುಳ** ಕುಳ ೨೯೫

**ಕುಳಿ** ತಗ್ಗು ೨೪೧

**ಕುಳಿಹೋಹು** ತಗು ಬೀಳು ೨೪೧

**ಕುಹಕ** ಟಕ್ಕು, ಮೋಸ ೪೬

**ಕೂಟ** ಕೂಡುವಿಕೆ; (೧) ಯೋಗ (೨) ರತಿ ೧೫,೪೮೫; (ಜೋತಿಷ್ಯದಲ್ಲಿ) ಮದುಮಕ್ಕಳ ಬಗೆಗೆ ನೋಡ ತಕ್ಕ ಶುಭಾಂಶಗಳು ೮೩

**ಕೂಡ** ಕೂಡಲೆ, ಒಮ್ಮೆಲೆ ೫೨೬

**ಕೂಪ** (ಹ: ಕೂರ್ಪ) ಪ್ರೀತಿಸುವ ೧೪೧

**ಕೂರದ** ಸೇರದವ, ಆಗದವ; ವೈರಿ ೪೫೫

**ಕೂರಂಬು** ಹದನವಾದ ಬಾಣ ೬೫

**ಕೂರು** ಹದನ, ಹರಿತ ೭೨೫

**ಕೂರ್ಪ** ಪ್ರೀತಿಸುವ ೬೫೧

**ಕೂಸು** ಹೆಣ್ಣು, ಕನ್ನೆ ೫೧೭,೭೧೭

**ಕೃತಕ** ಕೃತ್ರಿಮತೆ, ಮೋಸ ೨೦೧

**ಕೆಚ್ಚು** ಮದ, ಸೊಕ್ಕು ೨೫೩; ಸಾರ; ಕಟ್ಟಿಗೆಯಲ್ಲಿಯ ಒಳಗಿನ ಗಟ್ಟಿಭಾಗ ೫೨೩

**ಕೆಂಚ** ಕೆಂಪುಬಣ್ಣದವ (ಇಲ್ಲಿ) ಬ್ರಹ್ಮ ೫೪೩

**ಕೆಂಚನೆ** ಕೆಂಪಗೆ ೪೪೭

**ಕೆಡೆ** ಬೀಳು ೪೦,೨೦೧

**ಕೆಣಕು** ಮೂದಲಿಸು ೯೧೦

**ಕೆತ್ತು** ಸ್ಫುರಿಸು, ಹಾರು ೩೭೧

**ಕೆತ್ತುಗ** ಕೆತ್ತುವವ, ನಾಶಮಾಡುವವ ೩೩೫

**ಕೆಮ್ಮನೆ** ಸುಮ್ಮನೆ

**ಕೆಯ್** (೧) ಗದ್ದೆ; (೨) ಕೈ ೨೬, ೯೬೪

**ಕೆಲ** ಪಕ್ಕ; ಬೇರೆಕಡೆ ೨೪೫; ಹೊರಗಡೆ ತೋರಿಕೆ; ೨೮೩; ನೆರೆ ಹೊರೆ ೪೯೮

**ಕೆಲೆ** ಮನಬಂದಂತೆ ಮಾತಾಡು, ಬಯ್ಯು ೪೪೬

**ಕೆಳೆ** ಸ್ನೇಹ ೨೫

**ಕೈಮುಜಿ** ಕೈಯೊಳಗಿನ ಆಯುಧವನ್ನು ಉಪಯೋಗಿಸುವದನ್ನು ಮರೆ ೧೭೮

**ಕೈವಾರ** (= ಕೈಯಾರ?) ಕೈವಶ ೧೬೯

**ಕೊಂಡಮಾಜು** (?) ೧೦೬

**ಕೊಡಗ** ಬಡತನ (?) ೬೩೯

**ಕೊಂತ** ( ಸಂ: ಕುಂತ ) ಒಂದು ಆಯುಧ; ಸಬಳ ೧೦೦

**ಕೊಂಬ** ಕೊಲ್ಲುವ ೧೨೩

**ಕೊಂಬು** ಟೊಂಗೆ, ಶಾಖೆ ೩೨, (೨) ಸಂಕೇತಸ್ಥಾನ (೩೩) ಕೋಡು ೫೨; ತಲೆ, 'ಚೆಂಡು' ೧೧೬

**ಕೊಂಬೆ** ಶಾಖೆ, ಟೊಂಗೆ ೩೩

**ಕೊಯಿಲೆ** (೧) ಕೊಯ್ಯುವ ಆಯುಧ; (೨) ಕತ್ತರಿಸಿದ ವಸ್ತು (ಇಲ್ಲಿ ರಾಹು) ೧೨೩

**ಕೊಳುಗುಳ** ಕಾಳಗ ೬೦೫

**ಕೋಟಲೆ** ಕಷ್ಟ, ಪ್ರಯಾಸ ೨೬೮

**ಕೋಡಂಗಿ** ಆಟ, ನಾಟಕಗಳಲ್ಲಿ ಒಮ್ಮೊಮ್ಮೆ ಬರುವ ಹಾಸ್ಯದ ಒಂದು ಪಾತ್ರ ೧೭೯

**ಕೋಡು** ಕೊಡಿಗೆ, ದಾನ ೩೫೪

**ಕೋಲು** ಕೊಲ್ಲುವ ಸಾಧನ, ಆಯುಧ, ಬಾಣ ೧೧೩,೧೯೫

**ಕೋಶ** ಯಾವ ಪಕ್ಷಕ್ಕೆ ನ್ಯಾಯ ವಿದೆಯೆಂಬುದನ್ನು ನಿರ್ಣಯಿಸು ವುದಕ್ಕೆ ಹಿಂದಣ ಕಾಲದಲ್ಲಿ ಕೈಕೊಳ್ಳುತಿದ್ದ ಪರೀಕ್ಷೆ—ಇದಕ್ಕೆ 'ದಿವ'ವೆಂಬ ಹೆಸರು—ಹತು ಬಗೆ ಯಾಗಿದ್ದಿತು; ಅದರಲ್ಲಿ ಇದು ಒಂದು ವಿಧ ೬೪೯

**ಕೋಶಪಾನ** ನ್ಯಾಯ ನಿರ್ಣಯದ ಈ ವಿಧಾನದಲ್ಲಿ ವಾದಿ (ಅಥವಾ ಪ್ರತಿವಾದಿ)ಯು ದೇವರ ಪ್ರತಿಮೆ ಯನ್ನು ಮಜ್ಜನ ಮಾಡಿಸಿದ ನೀರನ್ನು ಮೂರು ಸೆರೆ ಕುಡಿಯ ಬೇಕಾಗುತ್ತಿದ್ದಿತು ೬೪೯

**ಕೋಳಾಟ** ಬಲಾತ್ಕಾರ ೪೨೭

**ಕೋಳಾಹಳ** ಗದ್ದಲ, ಗೊಂದಲ ೭೦೬

**ಕೌಂಡಿಲ್ಯ** ಕೌಂಡನ್ಯನೆಂಬ ಋಷಿ ೫೯೦

**ಕೌಳುಕೋಲು** ಸೀಳಿದ ತುದಿ ಯುಳ್ಳ ಬಾಣ ಅಥವಾ ಆಯುಧ ೨೦೮,೨೧೪

**ಖಚರ** ಆಕಾಶದಲ್ಲಿ ಓಡಾಡುವವ; ಯಕ್ಷ ಮೊದಲಾದ ದೇವತೆಗಳಲ್ಲಿ ಒಂದು ಭೇಧ ೨೨೪

**ಖಂಡ(?)ಯ** ಖಡ್ಗ, ಆಯುಧ ೬೨೫

**ಖಟ್ವಾಂಗ** ಶಿವನ ಕೈಯಲ್ಲಿಯ ಎಲುವಿನ ಆಯುಧ ೮೧೮

**ಗಂಗೆವಾಳುಕಸಮ** ಗಂಗಾನದಿಯ ಮಳಲ ಕಣಗಳ ಸಮಾನ; ಅಸಂಖ್ಯಾತ ೯೨೦

**ಗಂಜಳ** ಪಶುಗಳ ಮೂತ್ರ ೯೩

**ಗಡಣ** ಸಮೂಹ ೧೦

**ಗಡಣೆ** ಗಣನೆ, ಎಣಿಕೆ; ಲಕ್ಷ್ಯ, ಚಿಂತೆ ೬೧೨,೮೦೭

**ಗಡಹ** ಬಾಗಿಲ ಕೆಳಭಾಗ, ಹೊಸತಿಲ (ಹೋ: ತೆ: ಗಡಪ) ೧೦

**ಗಣ** ಶಿವನ ಸಂಗಡಿಗರು; ಜಂಗಮರು, ಶರಣರು ೩೬೭

**ಗಣಾಡಂಬರ** ಗಣಗಳ ಸಮೂಹ ೨೦೫

**ಗಂಡ** ಶೂರ, ಅಂಜದವ ೧೨

**ಗಂಡುಗೆದರು** ಶೌರ್ಯವನ್ನು ಪ್ರದರ್ಶಿಸು ೪೪೭

**ಗರ** (ಸಂ ಗ್ರಹ) ಭೂತ, ದೆವ್ವ, 'ಗಾಳಿ' ೧೩೨

**ಗರಳ** ವಿಷ ೮೪೪

**ಗರುವ** ದೊಡ್ಡ, ಮಾನ್ಯ ೮೪೩

**ಗರಿ** ಬಾಣ ೧೧೨

**ಗಳಗರ್ಜನೆ** ಗಂಟಲಿನಿಂದ ಬರುವ ನಾದ ೪೨೮

**ಗಳಹಂಸೆ** ಕಳಹಂಸ ೯೮

**ಗಳಹು** ಮನಬಂದಂತೆ ಮಾತಾಡು ೩೨೮,೫೬೯

**ಗಳೆ** ಕಣೆ, ಬಾಣ, ಆಯುಧ ೪೩೬,೭೦೧

**ಗಾಡಿಗ** ಮಾಟಗಾರ, ಮಾಂತ್ರಿಕ (?) ೫೫೬

**ಗಾತ್ರ** ಶರೀರ; ಆಕಾರ ೪೨

**ಗಾರುಡ** ಹಾವಿನ ಮಂತ್ರ ೧೬೦

**ಗಾವಿಲ** (ಸಂ: ಗ್ರಾಮೀಣ) ಹಳ್ಳಿಯವ; ತಿಳಿಗೇಡಿ, ಅಜ್ಞಾನಿ ೭೮

**ಗಿಣ್ಣಲು** ಗಿಂಡಿ ೫೬೩

**ಗೀತ** (೧) ಹಾಡು (೨) ಭಗವದ್ ಗೀತೆ ಮುಂತಾದುವು ೧೫೩,೨೨೫

**ಗೀತವಾಕ್ಯ** ಗೀತೆಗಳ ವಚನ ಅಥವಾ ಹೇಳಿಕೆ ೨೦೯

**ಗುಡಿ** ಧ್ವಜ ೨೨೧,೫೬೨

**ಗುಡಿಗಟ್ಟು** ಧ್ವಜವನ್ನೇರಿಸುವ; ಸಂತೋಷ ಸೂಚಿಸು ೧೬೩,೭೧೫

**ಗುಡಿಲು** ಗುಡಿಸಲು ೧೦೦

**ಗುಂಡ** ದೇವರೆಂದು ಪೂಜೆಗೊಳ್ಳುವ ಗುಂಡುಗಲ್ಲು ೬೩೬

**ಗುಮ್ಮಡಿ** (ಸಂ: 'ಮುಹ') ಧಾತುವಿನಿಂದ ಭ್ರಮೆಗೊಳಿಸುವ ಒಂದು ಬಗೆಯ (ಹೆಣ್ಣು) ಪಿಶಾಚಿ ೭೨೦

**ಗುಳಿ** ಕುಳಿ, ತಗ್ಗು ೮೯೨

**ಗುಳ್ಳೆ** (= ಗುಡ್ಡೆ) ರಾಶಿ, ದಿಬ್ಬ ೮೫೯

**ಗುಹ್ಯ** ಜನನೇಂದ್ರಿಯ ೮೪೪

**ಗೂಡು** ಶರೀರದೊಳಗಿನ ಅಸ್ಥಿಪಂಜರ ೧೬೧

**ಗೂಡುವೋಗು** ಒಣಗಿ ದೇಹದೊಳಗಿನ ಎಲಬುಗಳು ಕಾಣುವಂತಾಗು ೧೬೧

**ಗೊರಜೆ** ಗಿಡುಗಂಟೆ

**ಗೋಟು** ಮೂಲೆ; ದಿಕ್ಕು ೫೬೧
**ಗೋ(ಪ)ವ** ಗೋಪಾಲ, ದನಗಳನ್ನು ಕಾಯುವವ ೨೮೪
**ಗೋರಿ** ಬೇಟೆಯನ್ನು ಹಿಡಿಯುವ ಒಂದು ಸಾಧನ (ದೀಹೆದ ವ್ಯಾಗ ಅಥವಾ ಬಲೆ) ೮೩೫
**ಗೋವ(ಳ)** (= ಗೋಪಾಲ) ದನಗಳನ್ನು ಕಾಯುವವ ೨೦೪
**ಗೋವೇಧೆ** ಗೋವಿನಿಂದಾದ ಹಿಂಸೆ ೫೬೧
**ಗೋಸುಂಬಿ** "ಊಸರವಳ್ಳಿ" ೨೮೬
**ಘಟಿತ** ಆದುದು; ಭೂತಕಾಲ ೫೧೧
**ಚವರ್ಮ್ಮಾವುಗೆ** ಚರ್ಮದ ಆವುಗೆ, ಕೆರಹು ೩೬೭
**ಚಲ್ಲವಾಡು** ಸರಸವಾಡು ೬೬೧
**ಚಾ(ಂ)ಗು** ಕೊಂಡಾಟಕ ನುಡಿ ೩೩೭
**ಚಿತ್ತ್ರರಟ್ಟೆ** ಒಳಗೆ ಹುರುಳಿಲ್ಲದ ಒಂದು ಕಾಯಿ ೨೮
**ಚಿನ್ನಗೆಯ್ಕು** ಭಂಗಾರದ ಆಭರಣಗಳನ್ನು ಮಾಡುವವ ೨೧೫
**ಚುಳುಕು** (೧) (ಸಂ: ಚುಲುಕ) ಕೈಸೆರೆ; (೨) (ಸಂ: ಕ್ಷುಲ್ಲಕ) ಚಿಕ್ಕದು ೭೪೩
**ಚೆನ್ನಿಗ** ಸುಂದರ, ಚೆಲುವ ೪೦
**ಚೇಗು** ಕೆಚ್ಚು, ಸಾರ; ಹಿತ (ಹೋ: ತೆ: ಚೇಗ) ೨೪೮
**ಚೋಹ** (=ಜೋಹ) ಸೋಗು ೮೯೧
**ಚೌಪಥ** ನಾಲ್ಕು ಹಾದಿಗಳು ಕೂಡುವ ಸ್ಥಳ, "ಕೂಟು" ೫೫೭
**ಛಲದಾಳಿ** ತನ್ನ ಛಲವನ್ನು ಸಾಧಿಸುವವ ೬೬೫
**ಛಿದ್ರಿಸು** ಕುಂದುಕೊರತೆಗಳನ್ನು ಎತ್ತಿ ತೋರಿಸು ೧೦
**ಜಂಗಮ** ಓಡಾಡುವ, ಚಲಿಸುವ ೮೨೦
**ಜಂಗುಳಿ** ದನಗಳ ಹಿಂಡು ೨೮೪
**ಜಂಘೆ** ಕಣಕಾಲು; ಕಿರುದೊಡೆ ೩೬೫
**ಜಠರ** ಹೊಟ್ಟೆ; ಗರ್ಭ ೨೧
**ಜನಿತ** ಜನ್ಮಸಂಬಂಧ ೧೫
**ಜನ್ನ** ಯಜ್ಞ, ಯಾಗ ೫೮೩,೭೧೨
**ಜನ್ನಿಗೆಯ** ಯಜ್ಞ ಮಾಡುವವ, ವಿಪ್ರ ೭೦೦
**ಜಲಗು** ಮರಳಲ್ಲಿ ಬಹು ಪ್ರಯಾಸದಿಂದ ಶೋಧಿಸಿ ತೆಗೆದ ಬಂಗಾರದ ಕಣ ೩೧
**ಜವ** (=ಸಂ:)ಯಮ ೧೫೩
**ಜವೆ** ಒಂದು ಜವೆಗೋದಿಯ ಕಾಳಿನ ತೂಕ ೪೪೦
**ಜಾಗ್ರ(ತ್)** ಎಚ್ಚರ ೬೯೩
**ಜಾತಿಸಂಕರ** ಬೇರೆ ಬೇರೆ ಜಾತಿಗಳು ಕಲೆಬೆರಿಕೆಯಾಗುವಿಕೆ ೭೧೭

**ಜುಗ** (=ಸಂ:)ಯುಗ ೫೩೫

**ಜೂಬು** ಭಯಂಕರವಾದ ಒಂದು ವಸ್ತು ೪೪೬

**ಜೋಗೈಸು** ಜೋಕೆಮಾಡು; ಸಿದ್ಧಮಾಡು ೩೬೧

**ಜೋಡೆ** ಹಾದರದವಳು, ಜಾರೆ ೬೧೯

**ಜೋಳವಾಳಿ** ಅನ್ನದ ಹಂಗು; ಸ್ವಾಮಿಭಕ್ತಿ ೬೯೮

**ಝುಂಕೆ** ಬೆದರಿಗೆ ೭೨೮

**ಟೇವಕ ಟೆಂಬಕ** ತಂಬೂರಿಯ ತಂತಿಯನ್ನು ಮೀಂಟಿದಾಗ ಹೊರಡುವ ಧ್ವನಿಗಳು; ಇವುಗಳಿಗೆ ಸರಿಯಾಗಿ ನೃತ್ಯಕಾರನು ಹೆಜ್ಜೆಯನ್ನು ಹಾಕಬೇಕಾಗುವುದು ೧೮

**ಟೊಣೆ** ತೋಡು, ನುಸುಳು; ಪೋಸ ಮಾಡು ೨೭೧

**ಡಂಬು** ತೋರಿಕೆಯ ನೋಟ; ಹೊರಗಣ ವೈಭವ ೨೯; ಒಣ ಹೆಮ್ಮೆ ೩೩೬

**ಡವಿಗೆ** ತಲೆಬುರುಡೆ ೬೦೪

**ಡಳುಹು** ಹೆಮ್ಮೆ ೩೩೬

**ಡಿಂಗರಿಗ** ಸೇವಕ, ದಾಸ ೬.೩೬, ೪೬೩

**ಡಿಂಬು** ಉರಿಯುವದೀಪ (?) ೫೫೬

**ಡೊಂಕು** ಕೊರತೆ, ಅವಗುಣ, ಕೊಂಕು ೧೨೪

**ಡೊ(ೕ)ವಿಗೆ** (೧) ದೊಡ್ಡ ಬಿದಿರು (೨) ತಲೆಬುರುಡೆ ೫೬೯

**ತಕ್ಕೈಸು** (ಹ: ತಲ್ಕೈಸು) ಅಪ್ಪಿಕೊಳ್ಳು ೫೧೮

**ತಗರು** ಟಗರು ೬೪೩

**ತಗಹು** (೧) ಪ್ರತಿಬಂಧ(೨) ಪರಿವಿಡಿ

**ತಡಪಡಿ** ಚಿಂತೆ, ಕಾತರತೆ ೩೦೯

**ತಡಿ** ದಂಡೆ ೮೨

**ತಡೆಗೆಡಹು** ತಡೆ, ನಿಲ್ಲಿಸು ಪ್ರತಿಬಂಧಿಸು ೪೧೩

**ತಣಿ** ತೃಪ್ತನಾಗು

**ತದ್ಗತ** ತಲ್ಲೀನ; ಬೆರೆತ ೮೪೫

**ತಂತ್ರ** ಆಗಮಶಾಸ್ತ್ರ ೮೧

**ತರು** ಸಸಿ, ಸಣ್ಣಗಿಡ ೭೪

**ತಱಗೆಲೆ** ಒಣಗಿ ಕೆಳಗುದುರಿದ ಎಲೆ ೩೭೪

**ತಱಿಸಲುವೋಗು** ವಶವರ್ತಿಯಾಗು ೪೧

**ತಱಿಸಿಕೊಳ್ಳು** ತಲೆ ಕೊಯಿಸಿಕೊಳ್ಳು ೨೨೫

**ತಲಹು** ಗುರಿ ಮುಟ್ಟುವ ಶಕ್ತಿ (?) ೨೦೨

**ತವನಿಧಿ** ಕಡಿಮೆಯಾಗದ ಭಂಡಾರ ೩೨೦,೭೬೦

**ತವರಾಜ** (ಒಂದುವಿಧದ) ಸಕ್ಕರೆ ೨೯೦

**ತಳಿ** ಚೆಲ್ಲು, ಹರವು ೭೫೦
**ತಳಿಗೆ** ಊಟದ ಪಾತ್ರೆ, 'ತಾಬಂಡಿ' ೭೫೨
**ತಾಗು** ಮುಟ್ಟುವುದು ೯೦೨
**ತಾಮಸ** ಕತ್ತಲೆ; ಅಜ್ಞಾನ ೨೮೦
**ತಾಳ** ತಾಳೆಯ ಮರ ೯೦
**ತಾಪತ್ರಯ** ಮೂರು ಬಗೆಯ ತಾಪ; ಕಾಯ ಮನ ವಾಕ್ಕಿನಲ್ಲಿ ಉಂಟಾಗುವ ತಾಪ ೧೮೪
**ತಾಳ** ಅಂಗೈ ೩೯೨; ಹಾಡಿನಲ್ಲಿಯ ತಾಳ ೪೯೪
**ತಿಗುರು** ಮೈಗೆ ಪೂಸಿಕೊಳ್ಳುವ ದ್ರವ್ಯ ೭೦೧
**ತಿಟ್ಟನೆ** ದುಂಡಗೆ, ಬಟ್ಟನೆ; ತಿರ್ರನೆ ೫೮೦
**ತಿನ್ನು** ಕಚ್ಚು ೧೩೨; ತಿನಿಸು ಬಿಡು ೩೭೧
**ತಿಂತಿಣಿ** ಸಮೂಹ ೩೬೭
**ತೀವು** ತುಂಬು ೬೮೩
**ತುಡುಕು** ಹಿಡಿದುಕೊಳ್ಳು ೨೧೨
**ತುಯ್ಯಲು** ಪಾಯಸ ೧೨೦
**ತುರೀಯ** (=ತುರ್ಯ) (ವೇದಾಂತ ಪರಿಭಾಷೆಯಲ್ಲಿ) ಜೀವಾತ್ಮನು ಪರಮಾತ್ಮನೊಡನೆ ಬೆರೆತು ಒಂದಾಗುವ ಸ್ಥಿತಿ ೯೫೪
**ತೆತ್ತಿಗ** ಹೊಣೆಹೊತ್ತವ ೨೯೯
**ತೆರು** ಕರ ಇಲ್ಲವೆ ದಂಡವನ್ನು ಕೊಡು ೧೯೮
**ತೆರೆ** ತೊಗಲು ಮಡಿಕೆಯಾಗುವುದು; ಸುಕ್ಕು; ನಿರಿಗೆ ೧೬೧
**ತೆಱ(ಪು)ಹು** ಬಿಡುವು, ಅವಕಾಶ; ಎಡೆ, ಸ್ಥಳ ೨೭೦,೮೪೪
**ತೊಡಹ** ಆಭರಣ, ಒಡವೆ ೨೮೯
**ತೊಡರು** ಸಮಸ್ಯೆ; ಒಗಟು ೭೨೪
**ತೊಡರು** (ನಾ) ಅಭರಣ ೬೬೫, (ಕ್ರಿ) ಎದುರಿಸು, ಮಾರ್ಕೊಳ್ಳು ೬೯೯
**ತೊ(ಡ)ಡಿಗೆ** ಆಭರಣ; ಅಲಂಕಾರ ೭೦,೨೫೧
**ತೊಡು** ಧರಿಸು, ಹಚ್ಚಿಕೊಳ್ಳು; ೯೧; ಮಸುಳು, ಮಸುಳಿಸು, ಒರಸು ೪೭೨
**ತೊತ್ತುತನ** ಊಳಿಗ, ಸೇವೆ ೧೪೮
**ತೊಱೆ** (೧) (ನಾ) ಹೊಳೆ (೨) (ಕ್ರಿ) ಬಿಡು, ವಿಸರ್ಜಿಸು ೬೪೪
**ತೊಲಗು** ಬಿಟ್ಟುಹೋಗು ೯೧೨
**ತ್ಯಜತೆ** ತ್ಯಾಗ, ಬಿಟ್ಟುಕೊಡುವಿಕೆ ೮೬೪
**ತ್ರಿಪುಂಡ್ರ** ಹಣೆಯ ಮೇಲಿನ ವಿಭೂತಿಯ (ಮೂರು ಬೆರಳಿನ) ಅಡ್ಡ ರೇಖೆಗಳು ೮೮
**ತ್ರಿವಿಧ** ಮೂರು ರೀತಿಯಲ್ಲಿ ೨೦೬

**ದಕ್ಕು** (೧) ಆಸ್ತಿ (೨) ದಸಿ, ಹದನವಾದ ತುದಿಯುಳ್ಳ ಕಬ್ಬಿಣದ ಅಥವಾ ಕಟ್ಟಿಗೆಯ ತುಂಡು; ಬೇಟೆಯ ಒಂದು ಸಾಧನ ೧೮೯

**ದಡಿ** ಬಡಿಗೆ, ಗದೆ ೫೫೭,೫೬೬

**ದಂಡಿಗೆ** ವೀಣೆ ೫೦೦

**ದಂಡೆ** (೧) ಸೈನ್ಯದ ಸಾಲು (೨) ಮೊಳಕಾಲು ಊರಿ ಬಿಲ್ಲು ಹೊಡೆಯುವ ರೀತಿ ೨೯೯

**ದಂದುಗ** ದುಃಖ, ಸಂಕಟ ೩೭

**ದರದುರ** (== ಧರಧುರ) ಶ್ರೇಷ್ಠ, ನಿಸ್ಸೀಮ ೩೧೧,೪೧೮

**ದರ್ಮ** ಧರ್ಮ ೧೧೧

**ದಾಸೋಹ(ಂ)** (ಸಂ: ದಾಸಃ ಅಹಮ್) ನಾನು ದಾಸನು ಎಂಬ ಭಾವನೆ; ದಾಸನಾಗಿ ನಡೆಯುವುದು, ಸೇವಾ ವೃತ್ತಿಯನ್ನು ಕೈಕೊಳ್ಳುವುದು ೨೦೭,೯೩೫

**ದಿಟ** (ಸಂ: ದೃಷ್ಟ) ಕಂಡದ್ದು; ನಿಜ, ಸತ್ಯ ೧೮,೬೭೫

**ದಿ[ಬ್ಯ]ವ್ಯ** ಕಾಸಿದ ಕಬ್ಬಿಣ ಕುಳವನ್ನು ಹಿಡಿಸಿಯಾಗಲಿ ಮರಳುವ ಕಾಯ್ದೆಣ್ಣೆಯಲ್ಲಿ ಕೈಯದ್ದಿಸಿಯಾಗಲಿ ಅಪರಾಧಿಗಳೆಂದು ಆಪಾದಿತರಾದವರ ನಿಜವನ್ನು ನಿಶ್ಚಯಿಸುವ ಪುರಾತನ ಕಾಲದ ಒಂದು ಕ್ರಮ ೨೩೫, ೩೩೩,೬೪೯

**ದಿಷ್ಟ** (ಸಂ: ದೃಷ್ಟ) ಆಧಾರ, ದೃಷ್ಟಾಂತ ೫೬೫

**ದುಂಡೆ** ದಿಂಡಿಗಿತ್ತಿ, ಮನಬಂದಂತೆ ವರ್ತಿಸುವವಳು ೬೧೭

**ದುರಿತ** ಪಾಪ, ಕೆಟ್ಟಕೃತಿ ೭೯,೬೫೬

**ದೃಷ್ಟಿಯೂರೆ** ಕಣ್ಣುತುಂಬಿ, ಕಣ್ಣಾರೆ ೧೪೦

**ದೇಗುಲ** ದೇವರ ಗುಡಿ ೨೨೨

**ದೇವಗಣ** ಛಂದಸ್ಸಿನ (ಅಥವಾ ಹಾಡಿನ) ಗಣಗಳಲ್ಲಿಯ ಒಂದು ಭೇಧ ೪೯೪

**ದೇವಾನ್ನ** ದೇವತೆಗಳಿಗೆ ಯೋಗ್ಯವಾದ ಅನ್ನ; ದಿವ್ಯಾನ್ನ ೪೩೯

**ದೇವಾಭಕ್ತ** ದೇವರ ನಿಜಭಕ್ತ (?) ದೇವುಲಾಳು........? ೩೨೭,೫೭೧

**ದೇಸಿವಡೆ** ಯೋಗ್ಯನಾನು, ಸೊಬಗುವಡೆ ೬೦೬

**ದೇಹಾರ** 'ದೇವರ ಆಹಾರ' (ವೆಂದು ಕೆಲವರ ಅರ್ಥ;) ಆದರೆ ಇದು 'ದೇವಾರ'ವೆಂದಿತ್ತು ಸ್ತೋತ್ರ ಅಥವಾ ಪ್ರಾರ್ಥನೆ ಎಂದು ಅರ್ಥವಿರಬಹುದೇನೋ (?) ೬೪೮

**ದೇಹಿ** 'ಕೊಡು' ಎಂದು ಬೇಡುವಾತ ೪೪೩

**ಧವಳಿತ** ಬಿಳಿಯ ಬಣ್ಣದವ ( ಇಲ್ಲಿ ) ಶಿವ ೫೬೧

**ಧರಧುರ** ಶ್ರೇಷ್ಠ, ಹೆಚ್ಚಿನ ೧೪೯

**ಧಾತು** ಬಲ, ಶಕ್ತಿ ೪೩

**ಧಾರೆ** ಕತ್ತಿಯ ಮೊನೆ ೨೧೧

**ಧಾರಿವಟ್ಟಲು** ಶಿವಾಲಯಗಳಲ್ಲಿ ಲಿಂಗದ ಮೇಲೆ ಕಟ್ಟಿದ ಅಭಿಷೇಕದ ಪಾತ್ರೆ ತೂತುಳ್ಳ; ಎಂದರೆ ಸೋರುವ ಪಾತ್ರೆ ೨೮೫

**ಧಾವತಿ** ಶ್ರಮ ೨೧೨, ೩೬೯

**ಧೃತಿ** ಧೈರ್ಯ ೪೩

**ನಚ್ಚು** ನಂಬು ೩೩

**ನಂಜು** ವಿಷ ೨೬

**ನಟ್ಟುವಿಗ** ನಾಟಕಕಾರ, ಪಾತ್ರಧಾರಿ ೬೧೩

**ನಡೆಲಿಂಗ** ನಡೆಯುವ ಲಿಂಗ; (ಇಲ್ಲಿ) ಜಂಗಮ ೪೧೫

**ನಡೆನೆಣ** ನಡೆದಾಡುತ್ತಿದ್ದರೂ ಹೆಣದಂತೆ ನಿರ್ವೀರ್ಯವಾಗಿರುವವ ೧೫೭

**ನಂಟ** ಬಂಧು, ಬಳಗದವ ೨೫

**ನಂದನ** ದೇವೇಂದ್ರನ ತೋಟ ೯೮

**ನಂಬಿ** (೧) ನಂಬಿಗೆಯಿಂದ (೨) ಸೌಂದರ ನಂಬಿ ಎಂಬೊಬ್ಬ ಪುರಾತನ ಶರಣ ೧೧೬

**ನರ** ಅರ್ಜುನ ೬೫

**ನರವಿಂಧ್ಯ** (ಪಶುಗಳಂತಹ) ಜನರು ವಾಸಿಸುವ (ಗುಡ್ಡುಗಾಡಿನಂತಹ ವಾಸಕ್ಕೆ ಕಷ್ಟಕರವಾದ) ಸ್ಥಾನ ೫೮

**ನಲ್ಲ** ಪ್ರಿಯ ೮೪೯

**ನಾಕಡಿ** ನಾಲ್ಕು ಅಡಿ ೮೫೬

**ನಾಡು** ಲೋಕ; ಸಾಮಾನ್ಯಜನರು ೨೭೮

**ನಾಣು** ಲಜ್ಜೆ, ನಾಚಿಗೆ, ಹೇವ ೪೯೮, ೭೫೮

**ನಾಯಕನರಕ** ಘೋರನರಕ ೮೯, ೫೬೯

**ನಾಯತೇಜ** ಹೇಯವಾದ ದರ್ಪ ಅಥವಾ ಕೀರ್ತಿ ೪೩೯

**ನಾಯಿತನ** (ನಾಯಿಯಂತಹ) ಹೀನಸ್ವಭಾವ ೩೫

**ನಾ[ಯಿ]ವಿದ** (ಸಂ: ನಾಪಿತ) ಕ್ಷೌರಿಕ ೫೯೦

**ನಾರಿವಾ[ಣ]ಳ** ತೆಂಗು, ೩೧, ೭೫೦

**ನಾರುಳಿ** ತೆಂಗು (?) ೮೬೩

**ನಾಳಿದ್ದು** ನಾಡದು (ನಾಳೆಯ ಮರುದಿನ) ೭೨೨

**ನಿಕ್ಷೇಪಿಸು** ಹೂಳಿಡು; ನಿಧಿಯಾಗಿರಿಸು ೫೩೬

**ನಿಕ್ಷೇತ್ರ** ಕ್ಷೇತ್ರವಲ್ಲದಂತಾಗುವುದು, ನಾಶ; (?) ೫೮೩

**ನಿಚ್ಚನಿಚ್ಚ(ಕೆ)** ಯಾವಾಗಲೂ, ಸದಾ ೯೩

**ನಿಟ್ಟೈದೆ** ಬಹುಕಾಲ ಐದೆಯಾಗಿ ಬಾಳುವವಳು ೫೦೫

**ನಿಧಾನ** ಕೂಡಿಟ್ಟ (ಹೂಳಿಟ್ಟ) ಧನ ೩೧, ೭೫೮

**ನಿಧಿ** ಕೂಡಿಟ್ಟ ಧನ, ಸಂಪತ್ತು ೭೫೮

**ನಿಮಿರು** ನಿಗುರು, ವಿಕಾಸವಾಗು ೪೯೧

**ನಿರತ** (೧) ಮಗ್ನ, ಆಸಕ್ತ (೨) ಬಿಟ್ಟ, ತ್ಯಾಗ ಮಾಡಿದು ೯೦೧

**ನಿ(ರ)ರ್ವಯಲು** ನಿಬ್ಬಯಲು, ಶೂನ್ಯ ೪೧೫

**ನಿರಂಜನ** ಯಾವುದರ ಸೋಂಕೂ ಇಲ್ಲದ, ಪವಿತ್ರ ೧೬೭,೮೧೩

**ನಿರವಯ** ಅವಯವವಿಲ್ಲದ, ಪರಿಪೂರ್ಣ ೯೫೩

**ನಿರಾಳ** ಶಾಂತ, ಸಂದೇಹವಿಲ್ಲದ

**ನಿರೂಪು** ರೂಪವಿಲ್ಲದ ೮೩೮

**ನಿಱಿ** ಸೀರೆಯ ಮಡಿಕೆ, ನಿರಿಗೆ ೧೧೨

**ನಿಲವು** ಇರುವಿಕೆ, ನಿಜಸ್ಥಿತಿ; ಸ್ಥಾಪನೆ ೭೦೯;೮೩೩

**ನಿಲಸಾಲೆ** ನಿಲ್ಲಲಾರೆ ೮೪೯

**ನಿವಾಟೆ** ನಿರ್ಮೂಲನ(?) ೯೩೦

**ನಿವಾಡಿಸು** ಗುರುತುಹಿಡಿ; ಆರಿಸು ೨೮೪,೬೬೭

**ನಿವೇದಿಸು** ನೀಡು, ಕೊಡು ೩ ೫

**ನಿಷ್ಪತ್ತಿ** ಕೊನೆಯ ಪರಿಣಾಮ, ಮಾಗಿತಾಯ; ಪರಿಪಾಕ ೩೦೬, ೫೨೭

**ನಿಸ್ಸಂಗ** ಯಾವುದರ ಹಂಗೂ ಇಲ್ಲದ ೪೮೮

**ನಿ(ಃ)ಕರಿಸು** ಇಲ್ಲದಂತೆ ಮಾಡು(?) ೮೪೧

**ನುಡಿವೆಣ** ಮಾತಾಡುತ್ತಿದ್ದರೂ ಹೆಣದಂತೆ ಇರುವವ ೧೫೯

**ನುಸುಳು** ತಪ್ಪಿಸುವಿಕೆ, ಮೋಸ ೪೧

**ನೂಂಕು** ಮುಂದೆ ಸಾಗಿಸು ೭೪೪

**ನೂಱನೋದು** ನೂರುಸಾರಿ ಮಂತ್ರ ಜಪಿಸು ೪೭೪

**ನೆನೆ** (೧) ತೊಯ್ಯು (೨) ನೆನೆಸು; ಸ್ಮರಿಸು ೧೮೪

**ನೆಟ್ಟೆಲುವು** ನೆಟ್ಟನೆಯ ಎಲುಬು; ಬೆನ್ನೆಲಬು ೮೧೪

**ನೆಮ್ಮು** ನಂಬು, ಆಧಾರಮಾಡಿಕೊಳ್ಳು, ಅವಲಂಬಿಸು ೫೮೩,

**ನೆರಹು** ಜನರನ್ನು ಕೂಡಿಸು ೨೨೮

**ನೆರವಿ** ಕೂಟ ೮೨೫

**ನೆರೆ** (ರತಿಕೇಳಿಯಲ್ಲಿ) ಕೂಡು ೧೦೧, ೭೦೬; ಅಕ್ಕಪಕ್ಕ, ಹೊರೆ ೧೨೪; ಕೈಗೂಡು, ಸಿದ್ಧಿಸು ೧೬೯

**ನೆಲನಾಳ್ದ** ಅರಸು ೧೫೮

**ನೆವ** (೧) ನೇಮ (೨) ನೆಪ ೫೭೮

**ನೇಣು** ಹಗ್ಗ, ಹುರಿ; ಉರಿಲು ೫೮೯

**ನೇಮ** ನಿಯಮ, ವ್ರತ ೨೩೧,೭೨೫

**ನೇಹ** (ಸಂ: ಸ್ನೇಹ) ನಂಟು, ಮಿತ್ರತ್ವ; ಪ್ರೀತಿ ೧೨೬

**ನೋನು** ವ್ರತಮಾಡು ೮೨,೫೫೯

**ನೋಂಪಿ** ವ್ರತ, ನೇಮ ೧೫೨

**ಪಂಗುಳ** ಹೇಳವ; ದಾಸ ೬೪೧

**ಪಚಾರಿಸು** ಸಿಂದಿಸು, ಹೀಯಾಳಿಸು ೬೨೨

**ಪಟ್ಟಿಯ** ಖಡ್ಗ ೬೬೮

**ಪಡಿ** (ಸಂ: ಪ್ರತಿ) ಸಮಾನ, ಸಾಟಿ ೬೬

**ಪಡಿದೊತ್ತು** ತೊತ್ತಿನ ತೊತ್ತು ೮೩೦

**ಪತಂಗ** ದೀಪದ ಹುಳು ೮೧೨

**ಪಥ** ಹಾದಿ; ಪದ, ಸ್ಥಿತಿ ೭೦

**ಪಂಥ** ದಾರಿ, ಚಟ್ಟಿ ೩೬

**ಪದವಿ** ಮನ್ನಣೆ, ಮರ್ಯಾದೆ ೪೭೪

**ಪರವಾದಿ** ಬೇರೆ ಧರ್ಮದ ಪರವಾಗಿ ವಾದಿಸುವವ ೫೬೯

**ಪರಿ** ರೀತಿ; ಸ್ಥಿತಿ ೪೧;೮೭೬

**ಪರಿಭವ** ಸೋಲು, ಅವಮಾನ ೨೭೬

**ಪರಿಣಾಮಿಸು** ಸಮಾಧಾನದಿಂದಿರು ೨೫೦; ಸಮಾಧಾನಪಡಿಸು ೭೦೫

**ಪರಿಣಾಮ** ತೃಪ್ತಿ, ಶಾಂತಿ ೨೨, ೨೨೯

**ಪರಿ[ಯ]ಯಾಣ** ತಳಿಗೆ, ತಾಟು ೮೩೬

**ಪರುಷ** (ಸಂ: ಸ್ಪರ್ಶ) ಸ್ಪರ್ಶದಿಂದ ಕಬ್ಬಿಣವನ್ನು ಭಂಗಾರ ಮಾಡುವ ಮಣಿ ೭೩,೭೯೧

**ಪರುಷವೇದಿ** (೧) ಪರುಷದ ಜ್ಞಾನವುಳ್ಳ (೨) ಪರುಷದ ಕಟ್ಟೆಯನ್ನು ಪಡೆದ ೫೬೯

**ಪವನಭೇದ** (ಇಡಾ, ಪಿಂಗಳಾ ಎಂಬ) ಉಸಿರಿನ ಭೇದ ೭೯೯

**ಪಲ್ಲಟೆ** ಮಾರ್ಪಾಟು ಅದಲು ಬದಲು ೬೩,೮೬

**ಪಲ್ಲವಿಸು** ಚಿಗುರು, ಎಲೆಬಿಡು ೪೨೦

**ಪವಾಡ** ಅಮಾನುಷಕೃತ್ಯ ೮೯೧

**ಪಾಡು** ಹಾಡು; ಹೊಗಳಿಕೆ ೭೦೧

**ಪಾತ್ರ** ಯೋಗ್ಯ ೮೦೪

**ಪಾಶ** ಕೊರಳಿಗೆ ಕಟ್ಟುವ ಕಣ್ಣಿ, ಉರಿಲು ೬

**ಪಸಾರೆ** (ಸಂ: ಪ್ರಸಾರ) ಬೆಳೆಸುವುದು; ನಾಳೆಗೆ ತಮ್ಮವರಿಗೆ ಬೇಕೆಂದು ಹಿಂದಿಟ್ಟುಕೊಳ್ಳುವ ವೃತ್ತಿ ೩೨೫

**ಪಾಣ(ರು)** ಹಾಡು ಮತ್ತು ಕುಣಿತವನ್ನು ಬಲ್ಲವರು; 'ಲಾವಣಿಕಾರರು ಹೋ; ತಿರುನೀಲಕಂಠ ಪಾಣರ್ ೬೧೩

**ಪಾಪಿಯ ಕೂಸು** ಶ್ರೀಶೈಲದಲ್ಲಿ ಕೆಲವರಿಗೆ ಕಣ್ಣಿಗೆ ಬೀಳುವ ಒಂದು ಕೂಸು [ಇದು ಎತ್ತಿಕೊಂಡವರನ್ನೆ ನಾಶಮಾಡುವುದೆಂತೆ] ೬೭೨

**ಪಾರದ್ವಾರ** (ಸಂ: ಪಾರದಾರ್ಯ) ಪರನಾರಿಯರ ಸಂಗ ೭೮೫

**ಪಾವಕ** ಬೆಂಕಿ ೯೪೯

**ಪಿಂಡ** ದೇಹ; ಸಮೂಹ ೮೭೯

**ಪುಟ** ಭರಣಿ, ಪೊಟ್ಟಣ (?) ೧೮, ೨೫೦

**ಪುಟವಿಕ್ಕು** ಕರಗಿಸಿ ಅವಲೋಹಗಳನ್ನು ತೆಗೆದು ಶುದ್ಧಮಾಡು ೨೫೦

**ಪು(ತ್ತ)ತ್ಥಳಿ** ( ಸಂ: ಪುತ್ರಿಕೆ ) ಗೊಂಬೆ, ಮೂರ್ತಿ ೧೬

**ಪುನರ್ಜಾತ** ಸಂಸ್ಕಾರ ಹೊಂದಿ ಎರಡನೆಯ ಜನ್ಮವನ್ನು ತಾಳಿದ ೮೯

**ಪುರಾತ** (ಸಂ: ಪುರಾತನ) ಹಿಂದಿನ ಕಾಲದ ಸುಪ್ರಸಿದ್ಧ ವಕ್ತ(ರು)

**ಪುರಾತವಳಿ** ಪುರಾತನರ ಪರಂಪರೆ ೬೭೮

**ಪುಳಕ** ಕೂದಲು ನೆಟ್ಟಗಾಗುವುದು, ರೋಮಾಂಚ, (ಹರ್ಷ, ಅಥವಾ ವಿಸ್ಮಯದ ಲಕ್ಷಣ) ೩೭೮

**ಪೂರಾಯ** ಪೂರ್ಣ ೧೫೦

**ಪೂರಾಯಘಾಯ** ದೊಡ್ಡ ಗಾಯ ೩೮೭

**ಪೂರ್ವಕ್ರಿ** ಹಿಂದೆ ನಡೆದ (ಇತಿಹಾಸದ) ಸಂಗತಿ ೫೫೨

**ಪೂರ್ವಲಿಖಿತ** ಮೊದಲೆ ಹಣೆಯಲ್ಲಿ ಬರೆದುದು ೨೭೦

**ಪೂರ್ವಾಶ್ರಯ** ಹಿಂದಣ ಸ್ಥಿತಿ, ಹಿಂದಣ ಜನ್ಮ ೮೯,೭೬೮

**ಪೆ[ಯ]ಯ್ಯ** (ಆಕಳು) ಕರು, ವತ್ಸ ೮೮೫

**ಪೋಲುಗ** (ಪೊಲ್ಲುಗ) ಹಾಳುಮಾಡುವವ, ಕೆಡಕು ಮಾಡುವವ ೩೩೫

**ಪ್ರತಿ** ಇದಿರು; ಸರಿ, ಸಾಟಿ ೫೨೯

**ಪ್ರತಿ(ಪಾ)ದಿಸು** ಉಪದೇಶ ಮಾಡು; ಕಲಿಸು ೨೩೬,೨೬೩

**ಪ್ರಪಂಚಿ** (೧) ಸಂಸಾರದಲ್ಲಿ ಆಸಕ್ತ (೨) ಮೋಸಗಾರ ೬೩೨,೬೧೬

**ಪ್ರಪಂಚು** (ಸಂ: ಪ್ರಪಂಚ) ಸಂಸಾರ ಜಗತ್ತು, ವಿಶ್ವ ೨೯; ವಂಚನೆ, ಮೋಸ ೬೧

**ಪ್ರಮಾಣು** ( ಸಂ: ಪ್ರಮಾಣ ) ಸಾಕ್ಷಿ, ಆಧಾರ ೨೩೯,೩೪೦

**ಪ್ರಸಂಗ** ಸಂಭಾಷಣೆ(ಯ ವಿಷಯ) ೮೮೮

**ಪ್ರಸಾದ** (ವೀರಶೈವರ ಅಷ್ಟಾವರಣದಲ್ಲಿ ಒಂದು)ಗುರುಲಿಂಗಜಂಗಮಕ್ಕೆ ಎಡೆಮಾಡಿ-ಅವರಿಂದ ಒಕ್ಕಿ ಬಂದುದೆಂದು ಸ್ವೀಕರಿಸತಕ್ಕ ಭೋಜ್ಯ ಪದಾರ್ಥ ೧೦೪

**ಪ್ರಾರಬ್ಧಕರ್ಮ** ಹಿಂದಿನ ಜನ್ಮದಲ್ಲಿ ಆರಂಭವಾಗಿ ಇನ್ನೂ ಮುಗಿಯದೆ ಇದ್ದ ಕರ್ಮ (ಫಲ) ೭೭೩

**ಬಗಿ** ಸೀಳು ಇಬ್ಭಾಗ ಮಾಡು ೪೭೮

**ಬಗೆ** ಮನಸ್ಸು ೬೭೧

**ಬಚ್ಚ** ಬರಿಯ ೮೧೪

**ಬಚ್ಚಣಿ** ಮುಸುಕು, ಮುಚ್ಚಣಿಕೆ ೫೬೨

**ಬಜಾವಣೆ** ಬಾರಿಸುವಿಕೆ ೪೯೪

**ಬಟ್ಟೆ** ಮಾರ್ಗ, ದಾರಿ, ಹಾದಿ ೬೩,೭೩೭

**ಬಂಟ** ಸೇವಕ, ದಾಸ ೪೬೬,೭೬೬

**ಬಡಿಹ** ಬಡಿತ, ( ಸುತ್ತಿಗೆಯಿಂದ ) ಬಡಿಯುವುದು ೨೫೧

**ಬಂಡು** ಹೂವಿನಲ್ಲಿಯ ಮಕರಂದ ೩೬೪

**ಬಂದಿವಿಡಿ** ಜನರನ್ನು ಸೆರೆಹಿಡಿದು ಸುಲಿ ೬೯೭

**ಬಂದಿಕಾಱ** ಸುಲಿದುಕೊಳ್ಳುವವ, ಹಾದಿಯ ಕಳ್ಳ ೭೧೮

**ಬಯಸು** ಆಸೆಮಾಡು ೨೪

**ಬಯಿಸು** ಬಚ್ಚಿಡು ೭೨೩

**ಬಯಕೆ** ಬಚ್ಚಿಟ್ಟ ನಿಧಿ ೭೨೨

**ಬಯ್ಕೆ** ಬಚ್ಚಿಟ್ಟ ನಿಧಿ ೧,೭೨೧

**ಬಲ್ಲಹ** ಒಡೆಯ, ದೇವರು ೪೭೪, ೬೦೯

**ಬಲ್ಲಿದ** ಬಲಿಷ್ಠ; ಬಲ್ಲವ ೧೫೦,೯೦೩

**ಬಳಸು** ಸುತ್ತು, ತಿರುಗು ೮೯೪

**ಬಳವೆ** (=ಬಾಳುವೆ) ವೃದ್ಧಿ ೨೨೭

**ಬರಬರ** ಬರಬರುತ್ತ, ಕ್ರಮೇಣ ೨೩೦

**ಬವರ** ಕಾಳಗ ೧೫೦

**ಬಳಿ** ಕ್ರಮ, ಪರಂಪರೆ ೩೭; ವಂಶ, ಮನೆತನ ೩೪೭; ಹಿಂಡು, ಗುಂಪು ೩೬೫

**ಬಳಿನೀರು** ಕ್ರಮ, ಸಂಪ್ರದಾಯ, ಸ್ಥಾನ ಮುಂತಾದುದನ್ನು ಬಿಡದಂತೆ ಇರಲೇಬೇಕೆಂದು ( ವೈ ಮೇಲೆ ) ಎರೆಯುವ ನೀರು ೫೦೧

**ಬಳಿದೊತ್ತು** ವಂಶಪರಂಪರವಾಗಿ ಒಂದು ಮನೆಗೆ ಹೊಂದಿಕೊಂಡ ತೊತ್ತು ೩೫೩

**ಬಯ್ಚಿಡು** ಬಚ್ಚಿಡು ನಿಧಿಯಾಗಿರಿಸು ೧

**ಬ(ಸಿ)ಸುಱು** ಹೊಟ್ಟೆ ೯೧೯

**ಬಸು(ಱ್)ಗುತ್ತ** ಹೊಟ್ಟೆಬೇನೆ; ಅತಿಸಾರ ೬೬೩

**ಬಳ್ಳ** ಒಂದು ಅಳತೆ (ಯ ಪಾತ್ರೆ ೩೨೭

**ಬಳ್ಳು** ನರಿ ೨೨೭

**ಬಾತೆ** (ಹ: ಬಾಬ್ತಿ) ಪ್ರಯೋಜನ ೩೬೪

**ಬಾದುಮ, ಬಾದುಂಬೆ** ಗೊಂಬೆ, ಪ್ರತಿಮೆ ೬೩೬

**ಬಾಬಿಸಲೆ** ಭಾವಿಸಲೆ (?) ೩೨೭

**ಬಾರನೆತ್ತು** ಬಾಸಳಗಳೇಳುವಂತೆ ಹೊಡೆ ೧೧೧

**ಬಾಲಿ** ವಾಲಿ ( ಸುಗ್ರೀವನ ಅಣ್ಣ ) ೬೨೪

**ಬಾವುಲು** ತೊಗಲ ಬಾವಲಿ ೨೮೭

**ಬಾ(ಳ್)ಳು** ಕತ್ತಿ ೨೧,೭೮೯

**ಬಾಳು** (ಪತಿಯ ಕೂಡ) ಸಂಸಾರ ೨೯೬

**ಬಾಳುವೆ** (=ಬಳವೆ) ವೃದ್ಧಿ, ಹೆಚ್ಚಳ ೨೨೭

**ಬಾಳುವೆಣ** ಜೀವಿಸುತ್ತಿದ್ದರೂ ಸತ್ತಂತೆ ಇರುವವ, ಅರೆ ಸತ್ತವ ೧೫೭

**ಬಿಟ್ಟಿ** (ಸಂ: ವಿಷ್ಟಿ) ಸಂಬಳವಿಲ್ಲದ ಅಥವಾ ಬಲತ್ಕಾರದ ಊಳಿಗ ೧೧೩

**ಬಿಡು** ಬಿಡಾರವಮಾಡು ೬೦೯

**ಬಿದಿರು** (೧) (ನಾ) ವೇಣು, (೨) (ಕ್ರಿ) ವಿನಮ್ರನಾಗು ೨೨೧ (೩) ಚೆದುರು, ಚಲ್ಲಾಪಿಲ್ಲಿ ಯಾಗು ೫೪೦

**ಬಿದ್ದು** ಊಟ, ಆಹಾರ ೬೩೭

**ಬಿನ್ನಾಣ** (ಸಂ: ವಿಜ್ಞಾನ) ತಿಳಿವಳಿಕೆ, ವಿಶಿಷ್ಟಜ್ಞಾನ; ನೈಪುಣ್ಯ ೧೨; ಹೊರಗಣ ನಯ ೭೬

**ಬಿನ್ನಾಣಿ** (ಸಂ: ವಿಜ್ಞಾನಿ) ತಿಳಿದವ; ಚತುರ, ಜಾಣ; ಟಕ್ಕ ೭೨೪,೭೨೫

**ಬಿಂದು** ಶುಕ್ರ, ವೀರ್ಯ ೫೯೧

**ಬಿಮ್ಮು** ಬಿಗಿಯಾಗಿರುವಿಕೆ; ಸೊಕ್ಕು, ಗರ್ವ ೨೪೫,೮೮೮

**ಬಿರಿ** ಬಿಚ್ಚು, ಅರಳು ೪೮೬

**ಬಿಲಿ** ಕ್ರಯಮಾಡಿ ಕೊಳ್ಳು ೧೦೪, ೧೮೫

**ಬೀಗು** ಪುಷ್ಪವಾಗು, ಕೊಬ್ಬು

**ಬೀಯಂ** ಅನ್ನ, ಆಹಾರ ೪೩೩

**ಬೀಯ** (ಸಂ: ವ್ಯಯ) ವೆಚ್ಚ; ಲೀನ ೮೬೫

**ಬೀಸರ** ನಾಶ; ಹಾಳು ೫೦೬,೮೮೪

**ಬೀಳುಡಿಗೆ** ನಿರುಪಯೋಗವೆಂದು ತೆಗೆದೊಗೆದ ಉಡಿಗೆ ೪೬೩

**ಬೀಳುವೆಣ** ಹೆಣದಂತೆ ಬಿದ್ದಿರುವವ ೧೫೭

**ಬೆಚ್ಚು** ಬೆದರು ೧೪೮

**ಬೆಡಗು** ವಿಲಾಸ, ಮನೋಹರತೆ ೭೭

**ಬೆದಕು** ಹುಡುಕಾಡು, ಶೋಧಿಸು ೨೮

**ಬೆದಱಿಟ್ಟು** ಬೆದರಿಸಿ ಬೆನ್ನುಹತ್ತು ೬೬೦

**ಬೆನಕ** (೧) ದುಂಡನೆಯ ಬೆಣಚು ಗಲ್ಲು; (೨) ವಿನಾಯಕ, ಗಣೇಶ ೪೫೦

**ಬೆಂತರ** (ಸಂ: ವ್ಯಂತರ) ಒಂದು ಬಗೆಯ ಪಿಶಾಚಿ, ಭೂತ ೯೯

**ಬೆಂದ** ಸುಟ್ಟ, ಕೆಟ್ಟ, ಹಾಳಾದ ೩೪,೪೨

**ಬೆಱಣಿ** (ಸಗಣಿಯ) ಕುರುಳು ೧೬೬

**ಬೆಱೆ** ಸೆಟೆ, ಅಹಂಕಾರದಿಂದ ವರ್ತಿಸು ೧೯೦,೩೯೬

**ಬೆರಸು** (ರತಿಯಲ್ಲಿ) ಕೂಡು, ನೆರೆ ೭೩೮

**ಬೆಸನ** (ಸಂ: ವ್ಯಸನ) ಉತ್ಕಟ, ಆಸೆ ೮೧೭

**ಬೆಸನ** (ಸಂ: ವಿಧಾನ?) ಅಪ್ಪಣೆ, ಆಜ್ಞೆ ೮೬೪

**ಬೆಂಬೀಳು** ಬೆಂದು ಬೀಳು ೧೯

**ಬೆಳುಗಾರ** 'ಬಳೆಗಾರ'; ಟಂಕಣ ೭೫೩

**ಬೆಳ್ಳಾರ** (=ಬೆಳ್ಳಾವರ) ಮೃಗಗಳನ್ನು ಹಿಡಿಯುವ ಬಲೆ ೮೩೫

**ಬೆಳ್ಳಿ** ಮೋಸ, ಕೃತ್ರಿಮ (ಆಕಳುಕರು ?) ೩೭೨

**ಬೆ[ಳ್ಳು]ಳುಕ** ಬೆಳ್ಳಗಿರುವುದು ೭೫೭

**ಬೇಗೆ** ಕಾಳ್ಗಿಚ್ಚು ೨೫

**ಬೇಟ** ಬೇಡಿಕೆ; ಬಯಕೆ, ಪ್ರೇಮವಿಲಾಸ, ಶೃಂಗಾರ ಚೇಷ್ಟೆ ೫೬೯; ೧೨೨,೩೩೦

**ಬೇ(ಳ್)ಳು** ಯಜ್ಞದಲ್ಲಿ ಆಹುತಿ ಕೊಡು ೫೯೩

**ಬೊಜಗ** (ಸಂ: ಭುಜಂಗ) ವಿಟಪುರುಷ ೧೦೧

**ಬೊಂತೆ** ಕವುದಿ ೪೧೧

**ಬೊಪ್ಪ** ತಂದೆ ೩೪೮

**ಬೊಬ್ಬುಳಿಕೆ** ನೀರಗುಳ್ಳೆ ೧೬೭

**ಬೊಲ್ಲ** ಭಲರೆ (ಕೊಂಡಾಟದನುಡಿ) ೩೩೬

**ಬೊಳ್ಳಿತನ** ಮೋಸ ೬೬೭

**ಬೊಳ್ಳಿಗ** ಮೋಸಗಾರ ೬೬೮

**ಬೋ** (ಸಂ: ಭೋ) ಎಲವೋ ೧೬೪

**ಬೋನ** ಅನ್ನ, ಆಹಾರ ೧೯೪

**ಬೋಯಿತಿ** ಮೀನಗಾರಿತಿ ೫೯೦

**ಬೊ(ೞ)ಹರಿಗೆ** ಕಸಬರಿಗೆ, ಪೊರಕೆ ೩೫೪

**ಬೋಳ** ಬೋಳುದಲೆಯವ ೧೦೩

**ಬ್ರಹ್ಮವಿತ್ತು** ಬ್ರಹ್ಮವನ್ನು ತಿಳಿದವ ೫೮೩

**ಬ್ರಹ್ಮೇತಿ** ಬ್ರಹ್ಮಹತ್ಯೆ ೫೮೪

**ಬ್ರತ** ವ್ರತ, ನೇಮ; ಆಚಾರ ೨೨೦

**ಭಂಗ** ಅಪಜಯ; ಅಪಮಾನ ೨೭೬

**ಭಂಡ** ನಾಚಿಕೆಯಿಲ್ಲದವ ೩೩೧

**ಭಂಡಾರಿ** ಬೊಕ್ಕಸವನ್ನು ರಕ್ಷಿಸುವವ ೩೪೬

**ಭರ** ಸಂಭ್ರಮ, ತವಕ ೧೭೫;೧೬೭ ಪ್ರಾಬಲ್ಯ, ಒತ್ತಡ ೧೭೮; ಪರವಶತೆ ೪೯೩

**ಭವ** ಜನ್ಮ ಜನ್ಮಾಂತರವನ್ನು ಹೊಂದುವುದು; ಸತ್ತು ಸತ್ತು ಹುಟ್ಟುವುದು ೨,೫೭೪

**ಭವಭಾರಿ** ಜನ್ಮ ಜನ್ಮಗಳಲ್ಲಿ ಸುತ್ತುವವ ೨೨೦

**ಭವರಾಟಾಳ** ಭವಚಕ್ರ ಭವಭವದಲ್ಲಿ ಮತ್ತೆ ಮತ್ತೆ ಸತ್ತು ಹುಟ್ಟುವುದು ೬೮

**ಭಾಜನ** ಅಡಿಗೆ ಮಾಡುವ ಪಾತ್ರೆ ೧೦೫; ೮೬೦; ಪಾತ್ರ; ಯೋಗ್ಯ ೬೩೯

**ಭಾಂಡ** ಸರಕು; ಪಾತ್ರೆ ೧೦೪,೮೬೦

**ಭಾರಿ** ಒತ್ತಡ, ಪ್ರಾಬಲ್ಯ ೨೭೪

**ಭಾವ** (೧) ನಿಜಜ, ನಿಶ್ಚಿತಿ; (೨) ಅಕ್ಕನ ಗಂಡ ೯೧೭

**ಭಾಷಾಪತ್ರ** ಕೊಟ್ಟ ಮಾತನ್ನು ನಡೆಸುವೆನೆಂದು ಬರೆದುಕೊಟ್ಟ ಪತ್ರ ೬೪೯

**ಭಿನ್ನ** ಕೊರತೆ, ಕುಂದು ೧೦೫

**ಭುಕ್ತಿ** ಭೋಗ ೬೨೮

**ಭೂತಿಗ** ಭೂತಹಿಡಿದವ ೯೧೦

**ಭೃತ್ಯಾಚಾರ** ಸೇವಾಭಾವ (ವೀರಶೈವರ ಪಂಚ ಆಚಾರಗಳಲ್ಲಿ ಒಂದು) ೨೪೫

**ಮಚ್ಚರ** (ಸಂ: ಮತ್ಸರ) ಹೊಟ್ಟೆಕಿಚ್ಚು ೩೮೯

**ಮಚ್ಚು** ಮೆಚ್ಚು, ಒಪ್ಪು ೩೮

**ಮಂಜರ** (ಸಂ: ಮಾರ್ಜಾಲ) ಬೆಕ್ಕು ೧೬೩

**ಮಟ್ಟಿ** (ಬ್ರಾಹ್ಮಣರು ನಾಮ ಹಚ್ಚಿಕೊಳ್ಳುವ) ಒಂದು ಬಗೆಯ ಮಣ್ಣು ೫೭೮

**ಮಡಗು** ಇರಿಸು, ಇಡು ೨೦೧

**ಮಡಿಲು** ಉಡಿ ೬೪೯

**ಮಡುಹು** ಕೊಲ್ಲು ೬೨೪

**ಮಣಿ** ರುದ್ರಾಕ್ಷಿ; ಜಪಮಣಿ ೪೭೫

**ಮಣಿಹ** ಮಾಡಬೇಕಾದ ಕಾರ್ಯ

**ಮಂಡೆ** ತಲೆ ೪೯೮

**ಮತ್ತರ** ಭೂಮಿಯನ್ನು ಅಳೆಯುವ ಒಂದು ಅಳತೆ ೨೨೫

**ಮದವಳಿಗೆ** (೧) ಮದುವಣಗಿತ್ತಿ, ವಧು; (೨) ಮದವಣಿಯಲಿ ೮೬೭

**ಮದ್ದು** ಔಷಧ ೬೩೬

**ಮನ** (೧) ಮನಸ್ಸು (೨) (=ಮಾನ) ಅಳತೆ ೭೨೫

**ಮನೆವಾರ್ತೆ** ಕುಟುಂಬವನ್ನು ನಡೆಸಿಕೊಂಡು ಹೋಗುವ ರೀತಿ ೯೧೧

**ಮಂದಿ** (೧) ಜನಸಮೂಹ (೨) ಸಮೂಹ ಸೇರುವ ಸ್ಥಳ ೧೬೪

**ಮರುಳು** ಹುಚ್ಚು, ತಿಳಿಗೇಡಿ; [illegible] ದೆವ್ವ, ಭೂತ ೫೭೯

**ಮರೆ** ಆಶ್ರಯ ೯೨

**ಮಸಕು** ಲೇಪ; ಕಪ್ಪು ಬಣ್ಣ ೨೮೯

**ಮಸಣಿ** ದುರ್ಗಾದೇವಿಯ ಒಂದು ರೂಪ ೧೦೪

**ಮಹಾನುಭಾವ** (೧) ಸದ್ಗುಣವುಳ್ಳವ (೨) ಶ್ರೇಷ್ಠ ಆತ್ಮಾನುಭಾವವುಳ್ಳವ ೮೮೧

**ಮಾಗುಡ** (=ಮಹಾಕೂಟ?) ದೊಡ್ಡ ತೀರ್ಥ ೬೪೫

**ಮಾಟ** ಕರ್ಮ; ಸೇವೆ; ದಾನ ೧೭೬,೪೨೫,೮೬೩

**ಮಾಡು** ದಾಸೋಹ, ಇಲ್ಲವೆ ದಾನ,

ಅಥವಾ ಕರ್ಮವನ್ನು ಮಾಡು ೨೨೬,೭೦೪

**ಮಾಣದೆ** ಬಿಡದೆ, ಒಂದೇಸವನೆ ೩೫೮,೫೮೦

**ಮಾಣಿ(ಂ)** ಬಿಡಿರಿ ೬೦೩

**ಮಾತಂಗಿ** ಚಾಂಡಾಲಿತಿ ೫೯೦

**ಮಾತು** (೧) ನುಡಿ, ವಚನ, ಹೇಳಿಕೆ (೨) ವೇದಾದಿ ಶ್ರುತಿಗಳು ೧೫೩

**ಮಾತಿನ ಮಾತು** ವೇದ ವಚನ ೫೭೪

**ಮಾನ** ಅಳತೆ, ಪ್ರಮಾಣ ೪೯೪; ಸಿಟ್ಟು, ಮದ (ಇತ್ಯಾದಿ) ೮೬೭

**ಮಾನಿಸ** ಮನುಷ್ಯ ೧೧೦

**ಮಾನಿಸಗಳ್ಳಿ** ಪುರುಷರನ್ನು ವಂಚಿಸುವವಳು ೧೧೦

**ಮಾಱಂಕ** ಪ್ರತಿಭಟ, ವೈರಿ, ಇದಿರಾಳು ೧೭೮,೭೨೫

**ಮಾಱು** ಇದಿರು, ಪ್ರತಿಯಾಗಿ ೪೬೭

**ಮಾಱುಗೋಲು** ವೈರಿಯ ಬಾಣಕ್ಕೆ ಪ್ರತಿಯಾಗಿ ಬಿಡುವ ಬಾಣ ೭೦೨

**ಮಾಳ** (=ಮಹಳ) ಶ್ರಾದ್ಧ ೨೯೬

**ಮಿಂಟೆ** (=ಮಿಟ್ಟೆ) ರಾಶಿ, ಗುಡ್ಡೆ ಮರಡಿ ೧೯೪

**ಮಿಡಿ** ಹಿಮ್ಮಡ ೫೦೩

**ಮಿಡುಕು** ಅಲುಗಿಸು, ಬಿಚ್ಚು ೮೧೪

**ಮಿಡುಕುಱು** ಬೆಂಕಿಯಕಿಡಿ ೨೧೩

**ಮಿತ್ಯ** (=ಮಿಥ್ಯೆ) ಸುಳ್ಳು ೨೩೯

**ಮಿಹಿಲಾಳು** ಕಿರಿಯ, ಕ್ಷುಲ್ಲಕ (?) ೩೨೭

**ಮೀ(ಯು)** ಸ್ನಾನಮಾಡು ೬೪೪

**ಮೀಂಬುಲಿಗ** ಮೀನಗಳನ್ನು ತಿನ್ನುವ ಹಕ್ಕಿ ೫೭೮

**ಮೀಸಲು** ವಿಶಿಷ್ಟ ಉದ್ದೇಶಕ್ಕಾಗಿ ಕಾಯ್ದಿರಿಸಿದ; ಶುದ್ಧತೆಯನ್ನು ಕೆಡಿಸದೇ ಇದ್ದ ೯೨,೬೬೯,೮೮೪

**ಮುಕುಳಿತ** (ಕಣ್ಣು, ಇಲ್ಲವೆ ಕೈಗಳನ್ನು) ಅರೆಮುಚ್ಚಿದ ೫೩೯

**ಮುಕ್ಕು** ಊನವಾದುದು, ಒಡೆದುದು ೪೧೬

**ಮುಟ್ಟಲಿಕೆ** ಮುಟ್ಟಲಾಗಿ ೭೩

**ಮುಟ್ಟು** (ರತಿಕ್ರೀಯೆಯಲ್ಲಿ) ಕೂಡು ೭೦೬,೮೯೭

**ಮುಡುಹು** ಹೆಗಲು ೫೦೧,೫೭೦

**ಮುಡುಹಿಂಕ್ಕು** (=ಮುಡಿಗಿಕ್ಕು) ಮೂದಲಿಸು, ಕೆಣಕು ೪೪೭

**ಮುಂಡಿಗೆ** ವಿಚಾರ ಮಾಡತಕ್ಕ ವಿಷಯ, ಸಮಸ್ಯೆ, ಒಗಟು ೭೪೬

**ಮುಂದುಗೇಡು** ಮುಂದೇನು ಮಾಡಬೇಕೆಂಬುದು ತಿಳಿಯದೆ ಮೂಢನಾಗು ೨೦

**ಮುಂಬಲ್ಲು** ಮುಂದಿನ ಹಲ್ಲು ೪೯೮

**ಮು(ಯ್)ಯಿ** (೧) ಆನಂದದ ಸಮಾರಂಭಗಳಲ್ಲಿ ಕೊಡುವ ಪಾರಿತೋಷಕ (೨) ಕಡ ೮೮೭

**ಮುಯ್ಯಾನು** ಭುಜಕ್ಕೆ ಭುಜ ಹಚ್ಚು; ಸರಿಗಟ್ಟು, ಸರಸವಾಡು ಸಲುಗೆ ತೋರಿಸು ೧೪೮

**ಮುರುಟು** ಮುದುಡು, ಬಾಡು ೫೫೮

**ಮುಳಿಸು** ಸಿಟ್ಟು, ಮುನಿಸು ೨೫೫

**ಮೂಕೊಱೆಯ** ಮೂಗಿಲ್ಲದವ, ಮೂಗು ಕೊಯಿಸಿಕೊಂಡವ ೧೦೫

**ಮೂಕೊಱತಿ** ಮೂಗಿಲ್ಲದವಳು ೧೦೫

**ಮೂಗ** (ಸಂ:) ಮೂಕ ೨೯೪

**ಮೂಗುವಡು** ಮೂಕನಾಗು, ಮಾತಾಡದಂತಾಗು ೭೪೯

**ಮೂದಲಿಸು** ಕೆಣಕು; ಹೀಯಾಳಿಸು, ಸ್ಪರ್ಧಿಸು; ಜಗಳಕ್ಕೆ ಕರೆ ೧೬

**ಮೂದಲೆ** ಸ್ಪರ್ಧೆಯಮಾತು ೫೩೮

**ಮೂಲಿಗ** (ವ.ನೆತನದ) ಮೂಲ ಪುರುಷ ೩೪೭

**ಮೆಱೆ** ಮೆರೆಸು; ಬಣ್ಣಿಸು ೮೧

**ಮೇಂ** ತಿನ್ನು ೧೨೬

**ಮೇದಿನಿ** ಪೃಥ್ವಿ, ಜಗತ್ತು ೫೩೫

**ಮೇರೆ** ಸೀಮೆ, ಎಲ್ಲೆ ೪೪೭

**ಮೇಳ** ಸಂದಣಿ, ಸಮೂಹ ೪೬೧

**ಮೇಳಾಪ** ಸಂದಣಿ, ನೆರವಿ; ಸಭೆ ೧೧೭,೬೯೯

**ಮೈದೆಗೆ** ಒಳಮೈಕಾಣು; ಬರಿದಾಗು ೮೬೧

**ಮೈಲಾರ** ಒಳಗೆ ಸಣಬು ಮೇಲೆ ಬಣ್ಣವಿದ್ದ ಮೈಲಾರ ದೇವರ ಮೂರ್ತಿ ೨೮೦

**ಮೊನೆ** ತುದಿ, ಕೊನೆ ೪೪೬; ಯುದ್ಧ ೬೬೯

**ಮೊಱೆ** ಆಶ್ರಯ, ಆಧಾರ; ಮರೆ ೫೦೪, ೯೧೨

**ಮೊಱೆಯಿಡು** (ಹೆರವರಲ್ಲಿ) ದುಃಖವನ್ನು ತೋಡಿಕೊಳ್ಳು ೫೫೦

**ಮೋಟ** ಕೈಕಾಲಿಲ್ಲದವ ೩೩೦

**ಮೋಹಿಸು** ಬಡಿದಾಡು, ತಾಕಲಾಡು ೬೬೭

**ಮೌಳಿ** ತಲೆ, ಕಿರೀಟ; ತಲೆಯ ಶೃಂಗಾರ ೩೩೦

**ಯುಕ್ತಿ** ಕ್ರಮ, ಒಳ್ಳೆಯಮಾರ್ಗ; ಯೋಗ್ಯತೆ ೯೧,೫೧೬

**ಯೋನಿ** ಜನ್ಮಸ್ಥಾನ ೧೭,೪೯

**ರಚ್ಚೆ** ಪ್ರಕಟಿತವಾದುದು, ಗುಟ್ಟು ರಟ್ಟಾದದು ೮೨೫

**ರಜ** ಧೂಳು, ಹುಡಿ ೯೭

**ರಂಜಕ** ಮನರಂಜನೆ ಮಾಡುವವ ೬೩೮

**ರಂಜನೆ** ಅಲಂಕಾರ ೯೩

**ರಸ** (೧) ಅಮೃತ; (೨) ಸಸ್ಯಾದಿಗಳಲ್ಲಿರುವ ಇರ್ಪು ೧; (೩) ಶೃಂಗಾರ ೭೯೧

**ರಾಗರಂಜಿತ** ಪ್ರೀತಿಯ ವ್ಯಾಮೋಹ ಅಥವಾ ಬಂಧನ ೪೮೯

**ರಾಟಿಕ** ರಾಶಿ ೯೮

**ರಾಹುಣಿಪಾಖ** ಅಡಸೋಗಿ ಎಳಿ ೫೮೪

**ರಾವುತ** ಕುದುರೆಯ ಸೈನಿಕ ೧೬

**ರುಚಿ** (೧) ಕಿರಣ (೨) ಲವಣಾದಿ ಷಡ್ರುಚಿಗಳು ೧

**ರೂಹು** (ಸಂ: ರೂಪ) ಆಕಾರ, ಮೂರ್ತಿ ೧೬

**ಲಗ್ನ** ಒಳ್ಳೆಯ ಕಾಲ; ಶುಭ ಮುಹೂರ್ತ ೮೭೧

**ಲಂಪಟತನ** ವ್ಯಾಮೋಹಗುಣ ೨೧೭

**ಲಾಂಛನ** ಚಿಹ್ನೆ (ಇಲ್ಲಿ ಜಂಗಮ) ೧೭೨; ಲಕ್ಷಣ ೬೫೪,೭೫೭

**ಲಿಂಗವೇದಿ** ಲಿಂಗದ ಮರ್ಮವನ್ನು ತಿಳಿದವನು ೧೨೫

**ಲಿಂಗಸಾರಾಯ** ಲಿಂಗದ ಸಾರವನ್ನು ತಿಳಿದುಕೊಂಡವನು ೮೪೩

**ಲೀಯ** ಸೇರಿದ, ಜೊತೆ ಕೂಡಿ ಹೋದ ೪೫೮,೮೧೯

**ಲೆಂಕ** ದಾಸ, ಸೇವಕ ೪೪೧

**ಲೆಂಗಿ** ದಾಸ, ದಾಸಿ, (ನೋ: ಲೆಂಕ) ೬೬೦

**ಲೇಸು** ಒಳ್ಳೆಯದು, ಹೆಚ್ಚಿನದು; ಪ್ರಶಸ್ತವಾದುದು ೨೩

**ಲೋಗರು** ಲೋಕದ ಜನರು, ಸಾಮಾನ್ಯ ಜನರು ೫೫೫

**ಲೌಕಿಕ** ಧಾರ್ಮಿಕ ಭಾವನೆಯಿಲ್ಲದ ೨೮೬; ಸಾಮಾನ್ಯ, ಕ್ಷುಲ್ಲಕ ೬೧೦

**ವಚನಪಾತಕ** ಮಾತಿನ ದೋಷ; ಮಾತಿನಲ್ಲಿ ಕಾಣುವ ಪಾತಕ

**ವಜ್ರ** ಇಂದ್ರನ ಆಯುಧ ೬,೫೫೨

**ವರ** (೧) ಅನುಗ್ರಹ; ಅಭೀಷ್ಟವನ್ನು ಕೊಡುವ ಶಕ್ತಿ; (೨) ಶ್ರೇಷ್ಠ ೫೬೪

**ವರ್ತಮಾನ** ಈಗಿನ ಕಾಲ; ನಡೆಯುವ ಕಾಲ ೫೧೧

**ವರ್ತಿಸು** ತೊಡಗಿರು ೨೮೯; ಅಂಟಿಕೊಳ್ಳು ೫೧೨

**ವರ್ಮ** (ಸಂ: ಮರ್ಮ) ಗುಟ್ಟು ೧೯೨

**ವಶ್ಯ** ಜನರನ್ನು ವಶಮಾಡಿಕೊಳ್ಳುವ ವಿದ್ಯೆ ೭೮

**ವಾಮ** ಕೇಡು, ಹಾನಿ ೬೦

**ವಾಯ** (ಸಂ: ಮಾಯ?) ಮಾಯೆ; ಮೋಸ, ಸುಳ್ಳು ೫೫೨,೫೫೬

**ವಾರಿಕಲ್ಲು** ಆನೆಕಲ್ಲು, ಮಂಜಗಡ್ಡೆ

**ವಾರುಧಿ** (ಸ: ವಾರ್ಧಿ) ಸಮುದ್ರ ೭೯೧

**ವಾಸಿಸು** ವಾಸನೆಯನ್ನು ಅರ್ಪಿಸು ೪೨೯

**ವಿಕಲ್ಪ** ಸಂದೇಹ, ತಪ್ಪು ತಿಳಿವಳಿಕೆ ೮೭೦

**ವಿಕಟ** ಕಳೆಗುಂದಿದ, ಜರ್ಜರಿತವಾದ ೪೭
**ವಿಕೃತಿ** ವ್ಯಾಕೃತಿ ರೂಪು ೫೧೬
**ವಿಕಾರ** ಅಸ್ವಾಭಾವ; ಅಯೋಗ್ಯ ಕೃತ್ಯ ೭೩೯
**ವಿಕಾರಿ** ದುಷ್ಟ [illegible] ೭೯೫
**ವಿಗರ್ಹಣೆ** ಜರೆಯಿಕೆ ೬೮೯
**ವಿಧಾನಿಸು** ಶಾಸ್ತ್ರೋಕ್ತವಾಗಿ ಕರ್ಮ ಮಾಡು ೫೭೩
**ವಿನಿಯೋಗ** ಬಳಕೆ, ಉಪಯೋಗ ೮೧೭
**ವಿಭವ** ವೈಭವ, ಸಂಪತ್ತು ೨೨೭
**ವಿಭೋಗ** ಸುಖಾನುಭವ ೧೨
**ವಿಯತ್** ಆಕಾಶ ೯೧೫
**ವಿರಂಚಿ** ಬ್ರಹ್ಮ ೨
**ವಿರಸ** ರಸವಿಲ್ಲದ್ದು; ಕೆಡಕು ಪರಿಣಾಮವನ್ನು ಉಂಟುಮಾಡುವಂತಹದು ೬೬೧
**ವಿರಹಿತ** ಇಲ್ಲದೆ ೧೯೮
**ವಿಷಯ** ಇಂದ್ರಿಯ ಸುಖದ ವ್ಯಸನ, ೨೦; ಸಂಸಾರದ ಆಸೆ ೫೯೧
**ವಿಷ್ಟಿಸು** ಮಲವಿಸರ್ಜನೆ ಮಾಡು ೩೬೧
**ವೃಥಾ(ಯ)** ವ್ಯರ್ಥವಾಗಿ, ನಿರರ್ಥಕವಾಗಿ ೭೧೫
**ವೆಗ್ಗಳ** ಅಧಿಕ; ಶ್ರೇಷ್ಠ ೬೧೧
**ವೇದ್ಯ** ತಿಳಿದ ೮೮೨
**ವೇದ್ಯವಾಗು** ಗೊತ್ತಾಗು, ತಿಳಿದುಬರು ೪೭
**ವೇಧೆ** (ಸಂ: ವೇಧ) ಹಿಂಸೆ, ನೋವು ೨೦೮
**ವೇಸರ** ಹೇಸರಗತ್ತೆ ೬೧೬
**ವೇಳೆವಾಳಿಯವನ** ಸಮಯ ಪಾಲನೆ ಮಾಡುವವನ ೬೯೮
**ವೈತರಣಿ** ನರಕದಲ್ಲಿಯ ನದಿ ೬೭೦
**ವೈಶಿಕ** ವೇಶ್ಯೆಯ ಬೆಡಗು; ಆಕರ್ಷಣೆ, ಸಮ್ಮೋಹನ ಶಕ್ತಿ ೬೧
**ವ್ಯತೀಪಾತ** ಸೂರ್ಯಚಂದ್ರರ ದುಷ್ಟಯೋಗ ೬೧೧
**ವ್ಯಾಧ** ಬೇಡರವ ೧೫೮
**ವ್ಯಾಪ್ತಿ** ಉದ್ಯೋಗ ೬೫೧
**ವ್ಯಾಳೇಶ** ಸರ್ಪಗಳ ಒಡೆಯ ೩೨೯
**ವ್ಯೋಮ** ಆಕಾಶ ೯೫೩
**ಶಕುನ** ಶುಭ-ಅಶುಭಗಳನ್ನು ಸೂಚಿಸುವಂತಹದು ೧೦೫
**ಶಬ್ದಕ್ರಿ** (೧) ಮಾತಿನಲ್ಲಿಯೆ ಉಳಿಯುವ ಕ್ರಿಯೆ; (೨) ವೇದಗಳಲ್ಲಿ ಹೇಳಿದ ಕರ್ಮ ೫೫೨
**ಶಿಖಿ** ತಲೆ, ಜುಟ್ಟು; ಮುಕುಟ ೯೩೬
**ಶಿವಂಟಿ** ವಿಭೂತಿ ೯೦೦
**ಶಿವದಾನ** ಮಜ್ಜಿಗೆ; (ಶಿವನ ಹೆಸರಿನಲ್ಲಿ ನೀಡುವ ದಾನ) ೩೪೩
**ಶಿವರಸ** ಮಜ್ಜಿಗೆ ೨೭

**ಶಿವಘೋ** ಶಿವನ ಹೆಸರಿನಲ್ಲಿ ಮೊರೆಯಿಡುವುದು; 'ಶಿವದಿಡುವುದು' ೧೨.
**ಶು(ಕ್ಲ)ಕ್ರ** ವೀರ್ಯ; ರೇತಸ್ಸು ೧೪೫
**ಶೋಣಿತ** ರಕ್ತ ೧೫೦
**ಶ್ರವ** (ಸಂ: ಶ್ರಮ) (ಗರುಡಿಯ) ಸಾಧನ ೭೦೨
**ಶ್ರೋತ್ರಸುಖ** ಬರಿಯ ಕಿವಿಯಿಂದ ಕೇಳಿ ಉಂಟಾಗುವ ಆನಂದ ೧೧೮
**ಶ್ವಪಚ** ಚಾಂಡಾಲ ೮೧,೬೦೭
**ಷಡುದರುಶನ** ಹಿಂದುಗಳ ತತ್ವಜ್ಞಾನದ ಆರು ಶಾಖೆಗಳು ೧೬೨, ೮೧೭
**ಷಡುಸಮ್ಮಾರ್ಜನೆ** (ಉತ್ಸವಾದಿಗಳಲ್ಲಿ ಕೈಕೊಳ್ಳುವ) ಆರು ಬಗೆಯ ಸಾರಣೆ ೩೭೬
**ಷೋಡಶೋಪಚಾರ** ಅಥಿತಿ-ಅಭ್ಯಾಗತರನ್ನು ಆಸನ, ಪಾದ್ಯ, ಸ್ವಾಗತ ಇತ್ಯಾದಿ ೧೬ ವಿಧವಾಗಿ ಉಪಚಾರ ಮಾಡುವುದು ೫೦೮
**ಸಕಲ** ಭಾಗಗಳನ್ನು ಒಳಕೊಂಡುದು; ಪೂರ್ಣವಾದುದು; ಇಡಿಯದು ೫೩೩
**ಸಕೃತು** ಸದ್ಯಕ್ಕೆ, ಕೂಡಲೆ ೬೯
**ಸಗಣ** ಸಗಣಿ, ಗೋಮಯ ೧೫೬
**ಸಂಚ** ಸಂದು, ಹಿಡಿತ ೬೩೬
**ಸಂಚು** ಕಪಟ, ಮೋಸ ೫೧೮
**ಸಂಕಲ್ಪ** ಮನಸ್ಸಿನಲ್ಲಿಯ ಉದ್ದೇಶ, ಆಸೆ ೮೬೦
**ಸಜ್ಜನ** ಒಳ್ಳೆಯತನ ೨೮೨
**ಸಜ್ಜನೆ** ಪತಿವ್ರತೆ ೬೯೭
**ಸಜ್ಜನಿಗೆ** ಒಳ್ಳೆಯತನ ೬೭೩
**ಸಂಚಿತಕರ್ಮ** ಹಿಂದಣ ಜನ್ಮಗಳಲ್ಲಿ ಕೂಡಿದ ಕರ್ಮಫಲ ೭೭೩
**ಸಟೆ** (=ಸಂ: ಶಠ) ಸುಳ್ಳು ೬೧
**ಸಟ್ಟುಗ** ಸವುಟು ೮೫೧
**ಸಡಗರ** ಸಂಭ್ರಮ, ವೈಭವ ೫೬೯
**ಸದಾಚಾರ** ಒಳ್ಳೆಯ ನಡೆದೆ (ವೀರಶೈವರ ಪಂಚ ಆಚಾರಗಳಲ್ಲಿ ಒಂದು ೨೪೬
**ಸದಾಶಿವ** (೧) ಯಾವಾಗಲು ಒಳ್ಳೆಯದನ್ನು ಮಾಡುವವನು (೨) ಶಿವಪರಮಾತ್ಮ ೬೬೦
**ಸಂತ** ಶಾಂತ ೧೦೦
**ಸನ್ನಿ** (=ಸಲ್ಲಿರಿ) ಸರಿಯಿರಿ ೪೧೩
**ಸನ್ನಿಹಿತ** ಸಮೀಪದಲ್ಲಿರುವವನು; ಹೊಂದಿಕೊಂಡಿರುವನು; ನೆಲಸಿರುವವನು ೧೮೭
**ಸಮಗ್ರಾಹಕ** ಹಿರಿದು-ಕಿರಿದುಗಳನ್ನು ಸಮವೆಂದು ಭಾವಿಸುವವ ೭೩೯
**ಸಮಚಿತ್ತ** ವಿಕಾರವಿಲ್ಲದ ಮನಸ್ಸು ೭೨೫
**ಸಮನಿಸು** ಸರಿಕಾಣು, ಸರಿಹೋಗು; ಒಪ್ಪು ಅಳವಡು ೪೫೩

**ಸಮಯ** ಧರ್ಮ, ಪಂಥ, ಮತ ೭೧೨

**ಸಮಯಾಚಾರ** ಒಂದು ಧರ್ಮ ಅಥವಾ ಮತಕ್ಕೆ ತಕ್ಕ ಆಚಾರ ೧೯೨,೨೧೭

**ಸಮಯಾಚಾರಿ** ಒಂದು ಧರ್ಮದ ಆಚಾರ ಮುಂತಾದ ಕಟ್ಟುಗಳನ್ನು ವಿಧಿಸುವವ; ಆಚಾರ್ಯ ಪುರುಷ ೩೮೫

**ಸಪ್ತಧಾತು** ರಕ್ತ, ಮಾಂಸ, ರೇತಸ್ಸು ಇತ್ಯಾದಿ ಏಳು ಬಗೆಯ ಧಾತುಗಳು; (ಇಲ್ಲಿ) ದೇಹವಿಕಾರ ೪೭

**ಸಮವೇದಿಸು** ಸರಿಯಾಗಿ ತಿಳಿ ೮೪೫

**ಸಮೀರಣ** ವಾಯು, ಗಾಳಿ ೯೪೯

**ಸಂಪಾದಿಸು** ಸರಿಹೆಚ್ಚು ೨೭

**ಸಂಪುಟ** ಕರಡಿಗೆ, ಸಂದುಕ ೧೮

**ಸಂಭೋಳಿ** ಎಚ್ಚರಿಕೆಯಿಂದಿರು, 'ಸಂಭಾಳಿಸು' ೯೩೧

**ಸಯ** (ಸಂ: ಸ್ವಯ) ತನ್ನದು ೨೮೮

**ಸರವಿ** ಹಗ್ಗ; ರಜ್ಜು ೩೫೪

**ಸರಸ** ವಿನೋದ, ಚಲ್ಲಾಟ ೭೪೨

**ಸರಿಸ** ಸಮಾನತೆ, ಸರಳತೆ; ಸರಿಯಾದ ಲೆಕ್ಕ ೪೯೪,೭೨೪

**ಸಲಿಸು** ನಿವೇದಿಸು, ಕೊಡು ೭೪೯

**ಸಲು** (ನಾಣ್ಯದಂತೆ) ನಡೆ, ಪ್ರಚಾರವಾಗು ೧೫೮

**ಸಲೆ** ಚೆನ್ನಾಗಿ; ಪೂರ್ಣವಾಗಿ ೧೫೮

**ಸಲ್ಲು** ಯೋಗ್ಯವಾಗು, ಸಮ್ಮತವಾಗು, ಪ್ರಚಾರವಾಗು ೧೫೫; ೭೦೪

**ಸವಣ** (ಸಂ: ಶ್ರಮಣ) ಬೌದ್ಧ ಅಥವಾ ಜೈನ ಭಿಕ್ಷುಕ, ಸನ್ಯಾಸಿ ೧೦೩

**ಸವತಿ** (೧) ಸವತಿಯ ಕಾಯಿ; (೨) ಸಪತ್ನಿ ೩೮೯

**ಸವಿಸು** ಉಣಿಸು ೧೯೯

**ಸವೆ** ಆರೆಯಾಗು, ವೆಚ್ಚವಾಗು ೧೫೦

**ಸವೆಸು** ವೆಚ್ಚಮಾಡು ೧೫೩

**ಸಸಿ** (೧) (ಸಂ: ಶಶಿನ್) ಚಂದ್ರ; (೨) (ಸಂ: ಸಸ್ಯ) ಕಾಯಿಪಲ್ಲೆಯ ಗಿಡು ೧

**ಸಸಿನ** ಯೋಗ್ಯ, ಸರಿ ೧೪೪

**ಸಾಮೀಪ್ಯ** ದೇವರ ಸಮೀಪದಲ್ಲಿರುವುದು ೪೭೪

**ಸಾಯುಜ್ಯ** ದೇವರಲ್ಲಿ ಕೂಡಿಕೊಳ್ಳುವುದು ೪೭೪

**ಸಾರ** ಸಮೀಪಕ್ಕೆ ಹೋಗು ೧೧೯ ೧೩೬

**ಸಾ(ರ್)ರು** ಹೊಂದು, ಸೇರು ೧೫೧

**ಸಾರಾಯ** ನಿಜತತ್ತ್ವ; ಸಾರ ೪೮೫

**ಸಾಲಿಡ್ಡ** ಪತ್ತ್ರದಲ್ಲಿದ್ದ ೪೭೪

**ಸಾಲಿಗ** ನೇಕಾರ ೫೯೧

**ಸಾಹಿತ್ಯ** ಸಹಿತವಾಗಿರುವಿಕೆ; ಕೂಡಿಕೊಂಡಿರುವಿಕೆ ೭೧೩

**ಸಿಕ್ಕು** (ಹ: ಸಿಲ್ಕು) ಕೂದಲು ಗಂಟಾಗುವುದು; ತೊಡಕು ೬೬೧
**ಸಿಂಗಿ** (ಸಂ: ಶೃಂಗಿ) ಒಂದು ಬಗೆಯ ಘೋರ ವಿಷ ೧೧೯, ೭೭೧
**ಸಿತಗ** ಕೆಡುಕ, ಮೋಸಗಾರ ೬೪೨
**ಸಿದ್ದಿಗೆ** ಶವವನ್ನು ಒಯ್ಯುವ ಸಿದಿಗೆ ೫೯೭
**ಸಿನೆ** (ಸಂ: ಶೂನ್ಯ?) ಹಾಳಾದ, ಕೆಟ್ಟ ೭೩, ೯೧೪
**ಸಿಂಬಕ** ತೊತ್ತು (?) ೨೫೩, ೪೨೬
**ಸಿಂಬೆ** ಭಾರವನ್ನು ಹೊರುವಾಗ ತಲೆಯ ಮೇಲೆ ಇಟ್ಟುಕೊಳ್ಳುವ ಬಟ್ಟೆಯ ಸುರುಳಿ ೩೫೪
**ಸಿರಿಗರ** ಶ್ರೀಮಂತಿಗೆ ಎಂಬ ಭೂತ ೧೩೨
**ಸೀಮೆ** ಮೇರೆ, ಗಡಿ ೨೬೭
**ಸೀ(ಯು)** ಸುಡು ೯೩೦
**ಸೀರೆ** (ಸಂ: ಚೀರ) ಉಡುವ ಬಟ್ಟೆ ೩೪, ೪೩೫
**ಸುಂಕ** ಸರಕುಗಳ ಮೇಲೆ ಸರಕಾರಕ್ಕೆ ಕೊಡುವ ತೆರಿಗೆ ೧೯೮
**ಸುಚಿತ್ತ** ಸುಪ್ರಸನ್ನವಾದ ಮನಸ್ಸಿನ ಸ್ಥಿತಿ ೪೭೬
**ಸುಪಥ** ಒಳ್ಳೆಯ ಮಾರ್ಗ ೯[illegible]
**ಸುಮ್ಮಾನ** ಸಮ್ಮನಿರುವಿಕೆ ೨೪೫
**[ಸು]ಸಯಿ [ದಾ]ಧಾನ** ವ್ಯವಸ್ಥೆ, ಯೋಜನೆ, ಸಜ್ಜುಮಾಡುವಿಕೆ; ಎಚ್ಚರಿಕೆ ೧೦೨, ೭೮೨
**ಸುಯಿಧಾನಿ** ಎಚ್ಚರಿಕೆಯುಳ್ಳವ ೮೮೬
**ಸುರಗಿ** ಸಣ್ಣ ಕತ್ತಿ ೭೪೭
**ಸುರಿಗೆ** (ಸಂ: ಛುರಿಕಾ) ಕಿರುಗತ್ತಿ ಕಠಾರಿ ೭೨೪
**ಸುರೆ** ಮದ್ಯ, ಹೆಂಡ, ಸರೆ ೯೦
**ಸುಲಿ** ಸೆಳೆದುಕೊಳ್ಳು; ಕಿತ್ತುಕೊಳ್ಳು ೧೧೧
**ಸುಷುಪ್ತಿ** ಪೂರ್ಣನಿದ್ರಾವಸ್ಥೆ ೬೯೨
**ಸುಳಿ** (೧) ಸಮೀಪಕ್ಕೆ ಬರು, ಆವರಿಸು (೨) ಸುತ್ತು; ಸುತ್ತಾಡು ೪೮
**ಸುಳಿಡೆಗೆ** ಜೆಳೆ: ಎಳೆಗಳನ್ನು ಪಸರಿಸು ೫೦
**ಸುಳುಹು** ದಂಡೆಗೆ ಉರುಳುವ ತೆರೆ ೪೮
**ಸೂಕರ** ಹಂದಿ ೩೨೯
**ಸೂತಕ** ಜಾತಿ, ಜನನ, ಮರಣ, ರಜಸ್ಸು, ಉಚ್ಚಿಷ್ಟ ಎಂಬ ಪಂಚ ಸೂತಕಗಳು; ಹೊಲೆ, ಮುಟ್ಟು ೩೭೬, ೭೮೦
**ಸೂನೆಗಾರ** ಪ್ರಾಣಿಗಳನ್ನು ಕೊಲ್ಲುವವ, ಕಟಿಕ ೮೩, ೫೬೮
**ಸೂಲ** (ಸಂ: ಶೂಲ) ಹದನವಾದ ಮೊನೆಯುಳ್ಳ ಕಬ್ಬಿಣದ ಸಲಾಕೆ
**ಸೆಱಗೊಡ್ಡು** ಭಿಕ್ಷೆಗಾಗಿ ಸೆರಗ ಒಡ್ಡು ೩೪

**ಸೆಳೆಮಂಚ** ತೂಗುಮಂಚ ೯೮

**ಸೊಡರು** ದೀಪ ೧೬೪

**ಸೊಣ[ಗ]ಕ** (ಸಂ: ಶುನಕ) ನಾಯಿ ೩೪,೫೯೭

**ಸೊಬಗು** (ಸಂ: ಸುಭಗ) ಅಂದ; ಅಲಂಕಾರ ೩೦೪

**ಸೊಪ್ಪು** ಸ್ವಂತದ ಆಸ್ತಿ, 'ಸೊತ್ತು' ೨೧೩,೮೬೮

**ಸೊಲ್ಲು** ಮಾತು ೧೮೦

**ಸೊ(ೞ)ಂಕು** ತಾಗು, ಮುಟ್ಟು, ಒಡಿ ೧೧೭

**ಸೋಜಿಗ** ಆಶ್ಚರ್ಯ, ಅರಿದು ೩೬೭

**ಸೊ(ೞ)ರೆ** ಹಾಲುಗುಂಬಳ (ಕಾಯಿ) ೭೩,೫೦೦

**ಸೋಹ(ಂ)** ನಾನೇ (ಆತನು ಎಂದರೆ) ದೇವರು ಎಂಬ ಭಾವ ೪೭೩

**ಸೋಹೆ** ಗುರುತು, ಚಿಹ್ನ, ಲಾಂಛನ ೭೭೮

**ಸ್ಥಾನನಿಧಿ** ........? ೮೫೩

**ಸ್ಥಾವರ** ಒಂದೆ ಕಡೆ ಇರುವಂತ ಹದು; ಚಲಿಸದಿರುವುದು ೮೨೦

**ಸ್ವಯಂಭು** ತನ್ನಿಂದ ತಾನೆ ಹುಟ್ಟಿದ, ಜನಕ ಅಥವಾ ಕರ್ತೃಯಿಲ್ಲದ ೫೩೧

**ಸ್ವಾಯತ** (೧) ಸ್ವಾಯತ್ತವಾದ, ತನ್ನಲ್ಲಿ ಅಳವಟ್ಟ; (೨) ವೀರಶೈವರಲ್ಲಿ ಗುರುವು ಭಕ್ತನಿಗೆ ಪ್ರಾಣಲಿಂಗವನ್ನು ಅರುಹಿಕೊಡುವ ದೀಕ್ಷೆ ೩೬೩

**ಹಗರಣ** (ಸಂ: ಪ್ರಕರಣ) ನಾಟಕ, ನಟನೆ ೩೦೦,೮೯೧

**ಹಗರಣಿಗ** ನಾಟಕಕಾರ, ಪಾತ್ರಧರಿಸುವವ ೨೧೮

**ಹಗಹ** ಹಗೆ ೩೧೬

**ಹಂಗು** ಪರವೆ; ಕೃತಜ್ಞತೆ ೩೯೦, ೫೦೮; ಆಶ್ರಯ, ಆಸೆ ೮೮೭

**ಹಂಚುಹಜ್ಜು** ಒಡೆದ ಹಂಚಿನಂತೆ ಚೂರು ಚೂರು ೪೭

**ಹಂಜರ** ಪಂಜರ ೧೬೩

**ಹಡಿಕೆ** ದುರ್ವಾಸನೆ ೩೧೩

**ಹಣಿದ** ಹೊಡೆದಾಟ ೬೨೯

**ಹತ್ತೆ** ಸಮೀಪಕ್ಕೆ ೨೪೫

**ಹದುಳವಿರು** ಸುಖದಿಂದಿರು ೨೪೧

**ಹದುಳಿಗ** ತೃಪ್ತಿಯುಳ್ಳವ ೧೧೮ ೬೬೦

**ಹಂದೆ** ಹೇಡಿ ೬೬೮,೭೦೫

**ಹನ್ನಿಬ್ಬರು** ಹನ್ನೆರಡು ಜನರು ೧೬

**ಹಮ್ಮು** (ಸಂ: ಅಹಂ?) ಸೊಕ್ಕು, ಗರ್ವ, ಅಹಂಕಾರ ೧೯೦,೮೬೮

**ಹರಕೆ** ಶುಭವನ್ನು ಕೋರುವುದು, ದೇವರಲ್ಲಿ ಪ್ರಾರ್ಥನೆ ೧೨೯

**ಹರಗಣ** ಶಿವನ ಗಣಗಳು; ಶಿವಶರಣರು ೪೩೯

**ಹರದ** ವರ್ತಕ, ವ್ಯಾಪಾರಿ ೯೩೮
**ಹರಬೀಜ** ಶಿವನ ಸಂತಾನ; ಶಿವಸಭಕ್ತ ೬೬೮
**ಹರಿ** ಎಳಸು, ಆಶಿಸು ೩೪
**ಹರಿ** ಬಳಗ; ಪರವೆ ೩೯೦
**ಹರುಷಿತಿಕೆ** (ಹರುಷಿತ + ಇಕೆ) ಆನಂದ ೮೦೯
**ಹರೆ** ಹಲಗೆ, ನಗಾರಿ ೨೦೬
**ಹಲಗೆ** "ಢಾಲು" ೭೨೫
**ಹವಣಿಸು** ತೂಗು; ಉಪಮಿಸು, ೫೨೪
**ಹವಿ** ಯಜ್ಞದ ಬೆಂಕಿಯಲ್ಲಿ ಹಾಕುವ ತುಪ್ಪ ಹಾಲು ಮೊದಲಾದ ಪದಾರ್ಥಗಳು ೭೮೭,೫೮೬
**ಹಳಚು** ಒಂದಕ್ಕೊಂದು ತಾಕಲಾಡು ೫೪೧
**ಹಳೆಯ** ಹಿರಿಯ, ಪುರಾತನ ೨
**ಹಾಗ** ಒಂದು ನಾಣ್ಯ ೧೫೮
**ಹಾರು** ಎದುರು ನೋಡು, ಆಶಿಸು ೭೬೩,೬೬೯
**ಹಾರುವ** (೧) (ಹ: ಪಾರ್ವ) ಬ್ರಾಹ್ಮಣ (೨) ಹಾರೈಸುವವ ೩೩೪,೩೧೯
**ಹಾವ[ವಾ]ಡಿಗ** ಹಾವಾಡಿಸುವವ ೧೦೫
**ಹಾಸು** ನೂಲು ತೋಡುವ, ಕೆಚ್ಚುವಯಂತ್ರ ೯೯೧
**ಹಿಂಗು** ಕಾಣದಾಗು; ಶಾಂತನಾಗು ೩೭, ಬಿಡು, ತ್ಯಾಗಮಾಡು ೭೩೩; ಹಿಂದಿರುಗು, ತೊಲಗು ೭೪೫
**ಹಿಡಿಕಂಡ** ಸಣ್ಣ ಸಣ್ಣ ತುಣುಕು
**ಹಿದಿರೆ** ಬಣವೆ (?) ೩೧೩
**ಹಿರಣ್ಯ** ಬಂಗಾರ (ಧನಾಢ್ಯ) ೭೦೫
**ಹಿಳಿ** ಹಿಂಡು; ಹಿಡಿ ಒಪ್ಪಮಾಡು ೫೬೭
**ಹುದುವಾಳು** ಕೂಡಿಕೊಂಡು ಬಾಳುವುದು ೧೬೦
**ಹುಯ್ಯಲು** ಮೊರೆ, ದುಃಖದ ಧ್ವನಿ, ಆರ್ತನಾದ ೯,೪೭
**ಹುರುಳು** ಸತ್ವ, ತಿರುಳು ೧೧೨
**ಹುಲು** ಹುಲ್ಲಿನಂತೆ ಕ್ಷುದ್ರ, ತುಚ್ಛ ೧೫
**ಹುಲ್ಲೆ** ಚಿಗರಿ ಜಿಂಕೆ ೭೪೬
**ಹುಳ್ಳಿ** ಉರುವಲಕಟ್ಟಿಗೆ ೪೭೦
**ಹೂಸು** ಲೇಪಿಸು, ಹೊದೆದು ಕೊಳ್ಳು ೧೧೪,೪೯೮
**ಹೆಗ್ಗುರಿ** ದೊಡ್ಡ ಕುರಿ; ಅತಿ ಮೂರ್ಖ ೨೨೧
**ಹೆಡಗುಡಿ** ಹೆಡಮುರಿಗೆ ೩೯೭
**ಹೆಣಗಾಟ** ಬಡಿದಾಟ ೯೦೫
**ಹೆಪ್ಪೊಳೆ** ದೊಡ್ಡ ನದಿ ೧೬೯
**ಹೆಂಪು** (=ಸೊಂಪು) ವಿಲಾಸ ವೈಭವ ೫೬೪
**ಹೆಜತೊಲಗು** ಒಂದಕ್ಕೆ ಸರಿ; ಒರೆಯಾಗು ೭೪೯

ಹೇಱಿಹಿಂಗು ಹಿಂದಕ್ಕೆ ಸರಿ ಕಡಿಮೆಯಾಗು ಅರೆಯಾಗು ೧೭೭
ಹೆಱು ಹಡೆ, ಹೊಂದು ೧೫೯
ಹೇಗತನ ಹುಚ್ಚು, ಮೂರ್ಖತನ ೩೫೯
ಹೇಯ ತಿರಸ್ಕರಿಸತಕ್ಕ ೧೭
ಹೇಱು ಭಾರ ೬೩೩
ಹೇಮ ಲಜ್ಜೆ, ನಾಚಿಕೆ
ಹೇ[ವ]ಣು ಭಂಗಾರ ೫೫೮, ೯೦೮
ಹೇಳಿಗೆ ಹಾವನ್ನು ಇಡುವ ಹಾವುಗಾರನ ಬುಟ್ಟಿ ೧೬೦
ಹೊಗಳತೆ ಹೊಗಳಿಕೆ, ಪ್ರಶಂಸೆ ೩೨೬
ಹೊಟ್ಟೆ 'ಒಟ್ಟೆ', ಬಾವು ೫೫೪
ಹೊತ್ತಾಱ ನಸುಕಿನಲ್ಲಿ ೧೧೭
ಹೊದ್ದು ಹೊಂದು ಕೂಡು, ಸೇರು ೯೧೧
ಹೊನಲು ಪ್ರವಾಹ (ನದಿಯು) ನೀರಿನ ಸೆಳೆತ ೫೮೭
ಹೊಂದಿಕೆ ಕೂಟ ೭೬೨
ಹೊಂದು ಸಾಯು ೬೭೪
ಹೊರೆ ಹೊದಿಕೆ, ಪರೆ ೫೨೩
ಹೊರೆ ಪ್ರೋಕ್ಷಿಸು ೧೭, ೭೫೮
ಹೊರೆ ಸಾನ್ನಿಧ್ಯ, ಸಾಮೀಪ್ಯ, ನೆರೆ ೧೩೨
ಹೊಱಮಡು ಹೊರಗಿನಿಂದಲೆ ಪೋಗು; ಹೊರಗೆ ಪೋಗು ೪೨೭
ಹೊಱಸು ಪಾರಿವಾಳ, ಕಪೋತ (ಅಶುಭ ಸೂಚಕ ಪಕ್ಷಿ) ೧೮
ಹೊಲತಿ ಹೊಲೆಯುಳ್ಳವಳು, ರಜಸ್ವಲೆಯಾದವಳು ೯೬೨
ಹೊಲಬಿಗ ಸರಿಯಾದುದನ್ನು ತಿಳಿದವ ೧೩೫
ಹೊಲಬು ಸರಿಯಾದ ಕ್ರಮ, ದಾರಿ ೩೬೫
ಹೊಲಬುಗೊಳ್ ಕ್ರಮವಿಡಿ, ದಾರಿಹಿಡಿ ೧೮೦
ಹೊಲೆ ಸ್ತ್ರೀಯರ ಮುಟ್ಟು, ರಜಸ್ಸು ೧೯೧
ಹೊಱಹಂಚಿ ಹೊರಗಿನ ಬಣ್ಣದ ಮೆರುಗು ೩೦೫
ಹೊಸತು ಹೊಸ ಅಥವಾ ಮೀಸಲು ಪದಾರ್ಥ (ಪೂಜೆಯ ಕಾಲಕ್ಕೆ ದೇವರ ಮುಂದೆ ಇಡುವ ಪದಾರ್ಥಗಳು ೧೯೫
ಹೊಲ್ಲ ಕೆಟ್ಟದ್ದು, ಸರಿಯಲ್ಲದ್ದು ೮೭, ೬೧೮
ಹೊಳ್ಳು ಪೊಳ್ಳು, ಒಳಗೆ ಬರಿದಾಗಿರುವುದು ೨೦೨, ೫೫೪
ಹೊಳ್ಳುಹಾಯಿ ವ್ಯರ್ಥವಾಗಿ ಹೋಗು ೨೦೨
ಹೋಱು ಬಡಿದಾಡು ೨೫೬



# ತಪ್ಪು ಒಪ್ಪು

| ಪುಟ. | ಪ್ರಸ್ತಾವನೆಯ ಸಾಲು | ಅಶುದ್ಧ | ಶುದ್ಧ |
|---|---|---|---|
| ೧ | ೭ | ಅಪೂನ್ವ | ಅಪೂರ್ವ |
| ೨ | ೨೦ | ವಾಬಯು | ವಾಙ್ಮಯ |
| ೪ | ೧೩ | ಸಂಗಯಾಗಿದೆ | ಸಂಗತಿಯಾಗಿದೆ |
| ೬ | ೧೦ | ಸಂಪಾದಕ್ಕಾಗಿ | ಸಂಪಾದನಕ್ಕಾಗಿ |
| ೧೦ | ೨೭ | ತಿಳಿದುಕೊಳ್ಳತಕ್ಕದ್ದು | ತಿಳಿದುಕೊಳ್ಳತಕ್ಕದು |
| ೨೧ | ೫ | ಕನ್ನಚ | ಕನ್ನಡ |
| ೨೨ | ೪ | ದಕ್ಕಾಗಿ | ಅದಕ್ಕಾಗಿ |
| ೨೭ | ೩ | ವಿಚನಗಳು | ವಚನಗಳು |
| ೨೭ | ೨೨ | ಪಾದಾಪಾದವಾಗಿ | ಪಾವಪಾದವಾಗಿ |
| ೨೯ | ೬ | ,, | ,, |
| ೩೫ | ೪ | ಸಹ್ತ | ಹಸ್ತ |
| ೩೭ | ೨೩ | ಸುಗುಮುವಾಗು | ಸುಗಮವಾಗು |
| ೩೮ | ೯ | ಸಂದೇ ಲ್ಲ | ಸಂದೇಹವಿಲ್ಲ |
| ೩೮ | ೧೧ | ತಿ ಥಕ್ಕೆ | ತಿವನಪಥಕ್ಕೆ |
| ೩೮ | ೧೫ | ರೀರಿ | ರೀತಿ |
| ೩೯ | ೧೨ | ಸಂಪೂಣರ್ವಾ | ಸಂಪೂರ್ಣವಾಗಿ |
| ೪೮ | ೯ | ಛಾಯಾಕ್ರ | ಛಾಯಾಚಿತ್ರ |

| ಪುಟ | ವಚನದ ಒಟ್ಟು ಸಂಖ್ಯೆ ಮತ್ತು ಸಾಲು | ಸ್ಪಷ್ಟ ಸ್ಥಳದ ವಚನಗಳು | |
|---|---|---|---|
| ೬೫ | ೨೫೯-೧೩ | ಜೀವವಿಕಾರ | ಜೀವವಿಕಾರಿ |
| ೭೩ | ೨೯೧-೧೩ | ಪುಲ್ಲೆಂಬೆನೆ | ಹೊಲ್ಲೆಂಬೆನೆ |
| ೭೬ | ೩೦೧- ೮ | ನಿಮ್ಮ | ನಮ್ಮ |
| ೮೦ | ೩೧೬- ೪ | ಸಂಗಯ್ಯನ | ಸಂಗಯ್ಯ |
| ೮೦ | ೩೧೭- ೬ | ಸೊಲ | ಸೋಲ |

| | | | |
|---|---|---|---|
| ೧೦೦ | ೩೯೭—೧ | ಓಡು ಬಲ | ಓಡ ಬಲ |
| ೧೦೧ | ೪೦೧—೧ | ನೀನೇಬಲ್ಲ | ನೀನೇಬಲ್ಲಿರಿ |
| ೧೦೫ | ೪೨೦—೩ | ನೀರೆಜ್ಞಿತಿಪರಿ | ನೀರನೆಜ್ಞಿತಿಪರಿ |
| ೧೧೦ | ೪೩೪—೧೨ | ದೇವದಿಂತವ | ದೇವನಿಂತವ |
| ೧೧೨ | ೪೪೨—೫ | ಚಂಪ್ರಸೈತ್ಯವಲು | ಚಂಪ್ರಸ ಸೈತ್ಯವಲು |
| ೧೧೫ | ೪೫೩—೧ | ಲಿಂಗಾಂಗಿಗಳಿಲ್ಲ | ಲಿಂಗಾಂಗಿಗಳಲ್ಲ |
| ೧೧೫ | ೪೫೭—೫ | ಧರಿಸಿದವರ | ಧರಿಸದವರ |
| ೧ ೯ | ೪೭೧—೧ | ನಿಷ್ಮ | ನಿಮ್ಮ |
| ೧೨೦ | ೪೭೮—೧೨ | ಭಕ್ತ ಅಸ | ಅಸು ಭಕ್ತ |
| ೧೨೯ | ೫೧೧—೨೧ | ದರ್ಪಣ | ಧರ್ಪಣ |
| ೧೩೯ | ೫೪೪—೨೦ | ದೇನನಲ್ಲದೆ | ದೇವನಲ್ಲದೆ |
| ೧೪೨ | ೫೫೪—೩ | ಡಿಂಗು | ಡಿಂಬು |
| ೧೪೭ | ೫೫೫—೧೬ | ಮಾರಯ್ಯ | ಮಾಳಯ್ಯ |
| ೧೪೭ | ೫೭೧—೧ | ಆದಿವೃರಾಣ | ಆದಿಪುರಾಣ |
| ೧೫೦ | ೫೮೧—೪ | ತೆರವಲ್ಲಿ | ನೆರೆದಲ್ಲಿ |
| ೧೫೪ | ೫೯೪—೨೦ | ಇದೋಕೊ | ಇದೇಕೊ |
| ೧೫೫ | ೫೯೭—೨೧ | ಪ್ರಣವ ಭರ್ಗೋ | ಪ್ರಣವ ಓಂ ಭರ್ಗೋ |
| ೧೬೬ | ೬೩೪—೧೩ | ಶಿವನಾದಿಯಂತವ | ಶಿವನಾದಿಯಂತುವ |
| ೧೬೯ | ೬೪೬—೧೫ | ದೃಷ್ಟ | ದಿಷ್ಟ |
| ೧೭೨ | ೬೫೮—೧೩ | ಬೆವರಟ್ಟೆ | ಬೆವರ್ತಿಟ್ಟೆ |
| ೧೭೫ | ೬೭೧—೨೧ | ಈಭಕ್ತನಾದರೆ | ಭಕ್ತನಾದರೆ |
| ೧೭೫ | ೬೭೧—೨೨ | ಸುಡಿಯೊಳಗೆ | ಈ ಸುಡಿಯೊಳಗೆ |
| ೧೭೬ | ೬೭೪—೧೧ | ಹೋಹರೆ | ಹೋಹರ |
| ೧೮೪ | ೭೦೫—೧೬ | ಕೊಳಗುಳವ | ಕೊಳುಗುಳವ |
| ೧೮೯ | ೭೨೧—೫ | ಜಂಗಮುವನರತ | ಜಂಗಮುವನವರತ |
| ೨೦೫ | ೭೮೧—೬ | ಮಹಘೋರೆ | ಮಹಾಘೋರೇ |
| ೨೧೦ | ೭೯೭—೧೩ | ಮಾತಿಸಲೆ | ಮಾತಿಸಲೇ |
| ೨೧೬ | ೮೭೧—೧೦ | ಎಂದಿಪ್ಪೆಸು | ಎಂದಿಪ್ಪೆನು |
| ೨೧೮ | ೮೩೧—೧೬ | ತೊತ್ತಲಿಸಿದರೆ | ತೊತ್ತಲಸಿದರೆ |
| ೨೧೯ | ೮೩೪—೧೧ | ಮಾವಂತ | ಮಾವಂತಃ |

# ತಪ್ಪು ಒಪ್ಪು

| | | | |
|---|---|---|---|
| ೨೧೯ | ೮೩೫-೧೫ | ಸು:ಂದೊಡ್ಡಿದರಯ್ಯಾ | ಮುಂದೊಂಡ್ಡಿದರಯ್ಯಾ |
| ೨೨೦ | ೮೩೯-೭೨ | ಸ್ವ ರೂವು | ಸ್ವರೂಪು |
| ೨೨೪ | ೮೫೩- ೮ | ಆವಿಸುಕ್ತಿಕ್ಷೇತ್ರ | ಅವಿಮುಕ್ತಕ್ಷೇತ್ರ |
| ೨೨೮ | ೮೬೪-೮೨ | ಓಂಗಮ | ಓಂಗಡು |
| ೨೩೦ | ೮೬೨- ೫ | ಶರಣರ | ಶರಣಸ |
| ೨೩೨ | ೮೮೧-೨೦ | ಸುಡದಿಪ್ಪುದೆ | ಸುಡದಿಪ್ಪುದೆ |
| ೨೩೩ | ೮೮೬-೧೬ | ಆವಧಾನಿ | ಅವಧಾನಿ [ಯ] |
| ೨೩೭ | ೮೯೮-೧೧ | ಶತ್ಯಶರಣರ | ಸತ್ಯ ಶರಣರ |
| ೨೨೮ | ೮೬೨-೧೨ | ಹಿಂಗಮ | ಹಿಂಗಡು |
| ೨೩೭ | ೮೯೬-೧೭ | ಶತ್ಯ | ಸತ್ಯ |
| ೨೪೪ | ೯೨೬-೨೦ | ಪಸಿಯುಸಂಕಲೆಯಾಗಿದ್ದಲ್ಲಿ | ಪಸಿಯು ಸಂಕಲಿಯನಿಕ್ಕಿದಲ್ಲಿ |
| ೨೪೪ | ೯೨೬-೨೨ | ಪರಾತ್‌ಪರಿಕ್ಷೆ | ಪರಾಪರಕ್ಕೆ |
| ೪೨೮ | ೯೩೬- ೨ | ತಿಖಿ | ಶಿರವು |
| ೪೨೮ | ೯೩೬- ೩ | ಎನ್ನಯೆ | ಎನ್ನಯ್ಯ |
| ೨೫೧ | ೯೪೯-೧೩ | ೪೪೯ | ೯೪೯ |

—

## ಧಾರವಾಡ
## ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ

# ಪ್ರಕಟನೆಗಳು

೧. ಚೆನ್ನಬಸವಪುರಾಣ — ಸಂಪಾದಕರು : ಪ್ರಾ. ಶಿ. ಶಿ. ಬಸವನಾಳ
೨. ಪ್ರಭುಲಿಂಗಲೀಲೆ (ದ್ವಿತೀಯ ಮುದ್ರಣ) ,, ,,
೩. ಶಬರಶಂಕರವಿಳಾಸ (ದ್ವಿತೀಯ ಮುದ್ರಣ) ,, ,,
೪. ವೀರಶೈವ ತತ್ತ್ವಪ್ರಕಾಶ ,, ,,
೫. ರಕ್ಷಾಶತಕ ಪಂಪಾಶತಕ (ದ್ವಿತೀಯ ಮುದ್ರಣ) ,, ,,
೬. ಬಸವಣ್ಣನವರ ಷಟ್‌ಸ್ಥಲ ವಚನಗಳು (ಸಾಮಾನ್ಯ ಸಂಸ್ಕರಣ)
೭. ಬಸವಣ್ಣನವರ ವಚನಗಳ (ಗ್ರಂಥಾಲಯ ಸಂಸ್ಕರಣ)
೮. ಬಸವಣ್ಣನವರ ಹೆಚ್ಚಿನ ವಚನಗಳು (ಸಾಮಾನ್ಯ ಸಂಸ್ಕರಣ)
೯. ಗಿರಿಜಾಕಲ್ಯಾಣ ,, ಡಾ. ಶಿ. ಚ. ನಂದೀಮಠ
೧೦. ಶಂಕರದಾಸಿಮಾರ್ಯರ ಪುರಾಣ ,, ಶ್ರೀ ವೀ. ಬ. ಹಾಲಭಾವಿ
೧೧ ಹರಿಹರನ ರಗಳೆಗಳು

1. Musings of Basawa : *Edited by S. S. Basawanal & Dr. K. R Shrinivasa Iyengar*
2. Memoir of Raja-Saheb of Wantmuri —*Dr. K. R. Shrinivas Iyengar*
3. Hand Book of Virashaivism : *Dr. S. C. Nandimath*
4. Commemoration Volume (Comprising of the above three books)

## —ಮುಂದಿನ ಪ್ರಕಟನೆ—

೧. ಪ್ರಭುಲಿಂಗಲೀಲೆ (ಚಾಮರಸ ಕೃತ)
೨. ಬಸವಪುರಾಣ (ಭೀಮಕವಿ ಕೃತ) ಅಚ್ಚಿಗೆ ಸಿದ್ಧವಾಗುತ್ತಿದೆ